ಶ್ರೀಃ.

ಕರ್ಣಾಟಕನಂದಿನೀ ಗ್ರಂಥಮಾಲಾ ಸಂಖ್ಯೆ ೨.

# ರಘುನಾಥಸಿಂಹ.

ಎಂ. ಟಿ. ವಲ್ಲಭಯ್ಯಂಗಾರ್ಯರಿಂದ
ಕನ್ನಡಿಸಲ್ಪಟ್ಟುದು

ನಂಜನಗೂಡು
ನಂದಿನೀ—ಹಿತೈಷಿಣೀ
ಮಾತೃಮಂದಿರದಲ್ಲಿ ಪ್ರಕಟಿಸಲ್ಪಟ್ಟುದು.

ದ್ವಿತೀಯ ಮುದ್ರಣ ೧,೫೦೦ ಪ್ರತಿಗಳು




೧೯೨೨



ಕ್ರಯ ೧ ೧೨ ೦] [ವಿ. ಪಿ. ಹಾಸಲು ೦ ೬ ೦

EDITED AND PUBLISHED

BY

**SHRIMATI TIRUMALAMBA**

**AT THE 'SATI HITAISHINI' MATRUMANDIRAM**

**NANJANGUD**

AND PRINTED BY

K, SINGLACHARYA AT THE CITY PRESS

PRINTERS & PUBLISHERS, BANGALORE CITY.

1922 JUNE.







॥ ಶ್ರೀಃ ॥

ವಂದೇತ್ವಾಂ ಭೂದೇವಿ ಆರ್ಯಮಾತರಮ್ ।
ಜಯತು ಜಯತು ಪದಯುಗಲಂ ತೇ ನಿರಂತರಮ್ ॥



" ಗಂಧೋಜ್ವಲಾಂ ಗಹನಕುಂತಲ ದರ್ಶನೀಯಾಂ ।
ಶೈಲಸ್ತನೀಂ ತರಳ ನಿರ್ಝರ ಲಂಬಹಾರಾಮ್ ॥
ಶ್ಯಾಮಾಂ ಸ್ವತಸ್ತ್ರಿಯುಗ ಸೂಕರಗೇಹಿನೀ ತ್ವಂ ।
ವ್ಯಕ್ತಿಂ ಸಮುದ್ರ ವಸನಾಮುಭಯೀಂ ಬಿಭರ್ಷಿ ॥"

---

## ಸಮರ್ಪಣೆ.

ನನ್ನ ಪರಮಗುರುಗಳೂ ಹಿತಾಕಾಂಕ್ಷಿಗಳೂ ಆಗಿದ್ದು
ಶ್ರೀಮದ್ರಾಮಾಯಣ ಪಾರಾಯಣ ಮಾಡುತ್ತಿರುವಾಗಲೇ ಶ್ರೀ ಮದಾಚಾರ್ಯರ
ತಿರುವಡಿಯನ್ನೈದಿದ ನನ್ನ ತೀರ್ಥಪಾದರು

**ಮುಡುಂಬೆ ತಿರುಮಲಾಚಾರ್ಯರವರ**

ಜ್ಞಾಪಕಾರ್ಥವಾಗಿ
ಈ ಗ್ರಂಥವು ಸಮರ್ಪಿಸಲ್ಪಟ್ಟಿದೆ

ಗ್ರಂಥಕರ್ತ.

# ಪೀಠಿಕೆ.



ಇದೊಂದು ಐತಿಹಾಸಿಕ ಕಾದಂಬರಿ; ಛತ್ರಪತಿ ಶ್ರೀ ಶಿವಾಜಿಮಹಾರಾಜರ ಆಳ್ವಿಕೆಯಲ್ಲಿ ಪ್ರಸಿದ್ಧ ಸರದಾರ ರಘುನಾಥಸಿಂಹನ ಜೀವನಚರಿತ್ರೆ.

ನಮ್ಮ ಕಥಾನಾಯಕನು ರಾಜಪುತ್ರನು. ನೊರೆಯ ಮಗನಾಗಿ ಹುಟ್ಟಿದರೂ ಕಡುಕಷ್ಟಕ್ಕೆ ಗುರಿಯಾಗಿ, ಕೊನೆಗೆ ಸ್ವಾಮಿಭಕ್ತಿಯಿಂದ ಪ್ರಸಿದ್ಧಿಗೆ ಬಂದನು. ಆತನ ಧೈರ್ಯಸ್ಥೈರ್ಯಾದಿ ಗುಣಗಳು ಇದರಲ್ಲಿ ವರ್ಣಿತಗಳಾಗಿವೆ. ಆತನ ತಂಗಿಯಾದ ಲಕ್ಷ್ಮೀದೇವಿಯು ರಾಜದ್ರೋಹಿಯಾದ ಒಬ್ಬ ಸರದಾರನನ್ನು ಮದುವೆಯಾಗಿದ್ದರೂ ಪತಿಭಕ್ತಿಪರಾಯಣೆಯಾಗಿ ಕೊನೆಗೆ ಪತಿಯೊಡನೆ ಸಹಗಮನ ಮಾಡಿದ ಪತಿವ್ರತಾ ಶಿರೋಮಣಿ! ಆರ್ಯವನಿತೆಯರಿಗೆ ಭೂಷಣವಾಗಿರುವ ಪತಿಶುಶ್ರೂಷೆಯೂ ಆತ್ಮತ್ಯಾಗವೂ ಈಕೆಯಲ್ಲಿ ವಿಶೇಷವಾಗಿ ಕಂಗೊಳಿಸುವುವು ಈಕೆಯ ಗಂಡನೇ ರಾಜದ್ರೋಹಿಯಾದ ಚಂದ್ರರಾಯನು ದ್ರೋಹಿಯು ಮಾಡುವ ನೀಚತನವು ಪ್ರಕಾಶಕ್ಕೆ ಬಂದು ಕೆಲಸಕ್ಕೆ ತಕ್ಕ ಫಲವನ್ನು ಪಡೆದನೆಂದು ಹೇಳುವುದು ಆಶ್ಚರ್ಯವಲ್ಲ. ಏಕೆಂದರೆ, ಸತ್ಯಕ್ಕೆ ಎಂದಿಗೂ ಚ್ಯುತಿಯಿಲ್ಲವೆಂಬುದು ಇದರಿಂದ ವ್ಯಕ್ತವಾಗದಿರದು.

ದ್ರೋಹಿಗಳು ಮಾಡುವ ಕಾಪಟ್ಯದಿಂದ ಸಜ್ಜನರು ಕೆಲವು ಕಾಲದವರೆಗೆ ತೊಂದರೆಗಳನ್ನು ಅನುಭವಿಸಿದರೂ ಕೊನೆಗೆ ಜಗದೀಶನು ಕಾಪಾಡುವನೆಂಬ ವಿಷಯವು ನಮ್ಮ ಕಥಾನಾಯಕನಾದ ರಘುನಾಥಸಿಂಹನಲ್ಲಿ ವರ್ಣಿತವಾಗಿದೆ. ಶ್ರೀ ಶಿವಾಜಿ ಮಹಾರಾಜರ ಆಳ್ವಿಕೆಯಲ್ಲಿ ನಡೆದ ಮುಖ್ಯವಿಷಯಗಳಲ್ಲಿ ಇದೂ ಒಂದು.

ಇದು ವಂಗಭಾಷೆಯಲ್ಲಿ ಪ್ರಸಿದ್ಧಲೇಖಕರಾದ ಶ್ರೀಯುತ್ ರೊಮೇಶಚಂದ್ರ ದತ್ತರವರಿಂದ ಬರೆಯಲ್ಪಟ್ಟ "ಜೀವನ ಪ್ರಭಾತ" ವನ್ನು ಅನುಸರಿಸಿ ಬರೆಯಲಾಗಿದೆ. ಈ ಮಾತೃಕೆಯನ್ನು ಆಂಧ್ರಭಾಷೆಯಲ್ಲಿ ನನಗೆ ಒದಗಿಸಿಕೊಟ್ಟು, ಭಾಷಾಂತರಿಸಲು ಅನುಮತಿಯನ್ನಿತ್ತ ತೆನಾಲಿ ಆಖ್ಯಾಯಿಕಾನಿಲಯದ ವ್ಯವಸ್ಥಾಪಕರಾದ ಶ್ರೀಯುತ್ ಶಿವಶಾಸ್ತ್ರಿಗಳವರಿಗೆ ತುಂಬ ಕೃತಜ್ಞನಾಗಿರುತ್ತೇನೆ.

ಈ ಪುಸ್ತಕವನ್ನು ತಮ್ಮ ಅನೋಘವಾದ ಕರ್ಣಾಟಕನಂದಿನಿಯಲ್ಲಿ ಪ್ರಕಾಶಗೊಳಿಸಲು ಉಪಯುಕ್ತವಾದ ಸಲಹೆಗಳನ್ನು ಕೊಟ್ಟು, ಪರಿಷ್ಕರಿಸಿ, ಪ್ರಕಟಿಸಿ ಉಪಕರಿಸಿರುವ ಏತತ್ಪತ್ರಿಕಾ ಸಂಪಾದಕಿಯರಾದ ಶ್ರೀಮತಿ ತಿರುಮಲಮ್ಮನವರ ಉಪಕಾರವು ಚಿರಸ್ಮರಣೀಯವಾಗಿರುವುದು.

ಇದರಲ್ಲಿ ನ್ಯೂನಾತಿರಿಕ್ತ ದೋಷಗಳೇನಾದರೂ ಇದ್ದರೆ. ಸಹೃದಯ ವಾಚಕರು ಅದನ್ನು ಸೂಚಿಸಿದಲ್ಲಿ ಕೃತಜ್ಞನಾಗಿ ಅವರ ಸೂಚನೆಯಂತೆ ಮುಂದಣ ಮುದ್ರಣದಲ್ಲಿ ಸವರಿಸುವೆನು.

ಮಾಗಡಿ
12-7-1922.

ಇತಿ ಸಜ್ಜನವಿಧೇಯ,
ಎಂ. ಟಿ. ವಲ್ಲಭಯ್ಯಂಗಾರ್.

---

ಶ್ರೀಃ.

# ವಿಷಯಾನುಕ್ರಮಣಿಕೆ.

# ನಿವೇದನ.



ಈ ಗ್ರಂಥವು ಕರ್ಣಾಟಕ ನಂದಿನಿಯ ತೃತೀಯ ಸಂಪುಟದ ೮-೧೧ ಸಂಚಿಕೆಗಳಲ್ಲಿ ಪ್ರಕಟವಾಗಿದ್ದಿತು. ಐತಿಹಾಸಿಕ ಕಾದಂಬರಿಯಾದ ಇದನ್ನು ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸುವದು ಯುಕ್ತವೆಂದು ನಮ್ಮ ಹಿತಚಿಂತಕರನೇಕರು ಸೂಚಿಸಿದುದರಿಂದ ಇದನ್ನಿಂದು ಸ್ವತಂತ್ರ ಪುಸ್ತಕವಾಗಿ ಪ್ರಕಟಿಸಲಾಯಿತು. ನಮ್ಮ ಸೋದರ ಸೋದರಿಯರು ಸಾವಧಾನದಿಂದ ಈ ಗ್ರಂಥವನ್ನವಲೋಕಿಸಿ ಇದರ ಉಪಯುಕ್ತತೆಯನ್ನು ಹೊಂದುವುದರೊಳಗಾಗಿ ಇದಕ್ಕೂ ಉತ್ತಮವೂ ವಿಸ್ತೃತವೂ ಆದ "ವಿಮಲಾದೇವಿ" 'ಇರಾವತಿ' ಎಂಬ ಐತಿಹಾಸಿಕ ಗ್ರಂಥಗಳೆರಡೂ ಪ್ರಸಿದ್ಧವಾಗುವುವು.

ಈ ಗ್ರಂಥವು ಪ್ರಥಮ ಮುದ್ರಣದಲ್ಲಿದ್ದುದಕ್ಕೂ ಹೆಚ್ಚಾದ ಮುದ್ರಣದೋಷಗಳಿಂದ ಕೂಡಿರುವುದೆಂದು ಆಗ್ರಹಿಸಬಾರದು. ಮುದ್ರಾಲಯದವರ ಅನೇಕ ವಿಧವಾದ ಅನಾನುಕೂಲತೆಗಳಿಂದ, ಪ್ರಮಾದ ವಶದಿಂದ ಕಂಡುಬರುವ ದೋಷಗಳಿಗೆ, ವ್ಯಾಕರಣ ವಿರುದ್ಧವಾದ, ಅರ್ಥ ವಿಪರ್ಯಾಸವಾಗುವ ತಪ್ಪುಗಳನ್ನು ಮಾತ್ರ ಇವರ ಶುದ್ಧ ಪತ್ರಿಕೆಯಲ್ಲಿ ತೋರಿಸಿರುವೆವು. ಉಳಿದ--ಎಂದರೆ ವಿರಾಮಚಿಹ್ನೆ, ಆವರಣ ಚಿಹ್ನೆಗಳೇ ಮೊದಲಾದುವುಗಳು ಬಿಟ್ಟು ಹೋಗಿರುವುದನ್ನೂ ಅಕ್ಷರಗಳು ಬಹು ಹಳೆಯದಾದುದರಿಂದ ಅಲ್ಲಲ್ಲಿ ಅಸ್ಪಷ್ಟವಾಗಿಯೂ ಅರ್ಧಾಕ್ಷರವಾಗಿಯೂ ಕಾಣುವುದನ್ನೂ ಕುರಿತು ಆಗ್ರಹಿಸದೆ ದಯೆಯಿಟ್ಟು ಕ್ಷಮಿಸಬೇಕೆಂದೂ ಇನ್ನು ಮುಂದಿನ ಗ್ರಂಥಗಳಿಗೆ ಹೊಸ ಅಕ್ಷರಗಳನ್ನು ಉಪಯೋಗಿಸಿ, ಅಂದವಾಗಿಯೂ ಶುದ್ಧವಾಗಿಯೂ ಪ್ರಕಟಿಸಿ ಇದರಿಂದಾದ ಕೊರತೆಯನ್ನು ತುಂಬಿಸಿಕೊಡಬೇಕೆಂದೂ ನಮ್ಮ ಸಹೃದಯವಾಚಕರಲ್ಲಿ ಸವಿನಯವಾಗಿ ನಿವೇದಿಸುವೆವು.

ಈ ಗ್ರಂಥವನ್ನಿಷ್ಟು ಜಾಗ್ರತೆಯಾಗಿ ದ್ವಿತೀಯ ಮುದ್ರಣವಾಗಲು ಪ್ರೋತ್ಸಾಹಗೊಳಿಸಿದ ಹಿತೇಚ್ಛುಗಳಿಗೂ ಇದನ್ನು ತ್ವರೆಯಾಗಿ ಮುದ್ರಿಸಿಕೊಟ್ಟ ಸಿಟಿ ಮುದ್ರಾ

ಯಂತ್ರದ ವ್ಯವಸ್ಥಾಪಕರಿಗೂ ಚಿರಕೃತಜ್ಞರಾಗಿರುವೆವಲ್ಲದೆ ಸತೀಹಿತೈಷಿಣೀ ಗ್ರಂಥಮಾಲೆಯು ಈವರೆಗಿನ ಪುಸ್ತಕಗಳಿಗೆಲ್ಲಾ ವಿಶೇಷ ಆಶ್ರಯ ಪ್ರೋತ್ಸಾಹ ಸಹಾಯಗಳನ್ನು ಕಲ್ಪಿಸಿಕೊಟ್ಟು ನಂದಿನಿಯನ್ನು ವಿಶೇಷವಾಗಿ ಪ್ರೋತ್ಸಾಹಿಸುತ್ತಲೂ ಬಂದಿರುವ ಶ್ರೀಮತ್ ಮಹಾರಾಜಾ ಸರ್ಕಾರದವರ, ಮೈಸೂರು—ಮದ್ರಾಸು ವಿದ್ಯಾಂಗದವರ ಮಹೋಪಕಾರವನ್ನು ನೆನಸಿ, ಅವರ ಅಭ್ಯುದಯವನ್ನು ಕೋರುವೆವು. ಮತ್ತು ದೇಶೀಯ ಭ್ರಾತೃ-ಭಗಿನಿಯರ ಪ್ರೋತ್ಸಾಹವು ದೊರೆದಂತೆಲ್ಲಾ ಕರ್ಣಾಟಕನಂದಿನಿಯು ಭಾರತನಂದಿನಿಯೆಂಬ ನಾಮಧೇಯದಿಂದ ಇತೋಽಪ್ಯತಿಶಯವಾದ ಭಾಷಾಸೇವೆಯನ್ನು ಮಾಡುವಳೆಂದೂ ನಿವೇದಿಸಿ ವಿರಮಿಸುವೆವು.

ನಂಜನಗೂಡು,<br>೧೪-೭-೨೨.

ಇತಿ ಹಿತೈಷಿಣಿ.

---

|| ಶ್ರೀಃ

# ರಘುನಾಥಸಿಂಹ.

## ಮೊದಲನೆಯ ಪ್ರಕರಣ.

ಕ್ರಿಸ್ತಶಕ ಹನ್ನೆರಡನೆಯ ಶತಮಾನದ ಅಂತ್ಯಭಾಗದಲ್ಲಿ ಪ್ರಸಿದ್ಧನಾದ ಮಹಮ್ಮದ್ ಘೋರಿಯು ಆರ್ಯಾವರ್ತಪ್ರದೇಶವನ್ನು ಜಯಿಸಿದನು. ಆರ್ಯಾವರ್ತವೆಂದರೆ, ವಿಂಧ್ಯಪರ್ವತದಿಂದ ಹಿಮಾಲಯದವರೆಗೂ ಇರುವ ಪ್ರದೇಶಗಳು. ಆ ವಿಸ್ತಾರವಾದ ಸಾಮ್ರಾಜ್ಯವನ್ನು ಆಳುತ್ತಾ ಮುಸಲ್ಮಾನರು ಒಂದು ಶತಮಾನದವರೆಗೂ ಸುಮ್ಮನಿದ್ದರು. ಬಹಳ ಎತ್ತರವಾದ ಪ್ರಾಕಾರದಂತಿದ್ದ ವಿಂಧ್ಯಪರ್ವತಶ್ರೇಣಿಯನ್ನೂ ದೊಡ್ಡ ಅಗಳತೆಯಂತಿದ್ದ ನರ್ಮದಾನದಿಯನ್ನೂ ದಾಟಿ, ದಕ್ಷಿಣಹಿಂದುಸ್ಥಾನವನ್ನು ಜಯಿಸುವುದಕ್ಕೆ, ಇವರು ಎಷ್ಟುಮಾತ್ರವೂ ಪ್ರಯತ್ನಿಸಿದವರಲ್ಲ. ಆದರೆ, ೧೩ನೆಯ ಶತಮಾನದ ಆದಿಯಲ್ಲಿ ದೆಹಲಿಯ ಯುವರಾಜನಾದ ಅಲ್ಲಾವುದ್ದೀನನು ಎಂಟುಸಾವಿರ ಸೈನ್ಯದೊಡನೆ ನರ್ಮದಾ ನದಿಯನ್ನು ದಾಟಿ, ಹಿಂದೂದೇಶದ ರಾಜಧಾನಿಯಾದ ದೇವಗಡದ ಹತ್ತಿರ ಹಠಾತ್ತಾಗಿ ಬಂದುನಿಂತನು. ಅಲ್ಲಿಯ ರಾಜಪುತ್ರರು ಹೆಚ್ಚಾದ ಸೈನ್ಯದೊಡನೆ ಬಂದು ಅಲ್ಲಾವುದ್ದೀನನನ್ನು ತಡೆದರು. ಆದರೇನು? ರಣರಂಗದಲ್ಲಿ ಹಿಂದುಗಳಿಗೆ ಅಪಜಯವುಂಟಾಯಿತು. ಆಗ ಹಿಂದೂರಾಜನು ಆತನಿಗೆ ವಿಶೇಷವಾಗಿ ಹಣವನ್ನೂ ಇಲಿಚ್‌ಪೂರದ ಪ್ರದೇಶವನ್ನೂ ಕೊಟ್ಟು, ಸಂಧಿಮಾಡಿಕೊಂಡನು. ಅಲ್ಲಾವುದ್ದೀನನು ಸಿಂಹಾಸನವನ್ನು ಹತ್ತಿ, ರಾಜ್ಯಾಧಿಕಾರವನ್ನು ವಹಿಸಿದ ಬಳಿಕ ಆತನ ಸೈನ್ಯಾಧಿಪತಿಯಾದ "ಮಲ್ಲಿಕಾಫೂರ್" ಎಂಬುವನು ದಾಕ್ಷಿಣಾತ್ಯರನ್ನು ಓಡಿಸಿ, ನರ್ಮದಾನದಿಯ ತೀರದಿಂದ ಕನ್ಯಾಕುಮಾರಿಯವರೆಗೂ

ದೇಶವನ್ನು ವಿಸ್ತರಿಸಿದನು. ದೇವಗಡವೇ ಮೊದಲಾದ ಕೆಲವು ಹಿಂದೂರಾಜ್ಯಗಳು ಮುಸಲ್ಮಾನ ಚಕ್ರವರ್ತಿಗಳ ಕೈವಶವಾದುವು.

ಹದಿನಾಲ್ಕನೆಯ ಶತಮಾನದಲ್ಲಿ ಡಿಲ್ಲಿಯ ಚಕ್ರವರ್ತಿಯಾದ 'ಮುಹಮ್ಮದ್ ತಗಲಕ್' ಎಂಬವನು ದೇವಗಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಆತನ ಅವಿವೇಕದ ರಾಜ್ಯಕಾರ್ಯಗಳಿಂದ ಹಿಂದುಗಳಿಗೂ ಮುಸಲ್ಮಾನರಿಗೂ ಸರಿಬೀಳದೆ, ದ್ವೇಷವು ಹೆಚ್ಚಿ, ದಂಗೆಯೆದ್ದಿತು. ಹಿಂದುಗಳು ವಿಜಯನಗರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು, ಒಂದು ಹೊಸರಾಜ್ಯವನ್ನು ಸ್ಥಾಪಿಸಿದರು. ಮುಸಲ್ಮಾನರು ದೌಲತಾಬಾದ್ ರಾಜ್ಯವನ್ನು ಸ್ಥಾಪಿಸಿದರು. ಕ್ರಮವಾಗಿ ಇವೆರಡು ರಾಜ್ಯಗಳೂ ದಕ್ಷಿಣದೇಶದಲ್ಲಿ ಪ್ರಸಿದ್ಧಿಯನ್ನು ಹೊಂದಿದುವು. ಸುಮಾರು ಮುನ್ನೂರು ವರ್ಷಗಳ ವರೆಗೆ ಡಿಲ್ಲಿಯ ಚಕ್ರವರ್ತಿಗಳು ದಕ್ಷಿಣದೇಶವನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಎಷ್ಟು ಪ್ರಯತ್ನಮಾಡಿದರೂ ಸಾರ್ಥಕವಾಗಲಿಲ್ಲ. ದೆಹಲಿಯ ತೊಂದರೆಗಳಿಗೆ ಒಳಗಾಗದಿದ್ದರೂ ದಕ್ಷಿಣಹಿಂದೂ ರಾಜ್ಯಗಳು ಮಾತ್ರ ವಿಪತ್ತುಗಳಿಗೆ ಒಳಗಾಗದೆ ಇರಲಿಲ್ಲ. ಹಿಂದುಗಳು ಮುಸಲ್ಮಾನರಿಗೆ ತಮ್ಮ ದೇಶದಲ್ಲಿ ಸ್ಥಳವನ್ನು ಕೊಟ್ಟರು. ಅವರು ಪ್ರಬಲರಾಗಿ ಹಿಂದುಗಳನ್ನು ಹಿಂಸೆಮಾಡುವುದಕ್ಕೆ ಯಾವಾಗಲೂ ಪ್ರಯತ್ನವನ್ನು ಮಾಡುತ್ತಿದ್ದರು. ದೌಲತಾಬಾದು ರಾಜ್ಯವು ದಿನೇದಿನೇ ಅಭಿವೃದ್ಧಿಸ್ಥಿತಿಗೆ ಬಂದು, ಕಡೆಗೆ, ಬೇರೆಬೇರೆ ರಾಜ್ಯಗಳಾದುವು. ಬಿಜಾಪೂರ, ಗೋಲ್ಕೊಂಡ, ಅಹಮ್ಮದನಗರ —ಎಂಬೀ ಮೂರು ರಾಜ್ಯಗಳು ಸ್ಥಾಪಿಸಲ್ಪಟ್ಟುವು. ೧೫೬೫ನೆಯ ಇಸವಿಯಲ್ಲಿ ಮುಸಲ್ಮಾನರೆಲ್ಲರೂ ಒಟ್ಟಾಗಿ ಸೇರಿ, 'ತಾಳಿಕೋಟೆ' ಎಂಬ ಸ್ಥಳದಲ್ಲಿ ವಿಜಯನಗರದವರೊಡನೆ ಯುದ್ಧವನ್ನು ಮಾಡಿ, ಅವರನ್ನು ಸೋಲಿಸಿ, ಆ ರಾಜ್ಯವನ್ನು ಹಾಳುಗೆಡವಿದರು.

೧೫೯೦ನೆಯ ಇಸವಿಯಲ್ಲಿ ಅಕ್ಬರಚಕ್ರವರ್ತಿಯು ದಕ್ಷಿಣ ದೇಶವನ್ನು ಸ್ವಾಧೀನಪಡಿಸಿಕೊಳ್ಳಲು ಹೊರಟನು. ಆತನು ಸಾಯುವುದಕ್ಕೆ ಮೊದಲೇ ಖಾನ್‌ದೇಶವೂ ಅಹಮ್ಮದ್‌ನಗರದ ಹೆಚ್ಚುಭಾಗವೂ ಸ್ವಾಧೀನವಾಗಿದ್ದುವು. ಆತನ ಮೊಮ್ಮಗನಾದ ಷಹಜಹಾನನು ೧೬೩೬ರಲ್ಲಿ ಅಹಮ್ಮದನಗರವನ್ನು ಸ್ವಾಧೀನಮಾಡಿಕೊಂಡನು. ಆದುದರಿಂದ ನಮ್ಮ ಈ ಚರಿತ್ರೆಯ ಕಾಲಕ್ಕೆ ದಕ್ಷಿಣದೇಶದಲ್ಲಿ ಬಿಜಾಪೂರ, ಗೋಲ್ಕೊಂಡ ರಾಜ್ಯಗಳು ಮಾತ್ರ ಸ್ವಾತಂತ್ರ್ಯವನ್ನು ವಹಿಸಿದ್ದುವು.

ಈ ಬದಲಾವಣೆಗಳ ನಡುವೆ ಈ ದೇಶಸ್ಥಿತಿಯು ಯಾವರೀತಿಯಲ್ಲಿ ಇದ್ದಿತೆಂಬುದನ್ನು ವಾಚಕರಿಗೆ ತಿಳಿಸುವುದು ಅವಶ್ಯಕವಷ್ಟೆ ?

ಮಹಮ್ಮದೀಯರ ರಾಜ್ಯದಲ್ಲಿ ಹಿಂದುಗಳು ಹೀನಸ್ಥಿತಿಯಲ್ಲಿರಲಿಲ್ಲ. ಅವರ ರಾಜಕೀಯ ವ್ಯವಹಾರಗಳು ಮಹಾರಾಷ್ಟ್ರರ ಬುದ್ಧಿಬಲದಿಂದಲೇ ನಡೆಯಿಸಲ್ಪಡುತ್ತಿದ್ದವು. ಒಂದೊಂದು ರಾಜ್ಯವು ಕೆಲವು ಇಲಾಖೆಗಳಾಗಿಯೂ ಒಂದೊಂದು ಇಲಾಖೆ (ಶಾಖೆ) ಕೆಲವು ಉಪಶಾಖೆಗಳಾಗಿಯೂ ವಿಭಾಗಿಲ್ಪಟ್ಟಿದ್ದವು. ಕೆಲವು ಇಲಾಖೆಗಳಲ್ಲಿ ಮುಸಲ್ಮಾನರು ಮಾತ್ರವೇ ಅಲ್ಲದೆ ಹಿಂದುಗಳೂ ಅಧಿಕಾರಿಗಳಾಗಿದ್ದರು. ಅವರೇ ದೊರೆಗಳಿಗೆ ಸಲ್ಲಬೇಕಾದ ಕಪ್ಪಗಳನ್ನು ವಸೂಲುಮಾಡಿ ಕಳುಹಿಸುತ್ತಿದ್ದರು. ಮಹಾರಾಷ್ಟ್ರರ ದೇಶವು ಬೆಟ್ಟ ಗುಡ್ಡಗಳಿಂದ ತುಂಬಿದ್ದಿತು. ಅದರ ಶಿಖರಗಳಲ್ಲಿ ಅನೇಕ ದುರ್ಗಗಳು ಕಟ್ಟಲ್ಪಟ್ಟಿದ್ದವು. ಸುಲ್ತಾನರು ಈ ದುರ್ಗಗಳನ್ನು ಹಿಂದುಗಳ ಸ್ವಾಧೀನಕ್ಕೆ ಬಹು ಉದಾರಮನಸ್ಸಿನಿಂದ ಕೊಡುತ್ತಿದ್ದರು. ಕಿಲ್ಲೇದಾರರಾಗಿದ್ದ ಮಹಾರಾಷ್ಟ್ರರು ಸಾಮಾನ್ಯವಾಗಿ ಜಹಗೀರನ್ನು ಅನುಭವಿಸುತ್ತಿದ್ದರು. ಈ ಕಿಲ್ಲೇದಾರರು ದೇಶಪ್ರಮುಖರಾಗಿದ್ದುದಲ್ಲದೆ ಅನೇಕರು ಮುನ್ಸಬ್‌ದಾರರಾಗಿ ಸುಲ್ತಾನರ ದರ್ಬಾರಿನಲ್ಲಿ ಇರುತ್ತಿದ್ದರು. ಅವರು ಹತ್ತು, ನೂರು, ಸಾವಿರ ಈ ರೀತಿಯಾಗಿ ಅಶ್ವಸೈನ್ಯಕ್ಕೆ ಪ್ರಭುಗಳಾಗಿ ಇರುತ್ತಿದ್ದರು. ಸುಲ್ತಾನರು ಅಪ್ಪಣೆಮಾಡಿದ ಪಕ್ಷದಲ್ಲಿ ಆಯಾ ಸೈನ್ಯದೊಡನೆ ಯುದ್ಧದ ವೇಳೆಯಲ್ಲಿ ಬಂದು ಸಹಾಯಮಾಡುತ್ತಿದ್ದರು. ಇದಕ್ಕೋಸ್ಕರ ಅವರು ಸೈನ್ಯದ ಸಂಬಳ (ವೇತನ) ಕ್ಕೂ ಸ್ವಂತವೆಚ್ಚಕ್ಕೂ ಒಂದೊಂದು ಜಹಗೀರನ್ನು ಅನುಭವಿಸುತ್ತಿದ್ದರು.

ಬಿಜಾಪುರದ ಸುಲ್ತಾನರ ದರ್ಬಾರಿನಲ್ಲಿ ಚಂದ್ರರಾವ ಮೋರೆ ಎಂಬಾತನು ಹನ್ನೆರಡುಸಾವಿರ ಸೈನ್ಯಕ್ಕೆ ಅಧಿಪತಿಯಾಗಿದ್ದನು. ಪ್ರಭುವಿನ ಅಪ್ಪಣೆಯ ಪ್ರಕಾರ ಆತನು ನೀರಾ, ಕೃಷ್ಣಾನದಿಗಳ ಮಧ್ಯಪ್ರದೇಶವನ್ನು ಜಯಿಸಲು, ಸುಲ್ತಾನನು ಸಂತುಷ್ಟನಾಗಿ ಆತನಿಂದ ಸ್ವಲ್ಪಕಪ್ಪವನ್ನು ತೆಗೆದುಕೊಂಡು ಆ ಪ್ರದೇಶವನ್ನೇ ಚಂದ್ರರಾಯನಿಗೆ ಜಹಗೀರಾಗಿ ಕೊಟ್ಟನು. ಅದೂ ಅಲ್ಲದೆ ಚಂದ್ರರಾಯನ ವಂಶದಲ್ಲಿ ಏಳು ಸಂತತಿಯವರು ವಂಶಪಾರಂಪರ್ಯವಾಗಿ 'ರಾಜಾ' ಎಂಬ ಬಿರುದಿನಿಂದ ಆಳಿಕೊಂಡು ಬರುವಂತೆ ಅನುಗ್ರಹಿಸಿದನು. ಇದೇ ರೀತಿಯಲ್ಲಿ ನಿಂಬಾಳಕರ ವಂಶೀಯರಾದ ರಾವುನಾಯಕರು ಫಲ್ಟನ್‌ದೇಶದ ಪ್ರಮುಖರಾಗಿ ಅದನ್ನು ಆಳುತ್ತಿದ್ದರು.

ಕ್ರಮಕ್ರಮವಾಗಿ ಮುಳ್ಳೂರು, ಮುಶ್ವರ, ಕಾಪಸಿ, ಮುಧೋಲ್, ಝುಟ್ಟಾ, ವಯೂರಿ ಮುಂತಾದ ಸ್ಥಳಗಳಲ್ಲಿ ವಿವಿಧ ಮಹಾರಾಷ್ಟ್ರರ ವಂಶವು ತಲೆಯೆತ್ತಿದುವು. ಇವರೆಲ್ಲರೂ ಬಿಜಾಪುರದ ಸುಲ್ತಾನರ ಕಾರ್ಯಗಳನ್ನು ನಿರ್ವಹಿಸುತ್ತಾ ಆಗಾಗ್ಗೆ ತಮ್ಮೊಳಗೆ ಹೋರಾಡುತ್ತಿದ್ದರು. ಜ್ಞಾತಿವೈರತ್ವವನ್ನು ಹೋಲುವ ವಿರೋಧವಾವುದೂ ಇರಲಿಲ್ಲ. ಆದುದರಿಂದ ಪರ್ವತಪ್ರದೇಶಗಳಾದ ಮಹಾರಾಷ್ಟ್ರ ಕೊಂಕಣ ಪ್ರದೇಶಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ಎಲ್ಲಾ ವೇಳೆಯಲ್ಲಿಯೂ ಅನೇಕ ಗೋತ್ರದವರ ವೈರತ್ವವು ಕಂಡುಬರುತ್ತಿದ್ದಿತು. ವಿಶೇಷವಾಗಿ ರಕ್ತದ ಕೋಡಿಯಾದರೂ ಅದು ದುರ್ಲಕ್ಷಣವಾಗದೆ ಸುಲಕ್ಷಣವಾಗಿಯೇ ಇದ್ದಿತು. ವ್ಯಾಯಾಮದಿಂದ ಶರೀರವು ದಾರ್ಢ್ಯವಾಗುವಂತೆ ವಿಪತ್ತುಗಳ ಮತ್ತು ಯುದ್ಧಗಳ ದೆಸೆಯಿಂದ ಜಾತೀಯ ಜೀವನ ಬಲಗಳು ವೃದ್ಧಿಹೊಂದುತ್ತಿದ್ದುವು. ಈ ರೀತಿಯಲ್ಲಿ ಮಹಾರಾಷ್ಟ್ರ ಜೀವನದ ಪ್ರಥಮಾಂಗರೇಖೆಗಳು ಶಿವಾಜಿ ಹುಟ್ಟುವುದಕ್ಕೆ ಮೊದಲೇ ಭರತಖಂಡವನ್ನು ಅಲಂಕರಿಸಿದ್ದವು.

ಅಹಮ್ಮದ್‌ನಗರದ ಸುಲ್ತಾನರ ಸಭೆಯಲ್ಲಿ ಜಾಧವ ಹಾಗೂ ಭೋಸ್ಲೆ ಎಂಬ ಎರಡು ಕುಟುಂಬದವರಿದ್ದರು. ಕ್ಷೀರಸಮುದ್ರವನ್ನುಹೋಲುವ ಜಾಧವರ ಗೋತ್ರಕ್ಕೆ ಸರಿಯಾದವಂಶವು ಯಾವುದೂ ಮಹಾರಾಷ್ಟ್ರದಲ್ಲಿ ಎಲ್ಲಿಯೂ ಇರಲಿಲ್ಲ. ದೇವಗಢದಲ್ಲಿ ಪೂರ್ವದ ಹಿಂದೂ ರಾಜರವಂಶದಿಂದ ಈ ವಂಶವು ಉತ್ಪತ್ತಿಯಾಯಿತೆಂದು ಕೆಲವರು ಅಭಿಪ್ರಾಯಪಡುವರು. ಭೋಸ್ಲೆ ವಂಶವು ಜಾಧವರ ಸಂತತಿಯಂತೆ ಶ್ರೇಷ್ಠವಲ್ಲವಾದರೂ ಒಟ್ಟಿನಲ್ಲಿ ಪ್ರಧಾನಿಗಳ ಕೆಲಸಕ್ಕೆ ತಕ್ಕವರಾಗಿದ್ದರೆಂದು ಹೇಳಲು ಯಾವ ಸಂಶಯವೂ ಇಲ್ಲ. ಈ ಸಂದರ್ಭದಲ್ಲಿ ಮತ್ತೊಂದು ಸಂಗತಿಯನ್ನು ತಿಳಿಯಬೇಕಾಗಿದೆ. ಜಾಧವರ ವಂಶದಲ್ಲಿ ಶಿವಾಜಿಯ ತಾಯಿಯೂ ಭೋಸ್ಲೆಯ ವಂಶದಲ್ಲಿ ಶಿವಾಜಿಯ ತಂದೆಯೂ ಹುಟ್ಟಿದರು. ವಾಚಕರ ಅವಗಾಹನೆಗಾಗಿ ದೇಶದ ಸ್ಥಿತಿಯನ್ನು ತಿಳಿಸಿದಂತಾಯಿತು. ಇನ್ನು ಕಥಾ ಭಾಗವನ್ನು ಮುಂದರಿಸಬೇಕು.

ಕೊಂಕಣದೇಶದಲ್ಲಿ ಮಳೆಗಾಲದಲ್ಲಿ ಪ್ರಕೃತಿಯು ಭಯಂಕರವಾದ ರೂಪವನ್ನು ಹೊಂದುವುದು. ೧೬೩೦ನೆಯ ಇಸವಿಯ ವಸಂತಕಾಲದಲ್ಲಿ ಒಂದುದಿನ ಸಾಯಂಕಾಲವು ಭಯಂಕರಾಕೃತಿಯನ್ನು ಹೊಂದಿ ದೃಗ್ಗೋಚರವಾಗುತ್ತಿದ್ದಿತು.

ಭಗವಾನ್ ಸೂರ್ಯನು ಅಸ್ತನಾಗಿದ್ದರೂ ನಭೋಮಂಡವು ಕಾರ್ಮುಗಿಲಿನಿಂದ ಆವರಿಸಲ್ಪಟ್ಟು ಪ್ರಪಂಚವೆಲ್ಲವೂ ಕತ್ತಲೆಯಿಂದ ತುಂಬಿದ್ದಿತು. ಎಲ್ಲಿಯೂ ಜೀವ ಜಂತುಗಳ ಸಂಚಾರವು ಕೇಳಿಬರುತ್ತಿರಲಿಲ್ಲ. ಬೆಟ್ಟಗಳ ಮೇಲಿರುವ ಕಾಲುದಾರಿಗಳು ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ದೂರದಲ್ಲಿ ಪರ್ವತವೆಲ್ಲ ಕಪ್ಪಗೆ ಕಾಣಿಸುತಲಿದ್ದಿತು. ಬೆಟ್ಟದ ತಪ್ಪಲಿನಲ್ಲಿ ಹರಿಯುತ್ತಲಿದ್ದ ಸಣ್ಣಸಣ್ಣ ಪ್ರವಾಹಗಳು ಪ್ರೇಕ್ಷಕರಿಗೆ ಬೆಳ್ಳಿಯ ರೇಖೆಗಳಂತೆ ಕಾಣುತ್ತಾ ಕೇವಲ ಮರಮರ ಶಬ್ದದಿಂದ ತಮ್ಮ ಗರ್ವವನ್ನು ತಿಳಿಸುತ್ತಿದ್ದುವು.

ಆ ಭಯಂಕರವಾದ ಪ್ರದೇಶದ ಒಂದು ಬೆಟ್ಟದ ಮಾರ್ಗವಾಗಿ ಕುದುರೆ ಯನ್ನು ಬಾರಿಬಾರಿಗೂ ಅಟ್ಟುತ್ತಾ ಸವಾರನೊಬ್ಬನು ಆತುರದಿಂದ ಪ್ರಯಾಣಮಾಡಿ ಬರುತ್ತಿದ್ದನು. ಬಾಯಲ್ಲಿರುವ ನೊರೆಯಿಂದಲೂ ಮೈಬೆವರಿನಿಂದಲೂ ಕೂಡಿದ್ದ ಆ ಕುದುರೆಯನ್ನೂ ಒದ್ದೆಯಾಗಿ ನೀರು ತೊಟ್ಟಿಡುತ್ತಿದ್ದ ಆತನ ಬಟ್ಟೆಯನ್ನೂ ನೋಡಿ ದರೆ, ಸವಾರನು ಬಹು ದೂರದಿಂದ ಪ್ರಯಾಣಮಾಡುತ್ತಿದ್ದನೆಂದು ನಿಸ್ಸಂದೇಹವಾಗಿ ತಿಳಿಯಬಹುದು. ಆತನ ಬಲಗೈಯಲ್ಲಿ ಲಗಾಮೂ ಭುಜದಲ್ಲಿ ಗುರಾಣಿಯೂ ಇದ್ದುವು. ಆತನ ಉಡುಪು ರಾಜಪುತ್ರಸ್ಥಾನದವರಂತೆ ಇದ್ದಿತು. ಆತನ ವಯಸ್ಸು ಸುಮಾರು ಹದಿನೆಂಟುವರುಷವಿರಬಹುದು. ಬಳಲಿಕೆಯಿಂದಲೋ ಬಿಸಲಿನ ಬೇಗೆ ಯಿಂದಲೋ ಮುಖವು ಸ್ವಲ್ಪ ಕಪ್ಪುಬಣ್ಣಕ್ಕೆ ತಿರುಗಿದ್ದಿತು ; ಹೀಗಿದ್ದರೂ ಅಷ್ಟು ಸುಂದರನಲ್ಲವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಕಣ್ಣುಗಳು ವಿಶಾಲವಾಗಿ ಹೊಳೆ ಯುತ್ತಲಿದ್ದವು. ಸವಾರನು ಕುದುರೆಗೆ ವಿಶ್ರಾಂತಿ ಕೊಡಬೇಕೆಂದು ಯೋಚಿಸಿ ಕೆಳ ಗಿಳಿದು ಕುದುರೆಯನ್ನು ಮರಕ್ಕೆ ಕಟ್ಟಿ ಆಯುಧವನ್ನು ಮರದ ಬುಡದಲ್ಲಿಟ್ಟು ಎರಡು ಕೈಗಳಿಂದಲೂ ಮುಖದಲ್ಲಿರುವ ಬೆವರನ್ನು ಒರಸಿಕೊಂಡು, ಕೆದರಿರುವ ತಲೆಕೂದ ಲನ್ನು ಸರಿಮಾಡಿಕೊಂಡು ಆಗಾಗ್ಗೆ ಆಕಾಶವನ್ನೇ ನೋಡುತ್ತಲಿದ್ದನು.

ನಭೋಮಂಡಲವು ಭೀಕರ ಪರಿವರ್ತನೆಯಿಂದ ಕೂಡಿರುವುದು. ಜಾಗ್ರತೆ ಯಾಗಿಯೇ ಮಂದಮಾರುತವು ಸಕಲ ತರು ಲತಾಗುಲ್ಮಗಳನ್ನು ಮೆಲ್ಲಗೆ ಆಲಂಗಿಸು ತ್ತಿದೆ. ಅಲ್ಲಲ್ಲಿ ಕಪ್ಪಗೆ ತೋರುತ್ತೆ. ಅನೇಕ ಬಣ್ಣಗಳಿಂದ ಒಪ್ಪುವ ಕಾಮನಬಿಲ್ಲು ಕಾಣಿಸಿಕೊಂಡು ಮರಗಳ ಗುಂಪಿನಿಂದ ಗಂಭೀರಧ್ವನಿಯು ಕೇಳಿಬರುತ್ತಿದೆ. ಬಳ ಲಿದ್ದ ಈ ಸವಾರನ ತಲೆಯಮೇಲೆ ಮಳೆಯ ಹನಿಗಳು ಬಿದ್ದೇಬಿದ್ದುವು. ಇನ್ನು

ಮುಂದೆ ಪ್ರಯಾಣಮಾಡುವುದು ಒಳ್ಳೆಯದಲ್ಲ, ಆಕಾಶವು ನಿರ್ಮಲವಾಗುವವರೆಗೂ ಎಲ್ಲಿಯಾದರೂ ಕುಳಿತಿರುವುದು ಉತ್ತಮ. ಆದರೆ ಆತನು ಹೋಗುತ್ತಿದ್ದ ಕಾರ್ಯ ಗೌರವವು ವಿಳಂಬಮಾಡತಕ್ಕದ್ದಲ್ಲ. ಅಲ್ಲದೆ ಕಳುಹಿದ್ದ ಪ್ರಭುವು ಯಾವಕಾರಣವನ್ನೂ ಕೇಳುವವನಲ್ಲ ನಮ್ಮ ಪ್ರಯಾಣಿಕರಿಗೆ ಸಾವಕಾಶಮಾಡುವುದಾಗಲಿ, ಕಾರಣವನ್ನು ತಿಳಿಸುವುದಾಗಲಿ ಅಭ್ಯಾಸವಿರಲಿಲ್ಲ. ಆದುದರಿಂದ ಆ ಸರದಾರನು ಪುನಃ ಆಯುಧವನ್ನು ಕೈಯಲ್ಲಿ ತೆಗೆದುಕೊಂಡು, ಕುದುರೆಯಮೇಲೆ ಕುಳಿತು ಕ್ಷಣ ಮಾತ್ರ ಹಿಂತಿರುಗಿ ನೋಡಿ ಪ್ರಶಾಂತವಾಗಿದ್ದ ಆ ಗಿರಿಪ್ರದೇಶದಿಂದ ಪ್ರತಿದ್ವನಿಯು ಬರುತ್ತಿರಲು ಕುದುರೆಯನ್ನು ಓಡುವಂತೆ ಮಾಡಿದನು.

ಸ್ವಲ್ಪಹೊತ್ತಿಗೆ ಮಳೆಯು ಹೆಚ್ಚಾಗಿ ಸುರಿಯಲಾರಂಭಿಸಿತು, ಒಂದುಕಡೆಯಿಂದ ಮತ್ತೊಂದು ಕಡೆಗೆ ವಿದ್ಯುಲ್ಲತೆಯು ಪ್ರಕಾಶಿಸುತ್ತಿದ್ದಿತು. ಬೆಟ್ಟಗುಡ್ಡಗಳಿಂದ ಆ ಪ್ರದೇಶವು ಮೇಘಾಡಂಬರದಿಂದ ಭೋರ್ಘರೆಯುತ್ತಾ ಅನೇಕಸಾರಿ ಪ್ರತಿಧ್ವನಿ ಮಾಡುತ್ತಿದ್ದಿತು. ಬೆಟ್ಟಗಳಮೇಲಿಂದ ಕಿವಿಗಳು ಕಿವುಡಾಗುವಂತೆ ಆನೆಯಗಾತ್ರದಂಥ ಜಲಪ್ರವಾಹಗಳು ರಭಸದಿಂದ ಭೋರೆಂದು ಹರಿದು ಬರುತ್ತಿದ್ದುದರಿಂದ, ನದಿಗಳಲ್ಲಿ ಪ್ರವಾಹಗಳು ಹೆಚ್ಚಿ ಎಲ್ಲಾಕಡೆಯಲ್ಲಿಯೂ ನೀರು ಹರಿದುಬರುತ್ತಿದ್ದಿತು. ಎಲ್ಲಿನೋಡಿದರೂ ಜಲಮಯವೇ! ವಿದ್ಯುತ್ಪ್ರಭಾ ಭಾಸಿತವಾದ ಪ್ರಕೃತಿ ಸಂಬಂಧದ ಈ ಘೋರ ಪರಿಣಾಮವು ಬಹು ದೂರದವರೆಗೆ ದೃಗ್ಗೋಚರವಾಗುತ್ತಲಿದ್ದಿತು. ನಡನಡುವೆ ಮೇಘಧ್ವನಿಯಿಂದ ಭೂಮಿಯು ನಡುಗುತ್ತಲೂ ಪುನಃ ಶಾಂತವಾಗುತ್ತಲೂ ಇದ್ದಿತು. ಕ್ರಮಕ್ರಮವಾಗಿ ಮಳೆ ಹೆಚ್ಚಾಗಿ ಬಂದು ಪರ್ವತ ಪ್ರದೇಶವನ್ನು ಮುಚ್ಚಿಬಿಟ್ಟಿತು. ಝರಿಗಳು ಹೆಚ್ಚಾಗಿ ಪ್ರವಹಿಸುತ್ತಿದ್ದುವು.

ಸವಾರನು ಸ್ವಲ್ಪವೂ ಬೇಸರ ಪಡದೆ ಜಾಗರೂಕತೆಯಿಂದ ಪ್ರಯಾಣ ಮಾಡುತ್ತಿದ್ದನು. ಪ್ರಚಂಡವಾದ ಗಾಳಿಯ ದೆಸೆಯಿಂದ ಆಗಾಗ್ಗೆ ಕುದುರೆಯನ್ನೂ ಸವಾರನನ್ನೂ ಕೂಡ ವಾಯುವೇಗದಿಂದ ಬೆಟ್ಟದ ಮೇಲ್ಗಡೆಗೆ ಹೊಡೆದುಕೊಂಡು ಹೋಗುವಂತೆ ಇದ್ದಿತು. ಮರದ ಕೊಂಬೆಗಳು ತಗುಲಿ ಆತನ ಕವಚವು ಹರಿದು ಹೋಗಿದ್ದಿತು. ಮುಖದಲ್ಲಿ ರಕ್ತಬಿಂದುಗಳು ಕಾರುತ್ತಿದ್ದುವು. ಇಂತಹ ಸಂಧಿಗ್ಧ ಸ್ಥಿತಿಯಲ್ಲಿದ್ದರೂ ಉದ್ದೇಶಿಸಿದ ಕಾರ್ಯವನ್ನು ಬಿಟ್ಟು ಇರುವುದಕ್ಕೆ ಅವಕಾಶವಿಲ್ಲದಿರುವುದರಿಂದ ಆತನು ವ್ಯರ್ಥ ಕಾಲಕ್ಷೇಪ ಮಾಡದೆ ಸಾಧ್ಯವಾದಷ್ಟು

ಜಾಗ್ರತೆಯಾಗಿ ಪ್ರಯಾಣ ಮಾಡಿದನು. ಒಂದು ಗಂಟೆಯ ಹೊತ್ತು ಮಳೆ ಸುರಿದ ತರುವಾಯ ಆಕಾಶವು ನಿರ್ಮಲವಾಗಲಾರಂಭಿಸಿತು. ಅಷ್ಟರಲ್ಲಿ ಮಳೆಯ ವೇಗವು ನಿಂತು ಹೋಯಿತು. ಜಗದ್ಬಾಂಧವನ ಕಾಂತಿಯಿಂದ ಬೆಟ್ಟದ ಕಟ್ಟೆಯೂ ಭೂಮಿಯ ಎಲ್ಲಾ ಕಡೆಯೂ ನೂತನ ಬಣ್ಣವಾಗಿ ತೋರುತ್ತಿದ್ದಿತು.

ನಮ್ಮ ಪ್ರಯಾಣಿಕನು ದುರ್ಗವನ್ನು ಸೇರಿ ಕುದುರೆಯಿಂದ ಕೆಳಗಿಳಿದು ನೆನೆದುಹೋದ ಓರೆಯಾಗಿದ್ದ ತಲೆ ಕೂದಲನ್ನು ಸರಿಮಾಡಿಕೊಂಡು ಕೆಳಗೆದೃಷ್ಟಿ ಯಿಟ್ಟು ನೋಡಿದನು. ಆತನ ದೃಷ್ಟಿಪಥಕ್ಕೆ ಎರಡು ಮೂರು ಸಾವಿರ ಅಡಿ ಎತ್ತರ ವಾಗಿರುವ ಪರ್ವತ ಪ್ರದೇಶವು ಗೋಚರಿಸುತ್ತಿದ್ದಿತು.

ದಟ್ಟವಾಗಿದ್ದ ವೃಕ್ಷಗಳು ಮಳೆಯಿಂದ ನೆನೆದು ಸೂರ್ಯರಶ್ಮಿಯಿಂದ ಹೇಮಲತೆಯೋಪಾದಿಯಲ್ಲಿ ಕಂಗೊಳಿಸಿದುವು. ಬೆಟ್ಟದ ಝರಿಗಳು ಮೊದಲಿಗಿಂತಲೂ ಹೆಚ್ಚು ಪ್ರವಾಹವುಳ್ಳವಾಗಿ ಸೂರ್ಯನ ಕಾಂತಿಯಿಂದ ಹೊಳೆಯುತ್ತಲಿದ್ದವು. ಬೆಟ್ಟದಮೇಲೆಯೂ ಸೂರ್ಯಕಿರಣಗಳು ನಾನಾಬಣ್ಣಗಳಿಂದ ಕೂಡಿ ಕಾಂತಿಯಿಂದ ಬೆಳಗುತಲಿದ್ದಿತು. ನೀರಿನ ಪ್ರವಾಹದೊಡನೆ ಇಂದ್ರನ ಧನಸ್ಸು ನಾಟ್ಯವಾಡುತ್ತ ಲಿದ್ದಿತು. ಗಾಳಿಯು ಹೆಚ್ಚಾಗಿ ಬೀಸಿದುದರಿಂದ ಮೇಘಗಳು ದೂರವಾಗಿ ಹೋಗಿ ವರ್ಷರೂಪವಾಗಿ ಜಾರುತ್ತಿದ್ದಿತು.

ಈ ಅನಿರ್ವಚನೀಯವಾದ ಸೊಬಗನ್ನು ನೋಡಿ ಕ್ಷಣಕಾಲ ವಿಸ್ಮಯಹೊಂದಿ ಅನಂತರ ಆತನು ದುರ್ಗವನ್ನು ಹತ್ತಲು ತೊಡಗಿದನು. ದಿನಮಣಿಯು ಅಸ್ತಮಿಸು ತ್ತಿದ್ದನು. ದುರ್ಗರಕ್ಷಕರಿಗೆ ತನ್ನ ನೆನಪುಹೇಳಿ ಒಳಗೆ ಪ್ರವೇಶಿಸಿದನು. ಒಡ ನೆಯೇ ದುರ್ಗದ್ವಾರವು ಮುಚ್ಚಲ್ಪಟ್ಟಿತು.

ಕಾವಲುಗಾರರು ಬಾಗಿಲನ್ನು ಹಾಕಿ, ಆತನ ಕಡೆಗೆ ತಿರುಗಿ :- 'ಅಯ್ಯಾ ! ನೀನು ಸರಿಯಾದ ವೇಳೆಗೆ ಬಂದು ಸೇರಿದೆ ಇನ್ನೊಂದು ನಿಮಿಷ ತಡವಾಗಿದ್ದರೆ ನಾಳೆನವರೆಗೂ ದುರ್ಗದ ಹೊರಗೆ ಇರಬೇಕಾಗುತ್ತಿದ್ದಿತು.' ಎಂದು ಹೇಳಿದರು.

ಸವಾರ :— 'ಅದೃಷ್ಟವೇ ! ಆ ನಿಮಿಷವು ಮುಖ್ಯವಾದುದಲ್ಲ. ಪ್ರಭುವಿಗೆ ಮಾಡಿದ ವಾಗ್ದಾನವನ್ನು ಭವಾನೀದೇವಿಯ ಅನುಗ್ರಹದಿಂದ ನಿರ್ವಹಿಸಿದೆನು. ಈಗಲೇ ಕಿಲ್ಲೇದಾರನಿಗೆ ಪ್ರಭುವಿನ ಆಜ್ಞೆಯನ್ನು ತಿಳಿಸುವೆನು,' ಎಂದನು.

ಅದಕ್ಕೆ ಕಾವಲುಗಾರರಲ್ಲೊಬ್ಬನು ಹೋಗಿ ಕಿಲ್ಲೇದಾರನಿಗೆ ತಿಳಿಸಿ ಆತನ ಅಪ್ಪಣೆ ಪಡೆದಂತೆ ಬಂದು 'ಕಿಲ್ಲೇದಾರರು ತಮ್ಮನ್ನೇ ಇದಿರು ನೋಡುತ್ತಿರುವರು.' ಎಂದು ಕಾವಲುಗಾರರು ಹೇಳಿದರು

ಆ ಮಾತುಗಳು ನಡೆದಕೂಡಲೇ ಸವಾರನು ಕಿಲ್ಲೇದಾರನ ಸಮೀಪಕ್ಕೆ ಹೋಗಿ ಪ್ರಣಾಮ ಮಾಡಿ, ನಡುಕಟ್ಟಿನೊಳಗೆ ಇಟ್ಟಿದ್ದ ಕೆಲವು ಪತ್ರಗಳನ್ನು ಕೊಟ್ಟನು. ಕಿಲ್ಲೇದಾರನು ಮಾವಳರ ಜಾತಿಯವನು; ಶಿವಾಜಿಗೆ ಕೇವಲ ನಂಬಿಗೆಯುಳ್ಳ ಸೇವಕನು. ಆತನು ಆ ಪತ್ರಗಳ ಸಲುವಾಗಿ ನಿರೀಕ್ಷಿಸುತ್ತಿದ್ದನಾದುದರಿಂದ ಅವು ಕೈಗೆ ಬಂದೊಡನೆ ಒಂದೇ ಮನಸ್ಸಿನಿಂದ ಅವುಗಳನ್ನು ಓದತೊಡಗಿದನು.

ದೆಹಲಿಯ ಚಕ್ರವರ್ತಿಯೊಡನೆ ಯುದ್ಧ ಪ್ರಾರಂಭವಾದುದೂ ಪ್ರಕೃತಾವಸ್ಥೆಯೂ ಇನ್ನೂ ಅನೇಕ ವಿಚಾರಗಳೂ ಆ ಪತ್ರದಲ್ಲಿ ಬರೆಯಲ್ಪಟ್ಟಿದ್ದುವು. ಕಿಲ್ಲೇದಾರನು ಆ ಪತ್ರಗಳನ್ನು ಓದಿಕೊಂಡು ಅದನ್ನು ತಂದವನ ಕಡೆ ನೋಡಿದನು. ಹದಿನೆಂಟುವರ್ಷ ವಯಸ್ಸುಳ್ಳ ಆತನ ಮುಖಮಂಡಲವನ್ನೂ ವಿಶಾಲ ನೇತ್ರಗಳನ್ನೂ ಕಪ್ಪುಬಣ್ಣದ ಪಾಗನ್ನೂ ನೋಡಿ ಆ ಕಿಲ್ಲೇದಾರನಿಗೆ ವಿಸ್ಮಯವಾಯಿತು. ಆಗ ಆತನು ಶೂರನಾದ ಪತ್ರವಾಹಕನೊಡನೆ ಈ ರೀತಿಯಾಗಿ ಮಾತನಾಡತೊಡಗಿದನು.

ಕಿಲ್ಲೇದಾರ—ಹವಾಲ್ದಾರ್ ನಿನ್ನ ಹೆಸರು ರಘುನಾಥಸಿಂಹನೆ? ರಾಜಪುತ್ರನೆ ?

ರಘು—(ವಿನಯದಿಂದ) ಅಹುದು

ಕಿಲ್ಲೇ—ನೀನು ಸಾಮಾನ್ಯವಾಗಿ ಶೂರನಂತೆ ತೋರದಿದ್ದರೂ ಕೆಲಸಬಿದ್ದಾಗ ಧೀರನಾಗಿ ತೋರುತ್ತಿರುವೆ !

ರಘು- ಚಿತ್ತ ! ಪ್ರಯತ್ನದಲ್ಲಿ ಲೋಪವಿಲ್ಲ. ಕಾರ್ಯಸಿದ್ಧಿಯಲ್ಲಿ ಮಾತ್ರ ಭವಾನೀದೇವಿಯನ್ನು ಅನುಸರಿಸಿರುವುದು.

ಕಿಲ್ಲೇ—ಸಿಂಹಗಡದಿಂದ ಈ ತೋರಣ ದುರ್ಗಕ್ಕೆ ಇಷ್ಟು ಜಾಗ್ರತೆಯಾಗಿ ಬರಲು ಹೇಗೆ ಶಕ್ಯನಾದೆ?

ರಘು—ಪ್ರಭುಗಳ ಸನ್ನಿಧಿಯಲ್ಲಿ ಮಾಡಿದ ಪ್ರತಿಜ್ಞೆಯಂತೆ ನಡೆಯಿಸಿದೆನು.

ಈ ಪ್ರತ್ಯುತ್ತರಕ್ಕೆ ಸಂತೋಷಪಟ್ಟ ಕಿಲ್ಲೇದಾರನು ಮಂದಹಾಸದೊಡನೆ– "ಪ್ರಯತ್ನದಲ್ಲಿ ಕಾರ್ಯಸಿದ್ಧಿಯನ್ನು ನಿನ್ನ ಆಕಾರವೇ ವ್ಯಕ್ತಪಡಿಸುತ್ತಿರುವುದು" ಎಂದು ಹೇಳಿದನು. ರಘುನಾಥನ ಶರೀರವು ಒದ್ದೆಯಾಗಿಯೇ ಇದ್ದಿತು. ಹಣೆಯಲ್ಲಿ ಸಣ್ಣ ಗಾಯವಿದ್ದಿತು.

ಸಿಂಹಗಡ, ಪೂನಾ ಇವುಗಳ ವಿಚಾರವಾಗಿಯೂ ಮೊಗಲರು ಮಹಾರಾಷ್ಟ್ರರ ಮತ್ತು ರಾಜಪುತ್ರರ ಸ್ಥಿತಿಯನ್ನು ಕುರಿತೂ ಕಿಲ್ಲೇದಾರನು ಮಾಡಿದ ಪ್ರಶ್ನೆಗಳಿಗೆಲ್ಲಾ ರಘುನಾಥಸಿಂಹನು ತಕ್ಕ ಸಮಾಧಾನವನ್ನು ಕೊಟ್ಟನು. ಕಿಲ್ಲೇದಾರನು, 'ಹಾಗಾದರೆ ನಾಳಿನ ಪ್ರಾತಃಕಾಲಕ್ಕೆ ನನ್ನ ಬಳಿಗೆ ಬಾ, ಪ್ರತ್ಯುತ್ತರವನ್ನು ಬರೆದು ಇಟ್ಟಿರುವೆನು ; ಶಿವಾಜೀಮಹಾರಾಜರಿಗೆ ಹೀಗೆಂದು ಹೇಳು: —"ಸ್ವಾಮಿಯವರು ಕಳುಹಿದ ಹವಾಲ್ದಾರನು ಕಷ್ಟಕಾರ್ಯಕ್ಕೆ ತಕ್ಕವನೇ" ಎಂದನು. ಆ ಪ್ರಶಂಸೆಯ ಮಾತಿಗೆ ರಘುನಾಥನು ತಲೆ ಬಗ್ಗಿಸಿ ಕೃತಜ್ಞತೆಯಿಂದ ವಂದನೆಯನ್ನು ಅರ್ಪಿಸಿ ಅಪ್ಪಣೆಯನ್ನು ಪಡೆದು ಹೊರಟು ಹೋದನು.

ಕಿಲ್ಲೇದಾರನು ಶಿವಾಜಿಗೆ ಪರಮರಹಸ್ಯಗಳಾದ ಅನೇಕ ವಿಷಯಗಳನ್ನು ತಿಳುಹಬೇಕಾಗಿದ್ದಿತು. ಆತನು ರಘುನಾಥನನ್ನು ಪರೀಕ್ಷಿಸುವದಕ್ಕೆ ಇದೇ ಕಾರಣವು. ಇಂತಹ ವಿಷಯಗಳನ್ನು ಲೇಖನ ಮೂಲಕ ತಿಳುಹಲಾಗದು. ಪತ್ರವು ಶತ್ರುಗಳ ಕೈಗೆ ಸೇರುವುದೇನೋ ಎಂದೂ ಆ ವಿಷಯಗಳನ್ನು ರಘುನಾಥನಿಗೆ ತಿಳಿಸಬಹುದೇ-ಎಂದೂ, ಅಂಜಿಕೆಯಿಂದಲಾಗಲಿ ಆತನು ಶತ್ರುಗಳಿಗೆ ವಶನಾಗಿ ರಹಸ್ಯಗಳನ್ನು ಹೊರಪಡಿಸುವ ಸಂಭವವು ಬರುವುದೋ—ಎಂದೂ ಯೋಚಿಸುತ್ತಿದ್ದನು. ಆತನು ಹೋದ ಕೂಡಲೆ, ಕಿಲ್ಲೇದಾರನು "ಇವನು ಅಂಥವನಲ್ಲ. ಶಿವಾಜಿಯು ಮಹಾಪಂಡಿತನು, ಇವನಲ್ಲಿ ಸಂಶಯ ತೋರುವುದೂ ಇಲ್ಲ ಪೂರ್ಣ ನಂಬಿಕೆಯುವನಾಗಿಯೇ ಇರಬೇಕು." ಹೀಗೆಂದು ತನ್ನಲ್ಲಿಯೇ ಹೇಳಿಕೊಂಡನು.

———

# ಎರಡನೆಯ ಪ್ರಕರಣ.

---

## (ಸರಳ ಬಾಲೆ.)

ರಘುನಾಥಸಿಂಹನು ಕಿಲ್ಲೇದಾರನಿಂದ ಅಪ್ಪಣೆ ಹೊಂದಿ ಭವಾನಿ ಮಂದಿರದ ಕಡೆಗೆ ಹೊರಟನು. ಈ ದುರ್ಗವನ್ನು ಜಯಿಸಿದ ಮೇಲೆ ಶಿವಾಜಿಯು ಭವಾನಿ ಮೂರ್ತಿಯೊಂದನ್ನು ಇಲ್ಲಿ ಪ್ರತಿಷ್ಠೆ ಮಾಡಿಸಿ ಅಂಬರದೇಶೀಯನಾದ ಒಬ್ಬ ಬ್ರಾಹ್ಮಣನನ್ನು ಕರೆಯಿಸಿ ದೇವಿಗೆ ಅರ್ಚನೆ ಮಾಡಿಸುತ್ತಿದ್ದನು. ಯುದ್ಧದ ವೇಳೆಯಲ್ಲಿ ಶಿವಾಜಿಯು ಆ ದೇವಿಯನ್ನು ಪೂಜಿಸದೆ ಯಾವ ಕಾರ್ಯಕ್ಕೂ ಪ್ರಯತ್ನಿಸುತ್ತಿರಲಿಲ್ಲ.

ರಘುನಾಥನು, ಒದ್ದೆಯಾಗಿರುವ ತನ್ನ ಕೂದಲನ್ನು ಬಿಚ್ಚಿಕೊಂಡು ಯೌವನೋಚಿತವಾದ ಉಲ್ಲಾಸದಿಂದ ಇಂಪಾಗುವಂತೆ ಒಂದು ರಣಗೀತವನ್ನು ಹಾಡುತ್ತಾ ಆ ಮಂದಿರವನ್ನು ಸೇರಿದನು. ಆಗ ಅಲ್ಲಿ ಪುರೋಹಿತನು ಇಲ್ಲದಿದ್ದುದರಿಂದ ಸಮೀಪದಲ್ಲಿದ್ದ ಹೂವಿನ ತೋಟಕ್ಕೆ ಹೋಗಿ ಅಲ್ಲಿ ಒಂದು ಮರದ ಕೆಳಗೆ ಕಲ್ಲುಬಂಡೆಯ ಮೇಲೆ ಕುಳಿತುಕೊಂಡು ವಿಶ್ರಮಿಸಿಕೊಳ್ಳುತ್ತಿದ್ದನು.

ಸಂಧ್ಯಾವೇಳೆಯಲ್ಲಿ ಉದ್ಯಾನವನದಲ್ಲಿ ವಿಕಸಿತವಾದ ಹೂಗಳನ್ನು ಕುಯ್ಯಲು ಬಂದ ಓರ್ವ ಕನ್ಯೆಯು ಆತನ ದೃಷ್ಟಿಗೆ ಬಿದ್ದಳು. ಆಶ್ಚರ್ಯಮಗ್ನನಾದನು. ಏಕೆಂದರೆ, ಆಕೆ ಮಹಾರಾಷ್ಟ್ರಕನ್ಯೆಯಲ್ಲ. ಧರಿಸಿರುವ ಉಡುಪನ್ನು ನೋಡಿದರೆ ರಾಜಪುತ್ರಸ್ಥಾನದವಳಂತೆ ತೋರುತ್ತದು. ಬಹು ದಿನಸಗಳ ಮೇಲೆ ತನ್ನ ದೇಶದ ಬಾಲೆಯನ್ನು ಕಂಡುದರಿಂದ ಆತನ ಹೃದಯವು ವಿಕಸಿತವಾಯಿತು, ಅವಳ ಸಮೀಪಕ್ಕೆ ಹೋಗಿ ಮಾತನಾಡಿಸಬೇಕೆಂಬ ಅಪೇಕ್ಷೆಯುಂಟಾದರೂ ರಘುನಾಥನು ಆಶೆಯನ್ನು ಅಡಗಿಸಿಕೊಂಡು ತಾನು ಕುಳಿತಿದ್ದ ಸ್ಥಳದಿಂದಲೇ ಅವಳನ್ನು ನೋಡುತ್ತಿದ್ದನು.

ಆ ಕನ್ಯೆಯ ವಯಸ್ಸು ಸುಮಾರು ಹದಿಮೂರು ವರುಷವೆನಬಹುದು. ಅವಳ ಕೇಶರಾಶಿಯು ತುಂಬ ಜಡೆಯಾಗಿ ಬೆನ್ನಿನ ಮೇಲೆಯೂ ಕೊಡೆಯ ಮೇಲೆಯೂ

ಬೀಳುವ ಹಾಗೆ ಬಿಡಿಸಿದ್ದಿತು. ನೇತ್ರಗಳಲ್ಲಿ ಅಪೂರ್ವ ಕಾಂತಿಯು ತೋರುತ್ತಿದ್ದಿತು. ಉದ್ದೇಶವಾಗಿ ಚಿತ್ರಿಸಿದ ಪುತ್ಥಳಿಯಂತೆ ಅವಳ ಲೋಚನಗಳು ತಕ್ಕ ರೆಪ್ಪೆಗಳಿಂದ ಕೂಡಿ ಮುಖಕ್ಕೆ ಶೋಭಾಯಮಾನವಾಗಿದ್ದವು. ತುಟಿಗಳು ಸಣ್ಣವಾಗಿ ಕೆಂಪೇರಿದ್ದವು. ಸುಂದರವಾದ ಕರಗಳಲ್ಲಿ ಬಂಗಾರದ ಕಡಗಗಳೂ ಕತ್ತಿನಲ್ಲಿ ಮಣಿಮಯವಾದ ಹಾರವೂ ಪ್ರಕಾಶಿಸುತ್ತಿದ್ದುವು. ಇಂತಹ ರಾಜಪುತ್ರಿಯನ್ನು ನೋಡಿ ರಘುನಾಥನು ಮನಸ್ಸನ್ನು ಸಮಾಧಾನಪಡಿಸಲಾರದೆ ಇದ್ದನು.

ಅವಳು ಪುಷ್ಪಗಳನ್ನು ಬಿಡಿಸಿ, ಮನೆಗೆ ಹೋಗುವ ವೇಳೆಯಲ್ಲಿ ಸಮೀಪಸ್ಥನಾಗಿ ಓರ್ವ ಧೀರ್ಘಕಾಯನಾದ ತರುಣನು ತನ್ನ ಕಡೆಗೆ ಎವೆಯಿಕ್ಕದೆನೋಡುತ್ತಿರುವುದನ್ನು ತಿಳಿದಾಗ ನಾಚಿಕೆಯಿಂದ ಮುಖವನ್ನು ತಗ್ಗಿಸಿ, ಪುನಃ ದೃಷ್ಟಿಸಿ, ಆತನನ್ನು ನೋಡಿದಳು. ಆತನು ಆಗಲೂ ಅದೇ ಸ್ಥಿತಿಯಲ್ಲಿದ್ದನು. ಆತನ ಎಡಗಸೆ ಖಡ್ಗವೂ ಬಲಗೈಯಲ್ಲಿ ಬಿಲ್ಲೂ ಇರುವುದನ್ನು ಕಂಡು ಬಹುಕಾಲಕ್ಕೆ ಸ್ವದೇಶಯೋಧನೊಬ್ಬನನ್ನು ಮಹಾರಾಷ್ಟ್ರದೇಶದಲ್ಲಿ ಕಂಡುದಕ್ಕೆ ಆ ರಾಜಕುಮಾರಿ ಸಂತೋಷಪಟ್ಟಳು. ಅನಂತರ ರೂಪಿಗೆ ಮರುಳಾಗಿ ತಾನು ಕುಯ್ಯುತ್ತಿದ್ದ ಹೂವನ್ನು ತೆಗೆದುಕೊಂಡು ಮನೆಗೆ ಹೊರಟಳು.

ರಘುನಾಥನು ಅವಳನ್ನು ರೆಪ್ಪೆಹಾಕದೆ ನೋಡುತ್ತಾ ಹಾಗೆಯೇ ನಿಶ್ಚೇಷ್ಟಿತನಾಗಿದ್ದನು. ಆ ಮೇಲೆ ತಿಳಿವಳಿಕೆಯುಂಟಾಯಿತು. ಚಿಂತಾಮಗ್ನನಾಗಿ ಆತನು ಪುರೋಹಿತನ ದರ್ಶನವನ್ನು ತೆಗೆದುಕೊಳ್ಳಲು ಮೆಲ್ಲಗೆ ದೇವಸ್ಥಾನದೊಳಕ್ಕೆ ಹೋಗಿ ಆತನ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದನು. ಈ ಸಂದರ್ಭದಲ್ಲಿ ಪುರೋಹಿತನ ಚರಿತ್ರವನ್ನು ಸ್ವಲ್ಪ ತಿಳಿಸುವುದು ಅವಶ್ಯಕವಾಗಿದೆ.

ಪುರೋಹಿತನು ಅಂಬರದೇಶದ ಬ್ರಾಹ್ಮಣನೆಂದು ಹಿಂದೆ ಹೇಳಿರುವುದು. ಆತನ ಹೆಸರು ಜನಾರ್ಧನ. ಸುಪ್ರಸಿದ್ಧನಾದ ಅಂಬರದೇಶದ ಪ್ರಭುವಾದ ಜಯಸಿಂಹನ ಸಭಿಕರಲ್ಲಿ ಈತನೊಬ್ಬನಾಗಿದ್ದನು. ಶಿವಾಜಿಯು ಬಲಾತ್ಕಾರಮಾಡಿದುದರಿಂದ ಜಯಸಿಂಹನ ಅನುಮತಿಪಡೆದು ಜನಾರ್ಧನದೇವನು ತೋರಣ ದುರ್ಗಕ್ಕೆ ಹೊರಟುಬಂದನು. ಆತನಿಗೆ ಮಕ್ಕಳಿಲ್ಲದೆ ಹೋದರೂ ಸ್ವದೇಶವನ್ನು ಬಿಡುವುದಕ್ಕೆ ಕೆಲವು ದಿವಸಗಳ ಮುಂಚೆ ಒಬ್ಬ ಕ್ಷತ್ರಿಯ ಕನ್ಯೆಯನ್ನು ತಾನು ಪೋಷಿಸುತ್ತಿದ್ದನು.

ಅವಳ ತಂದೆಯು ಜನಾರ್ಧನನ ಬಾಲ್ಯ ಸ್ನೇಹಿತನು. ಅವಳ ತಾಯಿಯು ಜನಾರ್ದನನ ಹೆಂಡತಿಯನ್ನು 'ಅಕ್ಕಾ' ಎಂದು ಕರೆಯುತ್ತಿದ್ದಳು.

ಆ ಬಾಲೆಯ ತಾಯಿತಂದೆಗಳು ಮೃತಪಡಲು ಮಕ್ಕಳಿಲ್ಲದ ಜನಾರ್ದನನೂ ಆತನ ಪತ್ನಿಯೂ ಆ ರಾಜ ಕುಮಾರಿಯನ್ನು ಕಾಪಾಡುತ್ತಿದ್ದರು. ಅನಂತರ ಅವರು ಈ ದುರ್ಗಕ್ಕೆ ಬಂದು ಸೇರಿದರು.

ಕೆಲವು ವರ್ಷಗಳಾದ ಬಳಿಕ ಜನಾರ್ದನನ ಹೆಂಡತಿಯು ದೈವಾಧೀನಳಾದಳು. ವೃದ್ಧನಿಗೆ ಸರಳಬಾಲೆಯು ಹೊರತು ಮತ್ತಾರು ಹಿತಚಿಂತಕರೂ ಇರಲಿಲ್ಲ. ಬಾಲೆಯು ಬೆಳೆಯುತ್ತ ಬಂದಂತೆ ಅವಳ ಸೌಂದರ್ಯವೂ ಹೆಚ್ಚುತ್ತ ಬಂದಿತು. ದುರ್ಗವಾಸಿಗಳಾದ ಬ್ರಾಹ್ಮಣರು ಜನಾರ್ಧನನ್ನು ಕಣ್ವಮುನಿಯೆಂದೂ ಈ ಕನ್ಯೆಯನ್ನು ಶಕುಂತಲೆಯೆಂದೂ ಪರಿಹಾಸ್ಯಮಾಡುತ್ತಿದ್ದರು. ಜನಾರ್ಧನನು ಕೂಡ ಕನ್ಯೆಯ ಸೌಂದರ್ಯ್ಯವನ್ನೂ ವಿದ್ಯಾಭಿಲಾಷೆಯನ್ನೂ ನೋಡಿ ಸಂತೋಷಪಟ್ಟು ರಾಜಪುತ್ರಸ್ಥಾನವನ್ನು ಬಿಟ್ಟುಬಂದ ದುಃಖವನ್ನು ಮರೆತುಹೋದನು.

ರಘುನಾಥನು ಸ್ವಲ್ಪ ಹೊತ್ತು ನಿರೀಕ್ಷಿಸಿದ ತರುವಾಯ ಜನಾರ್ಧನದೇವನು ದೇವಿಯ ಮಂದಿರವನ್ನು ಪ್ರವೇಶಿಸಿದನು. ಆತನ ವಯಸ್ಸು ಸುಮಾರು ಎಂಬತ್ತುವರುಷವಿರಬಹುದು. ಶರೀರವು ಉದ್ದವಾಗಿಯೂ ಎದೆಯು ವಿಶಾಲವಾಗಿಯೂ ಬಾಹುಗಳು ದೀರ್ಘವಾಗಿಯೂ ಇದ್ದುವು. ಕಣ್ಣುಗಳು ಶಾಂತಿ ರಸವನ್ನು ಸೂಸುವಂತಿದ್ದುವು. ಭುಜದ ಮೇಲೆ ಯಜ್ಞೋಪವೀತವು ಸರಿದಾಡುತ್ತಿದ್ದಿತು. ಜನಾರ್ಧನನು ಆಲಯಕ್ಕೆ ಬರುವುದನ್ನು ಕಂಡು ಸಂಭ್ರಮದಿಂದ ತಾನು ಕುಳಿತ ಸ್ಥಳದಿಂದ ಎದ್ದನು. ಕುಶಲಪ್ರಶ್ನೆಗಳು ಆದ ತರುವಾಯ ಜನಾರ್ಧನನು ಶಿವಾಜಿಯ ಯೋಗಕ್ಷೇಮವನ್ನು ಕೇಳಲು ರಘುನಾಥನು ತಕ್ಕ ಉತ್ತರವನ್ನು ಹೇಳಿ, ಯುದ್ಧದ ವಿಚಾರವನ್ನು ಸ್ವಲ್ಪಮಟ್ಟಿಗೆ ವಿವರಿಸಿದನು. ಮತ್ತು ಶಿವಾಜಿಯು ಕೊಟ್ಟ ಉಂಗುರವನ್ನು ಆ ಬ್ರಾಹ್ಮಣನ ಕೈಯಲ್ಲಿ ಕೊಟ್ಟು — "ಈಗ ಪ್ರಭುಗಳು ಯುದ್ಧಮಾಡುತ್ತೀರುವರು. ಅವರಿಗೆ ಜಯವುಂಟಾಗುವುದಕ್ಕಾಗಿ ನೀವು ಭವಾನೀದೇವಿಯನ್ನು ಪೂಜಿಸಬೇಕು. ದೇವಿಯ ಪ್ರಸಾದವಿಲ್ಲದಿದ್ದರೆ ಮನುಷ್ಯ ಪ್ರಯತ್ನವು ನಿಷ್ಪ್ರಯೋಜನವು. ಈ ವಿಚಾರವನ್ನು ತಮಗೆ ಅರಿಕೆಮಾಡಬೇಕೆಂದು ನನಗೆ ಅಪ್ಪಣೆಮಾಡಿರುವರು." ಎಂದು ಹೇಳಿದನು.

ಜನಾರ್ಧನನು ನಿಸರ್ಗವಾದ ಗಂಭೀರಸ್ವರದಿಂದ ಹೀಗೆ ಹೇಳಿದನು. "ಸನಾತನ ಹಿಂದೂ ಧರ್ಮಸಂರಕ್ಷಣಾರ್ಥವಾಗಿ ನಮಗೋಸ್ಕರ ತಮ್ಮಂಥವರು ಯಾವಾಗಲೂ ಕೆಲಸಮಾಡಬೇಕು ಆ ಧರ್ಮಕ್ಕೆ ನಿಜಸ್ವರೂಪನಾಗಿರುವ ಶಿವಾಜಿಮಹಾರಾಜರಿಗೆ ಜಯವುಂಟಾಗುವುದಕ್ಕಾಗಿ ತಪ್ಪದೆ ದೇವಿಯ ಪೂಜೆಯನ್ನು ಮಾಡುವೆನು. ಈ ವಿಷಯದಲ್ಲಿ ಎಷ್ಟುಮಾತ್ರವೂ ಲೋಪವಿರುವುದಿಲ್ಲವೆಂದು ಆ ಮಹಾನುಭಾವನಿಗೆ ತಿಳಿಸು."

ರಘುನಾಥ—ಇನ್ನೊಂದು ಪ್ರಾರ್ಥನೆಯುಂಟು. ಅವರು ದೊಡ್ಡಯುದ್ಧದಲ್ಲಿ ಪ್ರವೇಶಿಸಲು ಹೋಗುತ್ತಿರುವರು. ಆದುದರಿಂದ ಅದರ ಫಲವನ್ನು ಮುಂದಾಗಿಯೇ ತಿಳಿದುಕೊಳ್ಳಲು ಆಶಿಸುತ್ತಾರೆ. ದೂರದರ್ಶಿಗಳಾದ ನಿಮ್ಮಂತಹ ದೈವಜ್ಞರು ಈ ವಿಷಯದಲ್ಲಿ ಮುಖ್ಯವಾಗಿ ಅವರ ಕೋರಿಕೆಯನ್ನು ನೆರವೇರಿಸಬಲ್ಲರ!

ಜನಾರ್ಧನನು ತಡಮಾಡದೆ ಕಣ್ಣುಗಳನ್ನು ಮುಚ್ಚಿಕೊಂಡು ಅನಂತರ ಗಂಭೀರವಾಕ್ಕಿನಿಂದ—"ಈ ರಾತ್ರಿ ದೇವಿಯ ಸನ್ನಿಧಿಯಲ್ಲಿ ಶಿವಾಜಿಯ ಪ್ರಾರ್ಥನೆಯನ್ನು ವಿಜ್ಞಾಪಿಸುವೆನು; ಪ್ರಾತಃಕಾಲ ಪ್ರತ್ಯುತ್ತರವನ್ನು ತಿಳಿದು ಹೇಳುವೆನು" ಎಂದನು.

ಸಾಷ್ಟಾಂಗ ನಮಸ್ಕಾರ ಮಾಡಿ, ರಘುನಾಥನು ಹೊರಟು ಹೋಗುತ್ತಿರಲು, ಜನಾರ್ಧನನು—"ಇದಕ್ಕೆ ಮೊದಲು ನೀನು ಈ ದುರ್ಗಕ್ಕೆ ಬಂದಂತೆ ಕಾಣುವದಿಲ್ಲ. ಇದೇ ಮೊದಲನೆಯ ಸಾರಿಯೆ?"

ರಘು—ಚಿತ್ತ! ಈ ದಿನವೇ ಬಂದಿರುವೆನು.

ಜನಾ—ಈ ದುರ್ಗದಲ್ಲಿ ಯಾರಾದರೂ ಪರಿಚಯಸ್ಥರಿರುವರೇ? ಈ ರಾತ್ರಿ ಎಲ್ಲಿ ಇರಬೇಕೆಂದು ಯೋಚಿಸಿರುವೆ?

ರಘು—ಪರಿಚಯಸ್ಥರಿಲ್ಲ. ಹೊಸಬ, ರಾತ್ರಿ ಇಲ್ಲಿಯೇ ವಿಶ್ರಾಂತಿ ಹೊಂದಿ ಪ್ರಾತಃಕಾಲ ಹೊರಟು ಹೋಗಬೇಕೆಂದಿರುವೆನು.

ಜನಾ—ವೃಥಾ ಏಕೆ ಕ್ಲೇಶವನ್ನು ಅನುಭವಿಸುವೆ?

ರಘು—ಪ್ರಭುವಿನ ಅನುಗ್ರಹವಿದ್ದರೆ ನನಗೆ ಕ್ಲೇಶ ವಿರಲಾರದು. ನಮ್ಮಂತಹ ಸೇವಕರು ರಾತ್ರಿಯನ್ನು ಈ ರೀತಿಯಲ್ಲಿಯೇ ಕಳೆಯಬೇಕಾಗಿರುವುದು.

ಜನಾ—ಮಗು ! ಯುದ್ಧಸಮಯದಲ್ಲಿ ಕಷ್ಟವು ಅನಿವಾರ್ಯವಾದುದು. ಈಗ ನೀನು ಶ್ರಮ ಪಡಬೇಕಾದ ಅಗತ್ಯವಿಲ್ಲ. ಇಲ್ಲಿಯೇ ಇರು. ನನ್ನ ಪ್ರೀತಿ ಪಾತ್ರಳಾದ ಮಗಳು ನಿನಗೆ ಭೋಜನ ಮಾಡಿಸುವಳು. ರಾತ್ರಿ ವಿಶ್ರಮಿಸಿಕೊಂಡು ದೇವಿಯ ಅಪ್ಪಣೆಯನ್ನು ತಿಳಿದುಕೊಂಡು ಪ್ರಭುಗಳ ಸನ್ನಿಧಿಗೆ ಹೋಗುವನಾಗು.

ಆಕಸ್ಮಿತವಾಗಿ ರಘುನಾಥನ ಹೃದಯವು ಒಪ್ಪಿ ಹರ್ಷಗೊಂಡಿತು. ಸಂತೋಷದಿಂದ ಆತನು ಹೇಳಿದಹಾಗಾಯಿತು. ಅದೇನು ವೇದನೆಯೇ? ಇಲ್ಲವೆ ಸಂತೋಷದಿಂದ ಉಂಟಾದುದೇ? ಜನಾರ್ಧನನ ಪ್ರೀತಿ ಪಾತ್ರಳಾದ ಮಗಳೇ? ಆರಾಮದಲ್ಲಿ ಕಾಣಿಸಿದವಳು ರಜಪೂತ ಕುಮಾರಿಯಲ್ಲವೆ? ರಾತ್ರಿವೇಳೆಯಲ್ಲಿ ಸರಳೆಯು ತಂದೆಯ ಅಪ್ಪಣೆಯಂತೆ ಅತಿಥಿಗೆ ಆಹಾರವನ್ನು ಸಿದ್ಧ ಪಡಿಸಿದಳು. ರಘುನಾಥನು ಊಟ ಮಾಡುತ್ತ ಕುಳಿತಿದ್ದನು. ಸರಳಬಾಲೆಯು ಅತನ ಹಿಂದೆ ನಿಂತುಕೊಂಡಿದ್ದಳು. ಆಗಂತುಕನಿಗೆ ಒಬ್ಬ ತರುಣಿಯಿಂದ ಆಹಾರವನ್ನು ಬಡಿಸುವುದು ಈಗಲೂ ಮಹಾರಾಷ್ಟ್ರದಲ್ಲಿ ಕಂಡುಬಗುತ್ತಿರುವುದು. ರಘುನಾಥನು ಊಟಮಾಡಲಿಕ್ಕೆ ಪ್ರಾರಂಭಿಸಿದನೇ ಹೊರತು ಅತನ ಮನಸ್ಸು ನೆಮ್ಮದಿಯಲ್ಲಿರಲಿಲ್ಲ. ಸರಳೆಯು ಶ್ರದ್ಧೆಯಿಂದ ವಿವಿಧ ಭೋಜ್ಯ ಪದಾರ್ಥಗಳನ್ನು ಬಡಿಸಿದ್ದರೂ ತಾನು ಏನು ಊಟಮಾಡುತ್ತಿದ್ದನೋ ಆತನಿಗೆ ಗೊತ್ತೇ ಆಗಲಿಲ್ಲ. ರಘುನಾಥನು ನಡನಡುವೆ ಅಸಂಬದ್ಧವಾದ ಮಾತುಗಳನ್ನು ಆಡುತ್ತಾ ಅನ್ಯಮನಸ್ಕನಾಗಿದ್ದನು. ಭೋಜನವು ಸಾಂಗವಾಗಿ ನಡೆದ ಕೂಡಲೇ ಶ್ವೇತಶಿಲಾ ನಿರ್ಮಿತವಾದ ಒಂದು ಪಾತ್ರೆಯಿಂದ ಒಳ್ಳೆಯ ಷರಬತ್ತನ್ನು ಮಾಡಿ ಸರಳೆಯು ಆತನಿಗೆ ಕೊಟ್ಟಳು. ಆಗ ಅತನು ಅವಳ ಕಡೆಗೆ ಉದ್ವೇಗಚಿತ್ತನಾಗಿ ನೋಡಿದನು. ನಾಲ್ಕು ಕಣ್ಣುಗಳೂ ಒಂದಾದವು ಅವಳ ಮುಖ ಮಂಡಲವು ಲಜ್ಜೆಯಿಂದ ಕೆಂಪೇರಿತು. ಅನಂತರ ಅವಳು ತಲೆಯನ್ನು ಬಗ್ಗಿಸಿಕೊಂಡು ಹೊರಕ್ಕೆ ಹೋದಳು. ರಘುನಾಥನೂ ನಾಚಿಕೆಯಿಂದ ತಲೆ ತಗ್ಗಿಸಿದನು.

ಕೈಯನ್ನು ತೊಳೆಯಲು ಸರಳೆಯು ನೀರನ್ನು ತೆಗೆದುಕೊಂಡು ಬಂದಳು. ರಘುನಾಥನು ರಸಿಕನಲ್ಲ. ಈ ವೇಳೆಯಲ್ಲಿ ಅವಳು ಮುಖವನ್ನು ಮೇಲಕ್ಕೆ ಎತ್ತಲಿಲ್ಲ. ಸ್ವರ್ಣಕಂಕಣ ವಿಭೂಷಿತವಾದ ಅವಳ ಕೈ ಮಾತ್ರ ಸ್ಪರ್ಶವಾಯಿತು. ರಘುನಾಥನು ನಿಟ್ಟುಸಿರುಬಿಟ್ಟನು. ಆತನಿಗೆ ಹಾಸಗೆಯೂ ಸಿದ್ಧವಾಯಿತು. ಆದರೆ ಅವನು

ಮಲಗಲಿಲ್ಲ. ಬಾಗಿಲನ್ನು ತೆರೆದು ನಕ್ಷತ್ರಗಳ ಬೆಳಕಿನಲ್ಲಿ ಹೂವಿನ ತೋಟದಲ್ಲಿ ವಿಹರಿಸತೊಡಗಿದನು.

ನಕ್ಷತ್ರದಿಂದ ಅಲಂಕೃತವಾದ ನಭೋಮಂಡಲದಲ್ಲಿ ಎವೆಯಿಕ್ಕದೆ ನೋಡುತ್ತಾ ಆ ತರುಣಯೋಧನು ಏನನ್ನೋ ಚಿಂತಿಸುತ್ತಿದ್ದನು. ಕ್ರಮಾಕ್ರಮವಾಗಿ ಕತ್ತಲೆಯು ದಟ್ಟವಾಗಿ ತೋರಿತು. ಆ ಸಮಯದಲ್ಲಿ ಲೋಕವೆಲ್ಲವೂ ನಿದ್ರಾವಸ್ಥೆಯಲ್ಲಿದ್ದಿತು. ಎಲ್ಲೆಲ್ಲಿಯೂ ನೀರವ! ನಿಶ್ಯಬ್ದ! ನಿಷ್ಪಂದ! ಜಾವಜಾವಕ್ಕೆ ಬಾರಿಸಲ್ಪಡುವ ಘಂಟಾರವದಿಂದ ನಿಶ್ಯಬ್ದವಾಗಿರುವ ಪರ್ವತಗಳು ಕೂಡ ಪ್ರತಿಧ್ವನಿಮಾಡುತ್ತಿದ್ದವು. ಆದರೆ ನಮ್ಮ ಕಥಾನಾಯಕನಾದರೋ ಬಗೆಬಗೆಯ ಚಿಂತಾಮಗ್ನನಾಗಿದ್ದನು.

ಆ ರಾತ್ರಿ ತಾನು ಉದ್ಯಾನದಲ್ಲಿ ಏಕಾಕಿ ಸಂಚರಿಸುತ್ತಿದ್ದನೆಂಬುದನ್ನೇ ಆತನು ತಿಳಿಯನು. ಈವರೆಗೂ ರಘುನಾಥನು ಬಾಲನೇ! ಆದರೆ ಆಕಸ್ಮಿಕವಾಗಿ ಆತನಿಗೆ ಶಾಂತಜೀವಿತಾಕಾಶದಲ್ಲಿ ನೂತನಕಾಂತಿಯು ವ್ಯಾಪಿಸಿತು. ಅವನ ಮನೋವೃತ್ತಿ ಬದಲಾಯಿತು. ಆನಂದಮಯಿಯಾದ ಆ ರಾಜಕುಮಾರಿಯು ಆತನ ಮನಸ್ಸಿನಲ್ಲಿ ಕಾಣುತ್ತ ಬಂದಳು. ಅವಳ ಸೊಬಗು, ಆ ಮಧುರಾಧರ, ಆ ನಿಬಿಡವಾದ ಕೇಶರಾಶಿ, ಆ ದುಂಡಾದ ಕೈಗಳು, ಆ ವಿಶಾಲವಾದ ಕಣ್ಣುಗಳು, ಆ ಲಾವಣ್ಯವು— ಇವೆಲ್ಲ ಆತನ ಇದಿರಿಗ ಪ್ರತ್ಯಕ್ಷವಾಗಿ ಕಣ್ಣುಗಳಿಗೆ ಕಟ್ಟಿದಂತಾದುವು. ರಘುನಾಥಾ! ಆ ಸುಂದರಿ ನಿನ್ನವಳಾಗುವಳೇ? ನೀನು ಸಾಮಾನ್ಯನು, ಹವಲ್ದಾರನು. ಜನಾರ್ಧನನು ಕುಲೀನ ಬ್ರಾಹ್ಮಣನು. ಆತನ ಪ್ರಿಯಪುತ್ರಿಯನ್ನು ರಾಜರುಕೂಡ ಪ್ರಾರ್ಥಿಸತಕ್ಕವರಾಗಿರುವರು. ನೀನೇಕೆ ಈ ವಿಧವಾಗಿ ವೃಥಾ ತೊಂದರೆ ಪಡಿಸಿಕೊಳ್ಳುವೆ? ರಘುನಾಥಾ! ಈ ವ್ಯರ್ಥ ತೃಷ್ಣೆಯಿಂದೇಕೆ ಬಳಲುವೆ? ಆಗಲಿ, ಯೌವನದಲ್ಲಿ ಆಶೆಯೇ ಪ್ರಬಲವಾಗಿರುವುದು. ನಾವು ಶೀಘ್ರವಾಗಿ ನಿರಾಶೆಹೊಂದುವುದಿಲ್ಲ; ಅಸಾಧುವಾದುದು ಸಾಧ್ಯವಾಗಿ ತೋರುವುದು.

ರಘುನಾಥನು ಆಕಾಶವನ್ನು ನೋಡುತ್ತಾ ತಲೆಯಮೇಲೆ ಕೈಗಳನ್ನು ಇಟ್ಟುಕೊಂಡು ತನ್ನಲ್ಲಿ ತಾನು ಹೀಗೆ ಮಾತನಾಡಿಕೊಂಡನು.—“ಭಗವಂತನೇ! ಸಹಾಯವನ್ನು ಮಾಡು. ತಪ್ಪದೆ ಕೃತಾರ್ಥನಾಗುವೆನು. ಮನುಷ್ಯನಿಂದ ಸಾಧ್ಯವಾದ ಯಶಸ್ಸು ನನಗೆ ಮಾತ್ರ ಬಾರದೆ ಹೋಗುವುದೇ? ದೇವತೆಗಳಿರಾ! ನನಗೆ ನೀವು

ಸಹಾಯವಮಾಡಿ. ನಾನು ನನ್ನ ತಂದೆಯ ಹೆಸರನ್ನು ಉಳಿಸಿರುವೆನು ಸರಳೆ! ಆಗ ನಾನು ನಿನಗೆ ಯೋಗ್ಯನಾಗದೆ ಇರುವೆನೆ? ಈ ದಿನದ ವಿಚಾರವೆಲ್ಲವನ್ನೂ ನಿನಗೆ ಕಥೆಯಾಗಿ ಹೇಳುವೆನು. ಅನಂತರ ನಿನ್ನ ಸುಂದರವಾದ ಹಸ್ತಗಳನ್ನು ಈ ಕಾತರವಾದ ನನ್ನ ಹಸ್ತಗಳಿಂದ ಹಿಡಿದುಕೊಂಡು ನಿನ್ನ ತನುಲತೆಯು ಕಂಪಿಸುತ್ತಿರಲು ನಿನ್ನನ್ನು ಆಲಂಗಿಸಿಕೊಂಡು, ನಿನ್ನ ಮಧುರಾಧರ..........'' ರಘುನಾಥಾ, ಓ, ರಘುನಾಥಾ! ಉನ್ಮತ್ತನಾಗಬೇಡ,..................

ಅನಂತರ ರಘುನಾಥನು ಹೇಗೋ ಮನಸ್ಸನ್ನು ಸರಿಪಡಿಸಿಕೊಂಡು ಮಂದಿರಕ್ಕೆ ಹಿಂದಿರುಗಿದನು. ಮಧ್ಯಮಾರ್ಗದಲ್ಲಿ ಒಂದು ಹಾರವೂ ಎರಡು ಮುತ್ತುಗಳ ಹವಳದ ಹಾರವೂ ಒಂದು ಕಡೆ ಕುಚ್ಚಿನಂತೆ ಬಿದ್ದಿರುವುದನ್ನು ಕಂಡು ಗಮನಿಸಿ ನೋಡಿದನು. ಸಾಯಂಕಾಲದಲ್ಲಿ ಸರಳೆಯ ಕಂಠದಲ್ಲಿ ಆ ಹಾರಗಳು ಕಂಗೊಳಿಸುತ್ತಿದ್ದವು. ಅವಳ ಅಜಾಗರೂಕತೆಯಿಂದಲೇ ಕೆಳಗೆ ಅವು ಬಿದ್ದಿದ್ದುವು. ಅದನ್ನು ನೋಡಿ ರಘುನಾಥನು ಆಕಾಶದ ಕಡೆಗೆ ನೋಡುತ್ತಾ --' ದೈವವೇ! ನನ್ನ ಆಶೆಯು ಸಫಲವಾಗುವುದಕ್ಕೆ ಮೊದಲನೆಯ ಶುಭಸೂಚನೆಯೇ ಇದು.' ಎಂದು ತನ್ನಲ್ಲಿ ತಾನೇ ಹೇಳಿಕೊಂಡನು.

ತರುವಾಯ ಹಾರವನ್ನು ವಸ್ತ್ರದಲ್ಲಿ ಕಟ್ಟಿಕೊಂಡು ರಘುನಾಥನು ನಿದ್ದೆ ಮಾಡಿದನು. ಮರುದಿನ ಸೂರ್ಯನು ಉದಯಿಸುವುದಕ್ಕೆ ಮೊದಲು ಜನಾರ್ಧನದೇವನು ಬಂದು, '' ಮ್ಲೇಚ್ಛರೊಡನೆ ಈಗಿನ ಯುದ್ಧದಲ್ಲಿ ವಿಜಯವೂ ಸ್ವಜಾತಿಯವರೊಡನೆ ಸಂಗ್ರಾಮದಲ್ಲಿ ಪರಾಜಯವೂ ಉಂಟಾಗುವುದು.'' ಎಂದು ಹೇಳಿದನು. ದುರ್ಗವನ್ನು ಬಿಡುವುದಕ್ಕೆ ಮುಂಚಿತವಾಗಿ ರಘುನಾಥನು ಸರಳಬಾಲೆಯನ್ನು ಕಂಡನು. ಹಿಂದಿನಂತೆಯೇ ಸರಳಬಾಲೆಯು ಪುಷ್ಪಗಳನ್ನು ತರಲು ಹೂದೋಟಕ್ಕೆ ಹೋದಳು. ರಘುನಾಥನು ಮೆಲ್ಲಮೆಲ್ಲನೆ ಆ ಸ್ಥಳವನ್ನು ಸೇರಿ ಹೃದಯೋದ್ವೇಗವನ್ನು ಅಡಗಿಸಿಕೊಂಡು ನಡಗುತ್ತಿರುವ ಕಂಠದಿಂದ-''ಭದ್ರೆ! ರಾತ್ರಿ ಈ ಹಾರವು ನನಗೆ ಇಲ್ಲಿ ಸಿಕ್ಕಿತು. ಇದನ್ನು ಕೊಡುವುದಕ್ಕಾಗಿ ಬಂದೆನು. ಅಪರಿಚಿತನ ನಡತೆಯನ್ನು ಮನ್ನಿಸಬೇಕು.'' ಎಂದು ಹೇಳಿದನು.

ಆ ವಿನಯ ವಾಕ್ಯಗಳನ್ನು ಕೇಳಿ ಸರಳೆಯು ಹಿಂತಿರುಗಿ ನೋಡಲು ಆ ವಿಪ್ರಯುವನ ಸೊಬಗು ಗೊತ್ತಾಯಿತು. ಆಗ ಅವಳು ಗಾಬರಿಯಿಂದಲೂ ಅನುರಾಗ

ವಿಂದಲೂ ಅದನ್ನು ಕೇಳಿ, “ಅಪ್ಪಣೆಯಾದರೆ ಈ ಹಾರವನ್ನು ಯಥಾಸ್ಥಾನದಲ್ಲಿಡುವೆನು. ಈ ಆಜ್ಞೆಯನ್ನು ನನಗೆ ಅನುಗ್ರಹಿಸಿರಿ. ನಿಮಗೆ ದೇವರು ಸುಖವನ್ನುಂಟುಮಾಡಲಿ,” ಎಂದು ಉತ್ತರವಿತ್ತಳು.

ಸರಳೆಯು ಶರೀರವು ನಡಗುತ್ತಿರಲು ಒಂದು ಸಾರಿ ರಘುನಾಥನ ಮುಖವನ್ನು ನೋಡಲು, ಆ ವಿಶಾಲವಾದ ನೇತ್ರಗಳ ತೇಜಃಪುಂಜವು ತನ್ನ ಮೇಲೆ ಪ್ರಸರಿಸುತ್ತಿದ್ದುದರಿಂದ ಆತನ ಎದೆಯು ತಟತಟನೆ ಹೊಡೆದುಕೊಳ್ಳಲಾರಂಭಿಸಿತು. ಲಜ್ಜೆಯು ಹೆಚ್ಚಾಗಿ ಆಕೆಯ ದೃಷ್ಟಿಯು ನೆಲದಮೇಲೆ ಪ್ರಸರಿಸಿತು. ಅಂಗೀಕಾರ ಲಕ್ಷಣವನ್ನು ನೋಡಿ ರಘುನಾಥನು ಚಂಚಲಹಸ್ತದಿಂದ ಮುತ್ತಿನಹಾರವನ್ನು ಯಥಾಸ್ಥಾನದಲ್ಲಿಟ್ಟನು. ಅವಳ ಪವಿತ್ರ ಶರೀರವನ್ನು ಸ್ಪರ್ಶಮಾಡಲಿಲ್ಲ;—ಆನಂತರ ಸರಳಬಾಲೆಯೊಡನೆ—“ಇನ್ನು ಅತಿಥಿಗೆ ಅನುಜ್ಞೆ ಕೊಡಬೇಕು.” ಎಂದು ಹೇಳಿದನು. ಈ ಪರ್ಯಾಯದಲ್ಲಿ ಅವಳು ನಾಚಿಕೆಯನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿಕೊಂಡು ಆತನ ಮುಖವನ್ನು ನೋಡಿ, ಪುನಃ ದೃಷ್ಟಿಯನ್ನು ಕೆಳಗೆ ತಿರುಗಿಸಿ ಅವ್ಯಕ್ತ ಮಧುರ ಧ್ವನಿಯಿಂದ “ನಿಮ್ಮಿಂದ ಅನುಗ್ರಹಿಸಲ್ಪಟ್ಟಿರುವೆನು. ಪುನಃ ದುರ್ಗಕ್ಕೆ ಬಂದಾಗ ನಮ್ಮ ತಂದೆಯ ಮನೆಗೆ ದಯಮಾಡಿಸುವಿರೆಂದು ನಂಬುತ್ತಿರುವೆನು.” ಎಂದಳು.

ದಾಹದಿಂದ ಸಂತಪ್ತನಾದವನಿಗೆ ಪ್ರಥಮ ವೃಷ್ಟಿಬಿಂದುಗಳಂತೆಯೂ ಕತ್ತಲೆಯಲ್ಲಿ ದಾರಿತಪ್ಪಿದ ಪ್ರಯಾಣಿಕನಿಗೆ ಮಿಂಚಿನಂತೆಯೂ ಸರಳೆಯು ಆಡಿದ ಈ ಪ್ರಿಯವಾಕ್ಯಗಳು ರಘುನಾಥನ ಮನಸ್ಸನ್ನು ಸುಧಾಪ್ರವಾಹದಿಂದ ಸ್ನಾನ ಮಾಡಿಸಿತು. ಆಮೇಲೆ ರಘುನಾಥನು ಅವಳೊಡನೆ ‘‘ಕುಮಾರಿ! ನಾನು ಪರಭೃತ್ಯನು. ಯುದ್ಧವೇ ನನಗೆ ಜೀವನವು. ಎಂದಿಗಾದರೂ ಇಲ್ಲಿಗೆ ಬರುವೆನೋ ಬಾರೆನೋ ಹೇಳಲಾರೆನು. ಆದರೂ ನಾನು ಬದುಕಿರುವವರೆಗೂ ನಿಮ್ಮ ಸೌಜನ್ಯವನ್ನೂ ಪರಿಚರ್ಯಾ ಸ್ವರೂಪವನ್ನೂ ಮರೆಯುವದಕ್ಕಾಗುವುದಿಲ್ಲ ಎಂದನು.

ಸರಳಬಾಲೆಯು ಪುನಃ ಮಾತನ್ನಾಡಲಿಲ್ಲ. ನೋಡಲು ಅವಳ ವಿಶಾಲನೇತ್ರಗಳಿಂದ ಬಾಷ್ಪವಾರಿಬಿಂದುಗಳು ಉದುರುತ್ತಿದ್ದುವು; ರಘುನಾಥನ ಕಣ್ಣುಗಳಿಂದಲೂ ನೀರು ಬಂದಿತು.

---

## ಮೂರನೆಯ ಪ್ರಕರಣ

---

### (ಷಯಿಸ್ತಾಖಾನ)

ಕೆಲವು ವರ್ಷಗಳಿಂದಲೂ ಶಿವಾಜಿಯು ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತಿದ್ದರೂ ದೆಹಲಿಯ ಚಕ್ರವರ್ತಿಯು ಆತನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕೆ ೧೬೫೯ನೆ ಇಸವಿಯವರೆಗೂ ಪ್ರಯತ್ನಮಾಡಿದವನಲ್ಲ. ಆ ವರ್ಷದಲ್ಲಿ "ಅಮೀರ್ ಉಮ್ರಾ" ಎಂಬ ಬಿರುದಿನೊಡನೆ ಷಯಿಸ್ತಾಖಾನನು ದಖನ್ನಿನ ಸುಭೇದಾರನಾಗಿ ನಿಯಮಿಸಲ್ಪಟ್ಟು ಶಿವಾಜಿಯನ್ನು ಪರಾಭವ ಪಡಿಸಬೇಕೆಂದು ದಿಹಲಿಯ ಬಾದಶಹನಿಂದ ಆಜ್ಞಾಪ್ತನಾದನು. ಶಿವಾಜಿಯು ೧೬೬೦ನೆಯ ವರ್ಷದ ಪ್ರಾರಂಭದಲ್ಲಿಯೇ ಪೂನಾ, ಚಾಕಣ ಮೊದಲಾದ ದುರ್ಗಗಳನ್ನೂ ಮತ್ತೆ ಕೆಲವು ಪ್ರದೇಶಗಳನ್ನೂ ಸ್ವಾಧೀನ ಪಡಿಸಿಕೊಂಡನು. ಅನಂತರ ಖಾನನು ಶಿವಾಜಿಯನ್ನು ಸೆರೆ ಹಿಡಿಯಬೇಕೆಂದು ನಿಶ್ಚಯಿಸಿದನು. ಡಿಲ್ಲೀಶ್ವರನ ಅಪ್ಪಣೆಯಂತೆ ಮೇವಾರದ ರಾಜನಾದ ಜಸವಂತಸಿಂಗನು ಈ ಸಮಯದಲ್ಲಿಯೇ ಬಂದು ಷಯಿಸ್ತಾಖಾನನನ್ನು ಸೇರಿಕೊಂಡನು. ಆದುದರಿಂದ ಶಿವಾಜಿಯ ವಿಪತ್ತಿಗೆ ಮೇರೆಯಿಲ್ಲದೆ ಇತ್ತು. ರಾಜಪುತ್ರ ಸೈನಿಕರು ಪೂನಾನಗರದ ಸಮೀಪದಲ್ಲಿಯೇ ಬಂದು ಇಳಿದರು ಷಯಿಸ್ತಾಖಾನನಿಗೆ ದಾದಾಜೀ ಕೊಂಡದೇವನ ಮನೆಯಲ್ಲಿ, ಎಂದರೆ ಶಿವಾಜಿಯು ಬಾಲ್ಯದಲ್ಲಿ ತಾಯಿಯೊಡನೆ ವಾಸ ಮಾಡುತ್ತಿದ್ದ ಉಪ್ಪರಿಗೆಯ ಮನೆಯಲ್ಲಿ ಬಿಡದಿ ಮಾಡಿದ್ದರು. ಅವನು ಶಿವಾಜಿಯ ನಡತೆಯನ್ನು ಚೆನ್ನಾಗಿ ತಿಳಿದಿದ್ದನು. ಆದುದರಿಂದ ಮಹಾರಾಷ್ಟ್ರರಾರೂ ಅಪ್ಪಣೆ ಪಡೆಯದೆ ಪೂನಾನಗರದೊಳಗೆ ಪ್ರವೇಶಿಸಬಾರದೆಂದು ಕಟ್ಟುಮಾಡಿದನು. ಪೂನಾನಗರಕ್ಕೆ ಸಮೀಪದಲ್ಲಿದ್ದ ಸಿಂಹಗಡದುರ್ಗದಲ್ಲಿ ಶಿವಾಜಿಯು ಸೈನಿಕರೊಡನೆ ಸಿದ್ಧನಾಗಿದ್ದನು. ಮಹಾರಾಷ್ಟ್ರರು ಆಗಲೂ ಯುದ್ಧದಲ್ಲಿ ಶಿಕ್ಷಣಹೊಂದಿ ಪ್ರಸಿದ್ಧರಾಗಿರಲಿಲ್ಲ. ಶಿಕ್ಷಿತರಾದ ಡಿಲ್ಲಿಯ ಸೈನಿಕರೊಡನೆ ಇದಿರಾಗಿ ನಿಂತು ಯುದ್ಧಮಾಡಿದರೆ ಹೇಗಾಗುವುದೋ-ಎಂಬ ಶಂಕೆಹುಟ್ಟಿತು, ಸ್ವಾತಂತ್ರ್ಯ ರಕ್ಷಣಾರ್ಥವಾಗಿ ಶಿವಾಜಿಗೆ ಬುದ್ಧಿಬಲಕ್ಕಿಂತಲೂ ಮತ್ತೊಂದು ಮಾರ್ಗವು ತೋರದಿದ್ದಿತು.

ಚೈತ್ರಮಾಸದ ಕೃಷ್ಣಪಕ್ಷ. ಒಂದಾನೊಂದು ದಿನ ರಾತ್ರಿ ಪರಾಕ್ರಮಶಾಲಿಯಾದ ಮೊಗಲರ ಸೇನಾಪತಿ ಷಯಿಸ್ತಾಖಾನನು ತನ್ನ ಆಪ್ತ ಮಂತ್ರಿಗಳೊಡನೆ ಸಭೆಯನ್ನು ಮಾಡಿಕೊಂಡಿದ್ದನು. ನಾಲ್ಕುದಿಕ್ಕುಗಳಲ್ಲಿಯೂ ದೀಪಗಳು ಜಾಜ್ವಲ್ಯಮಾನವಾಗಿ ಉರಿಯುತ್ತಲಿದ್ದುವು. ಉಪವನದ ಕಡೆಯಿಂದ ಪುಷ್ಪಗಳ ಸುವಾಸನೆಯನ್ನು ಹೊತ್ತುಕೊಂಡು ಕಂಡಿಗಳ ಮೂಲಕ ಮಂದಮಾರುತನು ಒಳಗೆ ಪ್ರವೇಶಿಸಿ ಎಲ್ಲರನ್ನೂ ಪುಳುಕಿತಗಾತ್ರರನ್ನಾಗಿ ಮಾಡುತಿದ್ದನು. ಆ ಅಂಧಕಾರ ಸಮಯದಲ್ಲಿ ಒಂದೆರಡು ನಕ್ಷತ್ರಗಳು ಥಳಥಳನೆ ಹೊಳೆಯುತ್ತಿದ್ದುವು. ಶಿವಾಜಿಯನ್ನು ಜಯಿಸುವ ಉಪಾಯವು ಆ ಸಭೆಯಲ್ಲಿ ಚರ್ಚಿಸಲ್ಪಡುತ್ತಲಿದ್ದಿತು. 'ಆಗ್ವರ್' ಎಂಬ ಸರದಾರನು ಹೀಗೆ ಹೇಳಿದನು.—

"ನಮ್ಮ ಸೇನೆಯು ಇದಿರಿಗೆ, ಮಹಾರಾಷ್ಟ್ರರ ಸೇನೆಯು ಬಿರುಗಾಳಿಗೆ ಸಿಕ್ಕಿದ ಒಣಗಿದ ಎಲೆಗಳಂತೆ ಆಕಾಶಕ್ಕೆ ಹಾರಿ ಹೋಗುವುದು; ಇಲ್ಲವೆ ಹೆದರಿ ನೆಲದಲ್ಲಿಯೇ ಅಡಗಿಕೊಳ್ಳುವದು.''

ಸುಮಾರು ಒಂದು ವರ್ಷದಿಂದಲೂ ಮಹಾರಾಷ್ಟ್ರರ ಬಲವಿಕ್ರಮಗಳನ್ನು ನೋಡುತ್ತಲಿದ್ದ ವೃದ್ಧಸೈನಿಕನಾದ ಚಾಂದಖಾನನೆಂಬುವನು ಮೆಲ್ಲಗೆ ಹೀಗೆ ಹೇಳಿದನು.—"ಅವರಿಗೆ ಎರಡು ವಿಧವಾದ ಸಾಮರ್ಥ್ಯವಿರುವುದೆಂಬುದೇ ನನ್ನ ಅಭಿಪ್ರಾಯವು''

ಷಯಿಸ್ತಾ—ಯಾತರಿಂದ?

ಚಾಂದಖಾನ—ಕಳೆದವರ್ಷ ಕೇವಲ ಮಹಾರಾಷ್ಟ್ರರು ಚಾಕಣ ದುರ್ಗದಲ್ಲಿ ಪ್ರವೇಶಿಸಿದಾಗ ನಮ್ಮ ಬಲವೆಲ್ಲವೂ ಮಹಾ ಪ್ರಯತ್ನಮಾಡಿ ಆ ದುರ್ಗವನ್ನು ಸ್ವಾಧೀನಪಡಿಸಿಕೊಂಡ ವಿಚಾರವು ಪ್ರಭುಗಳಿಗೆ ನೆನಪಿನಲ್ಲಿರಬಹುದು. ಒಂದು ದುರ್ಗವನ್ನು ಜಯಿಸುವಷ್ಟರಲ್ಲಿಯೇ ಅನೇಕಮಂದಿ ಯೋಧರು ನಾಶಹೊಂದಿರುವರು. ಈ ವರ್ಷ ನಮ್ಮ ಸೇನೆಗಳನ್ನು ದೇಶದಲ್ಲಿ ಸ್ವಲ್ಪಭಾಗ ನಿಲ್ಲಿಸಿಟ್ಟರೂ ನೇತಾಜಿಯು ಆಕಾಶಮಾರ್ಗದಲ್ಲಿ ಹಾರಿಹೋಗಿ ಅಹಮುದ್‌ನಗರ, ಔರಂಗಾಬಾದ್ ವರೆಗೂ ದೇಶವನ್ನು ಪುನಃ ಸ್ವಾಧೀನ ಪಡಿಸಿಕೊಂಡನು.

ಷಯಿಸ್ತಾ—ಚಾಂದಖಾನನು ಬಹು ದೊಡ್ಡವನು! ಬೆಟ್ಟದ ಇಲಿಗಳನ್ನು ನೋಡಿ ಹೆದರುತ್ತಿರುವನು. ಹೀಗೆ ಈತನಿಗೆ ಈ ತರದ ಭಯವು ಇರಬಹುದು.

ಈ ಮಾತುಗಳನ್ನು ಕೇಳಿ ಚಾಂದಖಾನನು ನಿರುತ್ತರನಾಗಿ ತಲೆತಗ್ಗಿಸಿದನು.

ಆಗ್ವರ್—ಪ್ರಭುವೆ! ಸರಿಯಾಗಿ ಅಪ್ಪಣೆಕೊಟ್ಟಿರಿ. ಮಹಾರಾಷ್ಟ್ರರು ಇಲಿಗಳೇ ಸರಿ. ಬೆಟ್ಟದ ಇಲಿಗಳಂತೆ ಅವರು ಬೆಟ್ಟಗಳಲ್ಲಿಯೇ ಅಡಗಿರಬಲ್ಲರು.

ಚಾಂದ—ಬೆಟ್ಟದ ಇಲಿಗಳು ಪೂನಾನಗರದ ಭೂಗರ್ಭದಲ್ಲಿ ರಂಧ್ರವನ್ನು ಮಾಡಿ, ಪ್ರವೇಶಿಸಿ ಹೊರಗೆ ಹೋದರೆ ನಮ್ಮ ಗತಿಯೇನಾಗುವುದೊ?

ಷಯಿಸ್ತಾ—ಇಲ್ಲಿ ಸಾವಿರಾರು ಬೆಕ್ಕುಗಳೂ ಮರಿಗಳೂ ಇವೆ. ಇಲಿಗಳು ಏನೂ ಮಾಡಲಾರವು. ಈ ಮಾತುಗಳಿಗೆ ಸಭಾಸದರೆಲ್ಲರೂ "ಕೆರಾಮತ್-ಕೆರಾಮತ್" ಎಂದು ಕೂಗಿಕೊಂಡರು.

ಮಹಾರಾಷ್ಟ್ರರ ವಿಷಯದಲ್ಲಿ ವಿವಿಧ ಪ್ರಸಂಗಗಳು ನಡೆದಬಳಿಕ ಯುದ್ಧ ಕ್ರಮವನ್ನು ನಿರ್ಧರಿಸತೊಡಗಿದರು. ಚಾಕಣ ದುರ್ಗವು ಸ್ವಾಧೀನವಾದುದು ಮೊದಲು ಷಯಿಸ್ತಾಖಾನನ ಧೈರ್ಯವು ಅಡಗಿ, ದುರ್ಗಗಳನ್ನು ಮುತ್ತುವುದರಿಂದ ಶೀಘ್ರವಾಗಿ ಜಯವುಂಟಾಗಲಾರದೆಂಬ ಅಭಿಪ್ರಾಯವು ಆತನ ಮನಸ್ಸಿನಲ್ಲಿ ನಾಟಿದ್ದಿತು.

ಚಾಂದ—ಪ್ರಭುವೇ, ದುರ್ಗಗಳೇ ಮಹಾರಾಷ್ಟ್ರರ ಮುಖ್ಯತಾಣ್ಯಗಳು; ಅವರು ಎಂದಿಗೂ ಇದಿರಾಗಿ ಬಂದು ಯುದ್ಧಕ್ಕೆ ನಿಲ್ಲರು. ಒಂದುವೇಳೆ ಬಂದು ಯುದ್ಧಮಾಡಿದರೂ ಅವರಿಗೆ ವಿಶೇಷ ನಷ್ಟವಾಗುವುದಿಲ್ಲ. ಏಕೆಂದರೆ, ದೇಶವು ಪರ್ವತಮಯವಾಗಿ ಅವರ ಸೇನೆಯು ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಿ ಹೋಗುವ ಮಾರ್ಗವನ್ನು ನಾವು ಕಂಡು ಹಿಡಿಯಲಾರೆವು. ಆದರೆ, ದುರ್ಗಗಳನ್ನು ಒಂದೊಂದಾಗಿ ಸ್ವಾಧೀನ ಪಡಿಸಿಕೊಂಡುದಾದರೆ ಅವರು ತಪ್ಪದೆ ಡಿಲ್ಲಿಗೆ ಅಧೀನರಾಗುವರು.

ಷಯಿಸ್ತಾ—ಏನು? ಯುದ್ಧದಲ್ಲಿ ಸೋತು ಮಹಾರಾಷ್ಟ್ರರು ಪಲಾಯನರಾಗುವಾಗ ನಾವು ಹಿಂದಟ್ಟಿಸಿಕೊಂಡು ಹೋಗಲಾರೆವೆ? ನಮ್ಮ ಕುದುರೆಯ ದಾವು ತರಿಲ್ಲವೆ? ಆ ದಂಡು ಮಹಾರಾಷ್ಟ್ರರನ್ನು ಧ್ವಂಸಮಾಡುವದಿಲ್ಲವೆ?

ಚಾಂದ---ಯುದ್ಧವು ನಡೆದ ಪಕ್ಷದಲ್ಲಿ ನಮಗೆ ತಪ್ಪದೆ ಜಯವಾಗುವುದು. ಅವರನ್ನು ಹಿಂದಟ್ಟಿಸಿಕೊಂಡು ಹೋದರೆ ನಾಶಮಾಡುವೆವು. ಅದಕ್ಕೆ ಸಂದೇಹವಿಲ್ಲ. ಆದರೆ ಈ ಪರ್ವತ ಪ್ರಾಂತದಲ್ಲಿ ಅವರನ್ನು ಹಿಡಿಯುವಂತಹ ವೀರರು ಈ ಹಿಂದು ಸ್ಥಾನದಲ್ಲಿ ಯಾರೂ ಇಲ್ಲ. ಈ ಕಲ್ಲುನೆಲದಲ್ಲಿ ನಮ್ಮ ಕುದುರೆಗಳು ಮೇಕೆಗಳಂತೆ ಲೀಲೆಯಿಂದ ಪರ್ವತಗಳನ್ನು ಹತ್ತುವುವು. ಎಲ್ಲಿಗೆ ಬೇಕಾದರೂ ಹೋಗಬಲ್ಲವು. ಪೊದೆಗಳನ್ನು ಕೂಡ ದಾಟುವುವು. ಪ್ರಭುವೇ! ನನ್ನ ಮಾತುಗಳನ್ನು ಸ್ವಲ್ಪ ಕೇಳಿರಿ. ಶಿವಾಜಿಯು ಸಿಂಹಗಡದುರ್ಗದಲ್ಲಿರುವನು. ಆಕಸ್ಮಿಕವಾಗಿ ನಾವು ಆ ದುರ್ಗವನ್ನು ಮುತ್ತಿದರೆ ಒಂದೆರಡು ತಿಂಗಳಲ್ಲಿ ಅದೂ ಸ್ವಾಧೀನವಾಗುವುದು. ಶಿವಾಜಿಯು ಬಂದಿಯಾಗುವನು. ಢಿಲ್ಲೀಶ್ವರನಿಗೆ ತಪ್ಪದೆ ಜಯವಾಗುವುದು. ಹಾಗೆ ಮಾಡದೆ ಈ ಪ್ರದೇಶದಲ್ಲಿ ಮಹಾರಾಷ್ಟ್ರರಿಗೋಸ್ಕರ ನಾವು ನಿರೀಕ್ಷಿಸಿ ಕುಳಿತುಕೊಂಡರೆ ಏನು ಪ್ರಯೋಜನ? ನೇತಾಜಿಯು ಅನಾಯಾಸವಾಗಿ ತಪ್ಪಿಸಿ ಕೊಂಡು ಹೋಗಿ ಅಹಮ್ಮದನಗರ, ಔರಂಗಾಬಾದ್‌ವರೆಗೂ ದೇಶವನ್ನು ಕೊಳ್ಳೆ ಹೊಡೆದಿರುವನು. ಅವನನ್ನು ಹಿಂದಟ್ಟಿಸಿಕೊಂಡು ಹೋಗಿದ್ದ ಶೂರನಾದ ರುಸ್ತುಂ ಜಮಾನನು ಏನು ಮಾಡಿದನು ?

ಷಯಿಸ್ತಾ—(ಕೋಪದಿಂದ) ರುಸ್ತುಂ ಜಮಾನನು ದ್ರೋಹಮಾಡಿದ್ದಾನೆ. ಬುದ್ಧಿಪೂರ್ವಕವಾಗಿ ಆತನು ಹೋಗಲು ಅನುಮತಿ ಕೊಟ್ಟಿರುವನು. ನಾನು ಅವನಿಗೆ ತಕ್ಕ ಶಿಕ್ಷೆಯನ್ನು ವಿಧಿಸುವೆನು.

ಚಾಂದ—ನೀನು ಕೂಡ ಯುದ್ಧಕ್ಕೆ ಬರದಂತೆ ಮಾತನಾಡುತ್ತಿರುವೆ ; ಢಿಲ್ಲೀಶ್ವರನ ಸೈನಿಕರಲ್ಲಿ ಒಬ್ಬನಾದರೂ ಸಾಹಸಿಯಿಲ್ಲವೆ ?

ವೃದ್ಧನಾದ ಚಾಂದಖಾನನ ಮುಖವು ಕೆಂಪೇರಿತು. ಸೇನಾಪತಿಯ ಕಡೆಗೆ ತಿರುಗಿ, "ಪ್ರಭುಗಳಿಗೆ ಆಲೋಚನೆಯನ್ನು ಹೇಳುವುದು ಕೇವಲ ಅಸಾಧ್ಯ. ಸೇನಾಪತಿಗಳು ಯುದ್ಧವನ್ನು ನಿರ್ಧರಿಸುವರಾಗಲಿ. ಅಪ್ಪಣೆಯಾದಂತೆ ನಡೆಯಲು ಸೇವಕನು ಹಿಂತೆಗೆಯುವನಲ್ಲ." ಎಂದು ಹೇಳಿದನು.

ಈ ನಡುವೆ ಒಬ್ಬ ಸೇವಕನು ಬಂದು, 'ಸಿಂಹಗಡದ ದುರ್ಗದಿಂದ ಮಹಾದೇವಜೀ ನ್ಯಾಯಶಾಸ್ತ್ರಿ,' ಎಂಬ ಬ್ರಾಹ್ಮಣದೂತನು ಬಂದು ಬಾಗಿಲಲ್ಲಿ ನಿರೀಕ್ಷಿ

ಸುತ್ತಿರುವನೆಂದು ಹೇಳಿದನು. ಷಯಿಸ್ತಾಖಾನನು ಆತನಿಗೋಸ್ಕರ ನಿರೀಕ್ಷಿಸುತ್ತಿದ್ದುದರಿಂದ ದೂತನನ್ನು ಸಭಾಮಂದಿರಕ್ಕೆ ಕರೆದುಕೊಂಡು ಬಾರೆಂದು ಅಪ್ಪಣೆ ಮಾಡಿದನು. ಸಭಿಕರೆಲ್ಲರೂ ಆ ರಾಯಭಾರಿಯನ್ನು ನೋಡಲು ಅತ್ಯಂತ ಕುತೂಹಲರಾಗಿದ್ದರು

ಆ ಬಳಿಕ ಮಹಾದೇವಜೀ ನ್ಯಾಯಶಾಸ್ತ್ರಿಯು ಸಭಾಸದನವನ್ನು ಪ್ರವೇಶ ಮಾಡಿದನು. ಆತನ ವಯಸ್ಸು ಸುಮಾರು ನಾಲ್ವತ್ತುವರ್ಷವಿದ್ದಿತು, ಆತನು ಎತ್ತರವಾಗಿದ್ದನು ; ಶರೀರವು ಕಪ್ಪಗೂ ಮುಖವು ಸುಂದರವಾಗಿಯೂ ಎದೆಯು ಅಗಲವಾಗಿಯೂ ಬಾಹುಗಳು ನೀಳವಾಗಿಯೂ ಇದ್ದುವು. ನೇತ್ರಗಳು ಸೂಕ್ಷ್ಮ ಬುದ್ಧಿಯನ್ನು ತೋರಿಸುತ್ತಿದ್ದುವು. ನಖದಲ್ಲಿ ಗಂಧದ ಚುಕ್ಕೆಯು ದೊಡ್ಡದಾಗಿದ್ದಿತು. ಬಟ್ಟೆಗಳನ್ನು ಧರಿಸಿದ್ದುದರಿಂದ ಹಸ್ತ ಮುಂತಾದವು ಸರಿಯಾಗಿ ಕಾಣುತ್ತಿರಲಿಲ್ಲ. ತಲೆಯಮೇಲೆ ಪಾಗನ್ನು ಧರಿಸಿದ್ದುದರಿಂದ ಅದರ ಮರೆಯಲ್ಲಿ ಮುಖವು ಸರಿಯಾಗಿ ಕಾಣುತ್ತಿರಲಿಲ್ಲ ಷಯಿಸ್ತಾಖಾನನು ದೂತನನ್ನು ಆದರದಿಂದ ಬರಮಾಡಿಕೊಂಡು ಕುಳ್ಳಿರಿಸಿ,—"ಸಿಂಹಗಡದ ವಾರ್ತೆಯೇನು ?" ಎಂದು ಕೇಳಿದನು.

ಮಹಾದೇವಜೀಯು ಈ ಶ್ಲೋಕವನ್ನು ಓದಿದನು—

ಸನ್ತಿ ನದ್ಯೋದಂಡಕೇಷು ತಥಾ ಪಂಚವಟೀವನೆ |
ಸರಯೂಪಿಚ್ಛೇದದುಃಖಂ ರಾಘವಸ್ತುಕಥಂಸಹೇತ್ ‖

ಎಂದರೆ—"ಸಿಂಹಗಡ ಮೊದಲಾದ ಅನೇಕ ದುರ್ಗಗಳಿದ್ದರೂ ಪೂನಾ ನಿಮ್ಮ ಕೈಲಿಸಿಕ್ಕಿರುವುದು. ಶಿವಾಜೀಪ್ರಭುವು ತದ್ವಿಯೋಗ ಸಂತಾಪವನ್ನು ಹೇಗೆ ಮರೆಯುವನು." ಎಂದು ಅಭಿಪ್ರಾಯವು.

ಷಯಿಸ್ತಾಖಾನನು ಸಂತುಷ್ಟನಾಗಿ,—"ಅಹುದು, ನಾನು ಪ್ರಧಾನದುರ್ಗವನ್ನು ವಶಪಡಿಸಿಕೊಂಡಿರುವೆನು, ಈಗ ಅವರು ಯುದ್ಧ ಮಾಡುವುದರಿಂದ ಲಾಭವಿಲ್ಲ ಡಿಲ್ಲೀಶ್ವರನಿಗೆ ಅಧೀನವಾದರೆ ಈಗ್ಗೆ ಕೊಂಚ ಅನುಕೂಲವಾಗುವುದು. ಹೀಗೆಂದು ನಿಮ್ಮ ಪ್ರಭುವಿಗೆ ಹೇಳು—ಎಂದನು.

ಮಂದಹಾಸದಿಂದ ಬ್ರಾಹ್ಮಣನು ಮತ್ತೊಂದು ಶ್ಲೋಕವನ್ನು ಹೇಳಿದನು.—

ನವಿಜ್ಞಾಪಯಿತುಂ ಶಕ್ತಃ ಸ್ವಾಭಿಲಾಷಂಹಿಜಾತಕಃ |
ಜ್ಞಾತ್ವಾತು ತಂ ಜಲಧರ ಪರಿತೋಷಯತಿ ಯಾಚಕಂ ‖

ಎಂದರೆ, ‘ ಪೂನಾ, ಚಾಕಣದುರ್ಗ-ಇವುಗಳನ್ನು ಹೋಗಲಾಡಿಸಿಕೊಂಡು ನಮ್ಮ ಪ್ರಭುಗಳು ಸಂಧಿಮಾಡಿಕೊಳ್ಳುವುದಕ್ಕೆ ಕೂಡ ಲಜ್ಜೆಪಡುವರು. ಅವರ ಮನೋರಥವನ್ನು ಗ್ರಹಿಸಿ ಅನುಗ್ರಹ ಪೂರ್ವಕವಾಗಿ ಯಾವುದನ್ನು ಕೊಟ್ಟರೂ ಅದನ್ನು ಅಂಗೀಕರಿಸುವರು,’ ಎಂದು ತಾತ್ಪರ್ಯವು.

ಷಯಿಸ್ತಾಖಾನನು ಸಂತೋಷದಿಂದ ಉಬ್ಬಿ ಹೀಗೆ ಹೇಳಿದನು —

“ ಪಂಡಿತಮಹಾಶಯ ! ನಿಮ್ಮ ಪಾಂಡಿತ್ಯಕ್ಕಾಗಿ ನಾನೆಷ್ಟು ಸಂತೋಷಿಸಿ ದೆನೋ ಅದನ್ನು ಹೇಳಲಾರೆನು. ನಿಮ್ಮ ಸಂಸ್ಕೃತ ಭಾಷೆಯು ಎಷ್ಟು ಮನೋ ಹರವಾದುದು ! ಎಷ್ಟು ಭಾವಗರ್ಭಿತವಾಗಿರುವುದು. ನಿಜವಾಗಿಯೂ ಶಿವಾಜೀ ಪ್ರಭುಗಳು ಸಂಧಿಯನ್ನು ಅಪೇಕ್ಷಿಸುತ್ತಿರುವರೇ ?

ಮಹಾ — “ ಮೃಗರಾಜಪ್ರತಾಪೇನ ಭಯಸಂಕ್ಷುಬ್ಧಚೇತಸಃ |
ತ್ರಾಹಿದೇವತ್ರಾಹಿರಾಜನ್ನಿತಿಧಾವಂತಿಭೂಚರಾಃ ‖ ”

ನಿಮ್ಮ ಉದ್ದಂಡಪ್ರತಾಪವನ್ನು ತಡೆಯಲಾರದೆ ಭಯಪಟ್ಟು ನಾವೆಲ್ಲರೂ ‘ತ್ರಾಹಿ, ತ್ರಾಹಿ’ ಎಂದು ಪ್ರಾರ್ಥಿಸುತ್ತಿರುವೆವು.’ ಎಂದು ಭಾವವು.

ಷಯಿಸ್ತಾಖಾನನು ಮತ್ತೂ ಆನಂದವನ್ನು ಹೊಂದಿದವನಾಗಿ ಮಹಾದೇವ ನನ್ನು ಕುರಿತು—“ಬ್ರಾಹ್ಮಣನೇ ! ನಿಮ್ಮ ಶಾಸ್ತ್ರಾಲೋಚನೆಗೆ ಬಹಳ ಸಂತುಷ್ಟನಾ ಗಿರುವೆನು. ಈಗ ನೀವು ಸಂಧಿಪ್ರಸ್ತಾಪವನ್ನೆತ್ತುತ್ತಿರುವಿರಲ್ಲವೆ ? ’ ಎಂದನು.

ಅನಂತರ ಬ್ರಾಹ್ಮಣನು ಗಂಭೀರ ಭಾವದಿಂದ, ವಸ್ತ್ರದಿಂದ ಸುತ್ತಲ್ಪಟ್ಟಿದ್ದ ನಿದರ್ಶನಾಪತ್ರಿಕೆಯನ್ನು ತೆಗೆದು ಆತನ ಕೈಗಿತ್ತನು. ಷಯಿಸ್ತಾಖಾನನು ಅದನ್ನು ೨, ೩, ನಿಮಿಷಗಳವರೆಗೆ ಹಿಂದೆ ಮುಂದೆ ತಿರುಗಿಸಿ ನೋಡಿ, “ಬಳ್ಳೆಯದು, ನೀವೇ ನುಹೇಳುವಿರಿ ?” ಎಂದನು.

ಮಹಾ — ಮೊದಲೇ ತಾವು ವಿಜಯವನ್ನು ಹೊಂದಿರುವಿರಿ. ಆದುದರಿಂದ ಯುದ್ಧದಿಂದ ಲಾಭವಿಲ್ಲವೆಂದು ಪ್ರಭುಗಳು ಅಪ್ಪಣೆ ಕೊಟ್ಟಿರುವರು.

ಷಯಿಸ್ತಾ — ಅಚ್ಛಾ ! (ಒಳ್ಳೆಯದು.)

ಮಹಾ—ಆದುದರಿಂದ ಅವರು ಸಂಧಿಗಾಗಿ ನಿರೀಕ್ಷಿಸುತ್ತಿರುವರು.

ಷಯಿಸ್ತಾ—ಶಹಬಾಸ್ !

ಮಹಾ—ದಿಲ್ಲೀಶ್ವರನು ಯಾವ ನಿಯಮಗಳಿಗೆ ಸಂಧಿಮಾಡಿಕೊಳ್ಳುವುದಕ್ಕೆ ಅಂಗೀಕರಿಸುವನೋ ಅವುಗಳನ್ನು ಈಗಲೇ ತಿಳಿದುಕೊಳ್ಳಲು ನಮ್ಮ ಪ್ರಭುಗಳು ಕುತೂಹಲಪಡುತ್ತಿರುವರು.

ಮಿಸ್ತಾ—ಮೊದಲು ಚಕ್ರವರ್ತಿಯವರಿಗೆ ಅಧೀನರಾಗಲು ಅಂಗೀಕರಿಸಬೇಕು. ಅದಕ್ಕೆ ನಿಮ್ಮ ಪ್ರಭುಗಳು ಸಮ್ಮತಿಸುವರೆ?

ಮಹಾ—ಅವರಿಗೆ ಸಮ್ಮತವೆಂದಾಗಲಿ, ಅಸಮ್ಮತವೆಂದಾಗಲಿ ತಿಳಿಸುವುದಕ್ಕೆ ನನಗೆ ಅಧಿಕಾರವಿಲ್ಲ. ತಾವು ಅಪ್ಪಣೆ ಕೊಟ್ಟುದನ್ನೆಲ್ಲ ಅವರಿಗೆ ಅರಿಕೆ ಮಾಡುವೆನು. ಅವರು ಆಲೋಚಿಸಿದನಂತರ ಅಂಗೀಕಾರವನ್ನೂ ಅನಂಗೀಕಾರವನ್ನೂ ಪ್ರಕಟಿಸುವರು.

ಮಿಸ್ತಾ—ಒಳ್ಳೆಯದು. ಮೊದಲನೆಯ ನಿಯಮವನ್ನು ತಿಳಿಸಿದೆನಲ್ಲವೆ? ಇನ್ನು ಎರಡನೆಯದು,-ಚಕ್ರವರ್ತಿಗಳ ಸೇನೆಗಳು ಜಯಿಸಿದ ದುರ್ಗಗಳು ಅವರ ಅಧೀನದಲ್ಲಿಯೇ ಇರುವವು. ಮೂರನೆಯದು,-ಸಿಂಹಗಡ ಮೊದಲಾದ ದುರ್ಗಗಳಲ್ಲಿ ಒಂದೆರಡನ್ನು ನೀವು ಬಿಟ್ಟುಕೊಡಬೇಕು.

ಮಹಾ—ಅವು ಯಾವವು?

ಮಿಸ್ತಾ—ಆ ಸಂಗತಿಯನ್ನು ೧-೨ ದಿನಗಳಲ್ಲಿ ಪತ್ರಮುಖದಿಂದ ತಿಳಿಸುವೆವು. ನಾಲ್ಕನೆಯದು,-ಮಿಕ್ಕ ದುರ್ಗಗಳೂ ದೇಶಗಳೂ ನಿಮ್ಮ ರಾಜರ ಸ್ವಾಧೀನದಲ್ಲಿಯೇ ಇರತಕ್ಕದು. ಅವರು ಅವುಗಳನ್ನು ಜಹಗೀರಿನಂತೆ ಅನುಭವಿಸುತ್ತಾ ನಮ್ಮ ಸ್ವಾಧೀನವಾಗಿರಬೇಕು. ಈ ನಿಯಮಗಳನ್ನು ನಿಮ್ಮ ರಾಜರಿಗೆ ತಿಳಿಯಪಡಿಸಿ ಅವರು ಸಮ್ಮತಿಸುವರೋ ಇಲ್ಲವೋ ಎಂಬುದನ್ನು ೩-೪ ದಿನಗಳಲ್ಲಿ ನಮಗೆ ತಿಳಿಸಬೇಕು.

ಮಹಾ—ಚಿತ್ತ! ಪುನಃ ಸಂಧಿಯಾಗುವವರೆಗೆ ಯುದ್ಧವನ್ನು ನಡೆಯಿಸುವಿರಾ?

ಮಿಸ್ತಾ—ಎಂದಿಗೂ ಪ್ರಯತ್ನಿಸುವುದಿಲ್ಲ. ಮಹಾರಾಷ್ಟ್ರರಂತಹ ಧೂರ್ತರು ಪ್ರಪಂಚದಲ್ಲಿ ಯಾರೂ ಇಲ್ಲ. ಅವರನ್ನು ನಾವು ನಂಬುವುದಿಲ್ಲ. ಸಂಧಿ ನಿಶ್ಚಯವಾಗುವವರೆಗೆ ಯುದ್ಧವು ನಡೆಯುತ್ತಿರುವುದು. ನಿಮಗೆ ನಾವು ನಷ್ಟಪಡಿಸುವೆವು. ಕೈಯಲ್ಲಾದರೆ ನೀವೂ ನಮಗೆ ನಷ್ಟಪಡಿಸಬಹುದು.

ಆತನು 'ಏವಮಸ್ತು' ಎಂದು ಹೇಳಿ ಷಯಿಸ್ತಾಖಾನನಿಂದ ಅನುಜ್ಞೆ ಹೊಂದಿ ಹೊರಟುಹೋದನು. ಆತನ ಕಣ್ಣುಗಳಿಂದ ಬೆಂಕಿ ಕಾರುತ್ತಿರುವಂತೆ ಕೆಂಪುಕೆಂಪಾಗಿ ತೋರುತ್ತಿದ್ದಿತು.

ಮಹಾದೇವಜೀಯು ಮೆಲ್ಲಮೆಲ್ಲನೆ ಉಪ್ಪರಿಗೆಯನ್ನು ಇಳಿದು ದ್ವಾರಗಳನ್ನೂ ಇತರ ಎಲ್ಲಾ ಅಂತಸ್ತುಗಳನ್ನೂ ಕೊಠಡಿ (?) ಗಳನ್ನೂ ಒಂದೊಂದಾಗಿ ಪರೀಕ್ಷಿಸುತ್ತ ಹೊರಗೆ ಬರುತ್ತಿರುವಲ್ಲಿ ಒಬ್ಬ ಕಾವಲುಗಾರನು ಆಶ್ಚರ್ಯದಿಂದ, "ದೂತ ಮಹಾಶಯ! ಏನನ್ನು ನೋಡುತ್ತಿರುವಿರಿ?" ಎಂದು ಕೇಳಿದನು.

ದೂತ—ಈ ಅರಮನೆಯಲ್ಲಿಯೇ ಶಿವಾಜಿಯು ಬಾಲ್ಯದಲ್ಲಿ ಬೆಳೆದುದು; ಇದೂ ನಿಮ್ಮ ಸ್ವಾಧೀನಕ್ಕೆ ಸಿಕ್ಕಿರುವುದು. ಒಂದೊಂದಾಗಿ ದುರ್ಗಗಳೆಲ್ಲವನ್ನೂ ವಶಪಡಿಸಿಕೊಳ್ಳುವಿರೇನ?

ಕಾವಲುಗಾರ—"ಅದಕ್ಕಾಗಿ ವೃಥಾ ದುಃಖವೇಕೆ? ನಿಮ್ಮ ಕೆಲಸಕ್ಕೆ ನೀವು ಹೋಗಿರಿ" ಎಂದನು.

ಬ್ರಾಹ್ಮಣನು ಪೂನಾನಗರದ ಜನಸಮೂಹದಲ್ಲಿ ಶೀಘ್ರವಾಗಿ ಸೇರಿಕೊಂಡು ಮುಂದರಿದನು.

---

## ನಾಲ್ಕನೆಯ ಪ್ರಕರಣ.

### (ಪುರೋಹಿತನು)

ಮಹಾದೇವಜೀಯು ಪೂನಾನಗರದ ಬೀದಿಗಳನ್ನು ಒಂದೊಂದಾಗಿ ದಾಟುತ್ತ ಬಂದನು. ಹೋಗುತ್ತಿರುವಾಗ ಆ ನಗರವನ್ನು ಚೆನ್ನಾಗಿ ಪರಿಶೀಲಿಸುತ್ತಾ ಪದಾರ್ಥಗಳನ್ನು ಕೊಳ್ಳುವ ವ್ಯಾಜದಿಂದ ಒಂದೆರಡು ಅಂಗಡಿಗಳನ್ನು ಹೊಕ್ಕು ಪ್ರಸಂಗವಶದಿಂದ ಬರುವ ನಾನಾವಿಚಾರಗಳನ್ನು ತಿಳಿದುಕೊಂಡನು. ಅನಂತರ ಅಂಗಡಿ ಬೀದಿಯನ್ನು ದಾಟಿ ರಾಜಮಾರ್ಗವನ್ನು ಅತಿಕ್ರಮಿಸಿ ಒಂದು ಸಂದಿಯಲ್ಲಿ

ಪ್ರವೇಶಿಸಿದನು. ಅಲ್ಲಿ ದೀಪವು ಆರಿಹೋಗಿದ್ದಿತು. ನಾಗರಿಕರು ಬಾಗಿಲನ್ನು ಮುಚ್ಚಿಕೊಂಡು ತಮ್ಮ ಮನೆಗಳಲ್ಲಿ ನಿದ್ರಾಪರವಶರಾಗಿದ್ದರು. ಬ್ರಾಹ್ಮಣನು ಬಹು ದೂರದವರೆಗೆ ಹೋದನು. ಆ ರಾತ್ರಿ ಕತ್ತಲಾಗಿದ್ದರೂ ಒಂದೆರಡು ನಕ್ಷತ್ರಗಳು ಮಾತ್ರ ಮಿನುಗುತ್ತಿದ್ದುವು. ಪ್ರಪಂಚವೆಲ್ಲ ನಿಶ್ಶಬ್ದ—ನೀರವ--ನಿಷ್ಪಂದವಾಗಿ ದ್ದಿತು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಹಿಂದುಗಡೆ ತನ್ನನ್ನು ಯಾರೋ ಹಿಂಬಾ ಲಿಸಿ ಬರುವಂತೆ ಶಬ್ದವಾಯಿತು. ಆ ಬ್ರಾಹ್ಮಣನಿಗೆ ಸಂಶಯವು ತೋರಿ ಹಾಗೆಯೇ ನಿಂತುಬಿಟ್ಟನು. ಪುನಃ ಆ ಹೆಜ್ಜೆಯ ಶಬ್ದವು ಕೇಳಿ ಬರಲಿಲ್ಲ.

ಇನ್ನೂ ಸ್ವಲ್ಪದೂರ ಮುಂದೆ ಹೋಗುತ್ತಿರಲು ಯಾರೋ ತನ್ನನ್ನು ಅನುಸರಿಸಿ ಕೊಂಡು ಬರುವಂತೆ ಮಹಾದೇವಜೀಗೆ ಸಂಶಯವುಂಟಾಗಿ ಎದೆಯು ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಅರ್ಧರಾತ್ರಿಯ ವೇಳೆಯಲ್ಲಿ ತನ್ನನ್ನು ಅನುಸರಿಸಿ ಬರುತ್ತಿರುವವನು ಶತ್ರುವೆ ? ಅಥವಾ ಮಿತ್ರನೆ ? ಶತ್ರುವಾದರೆ ಬ್ರಾಹ್ಮಣನನ್ನು ಹಿಡಿ ಯುವನೆ ? ಎಂದು ಮಹಾದೇವಜೀಯು ಸಂದೇಹಮನಸ್ಸಿನಿಂದಿರಲು ತನ್ನ ಚೀಲದ ಲ್ಲಿದ್ದ ಒಂದು ಚಾಕನ್ನು ಹೊರಗೆ ತೆಗೆದು ರಸ್ತೆಯ ಮಗ್ಗುಲಲ್ಲಿ ನಿಂತು ಗಾಢಾಂಧ ಕಾರದಲ್ಲಿ ತನ್ನ ದೃಷ್ಟಿಯನ್ನು ಆಕಡೆಗೆ ತಿರುಗಿಸಿದನು. ಏನೂ ಕಾಣಿಸಲಿಲ್ಲ. ಎಲ್ಲರೂ ನಿದ್ರಿಸುತ್ತಿದ್ದರು. ನಗರವು ನೀರವವಾಗಿದ್ದಿತು.

ಸಂದಿಗ್ಧಮನಸ್ಸುಳ್ಳವನಾಗಿ ಬ್ರಾಹ್ಮಣನು ದೀಪವುರಿಯುತ್ತಿದ್ದ ಬೀದಿಗೆ ಹೋದನು. ಅಲ್ಲಿಯ ಅಂಗಡಿಗಳಲ್ಲಿ ನಾನಾಜಾತಿಯವರು ವ್ಯಾಪಾರಮಾಡಿಕೊಂಡು ಕುಳಿತಿದ್ದರು. ಬ್ರಾಹ್ಮಣನು ಅವರೊಡನೆ ಸೇರಿ ಹೋಗಲೆತ್ನಿಸಿ, ಕೂಡಲೇ ಅಲ್ಲಿಂದ ಹೊರಟು, ಹಠಾತ್ತಾಗಿ ಮತ್ತೊಂದು ಓಣಿಗೆ ತಿರುಗಿ ಶೀಘ್ರವಾಗಿ ನಡೆದನು. ಅಲ್ಲಿ ನಿಶ್ಶಬ್ದವಾಗಿ ಸ್ವಲ್ಪಹೊತ್ತು ನಿಂತುಕೊಂಡು ಮೆಲ್ಲಗೆ ಉಸಿರುಬಿಡುತ್ತ ಚೆನ್ನಾಗಿ ಪರೀಕ್ಷಿಸಿದನು. ಆದರೆ ಆ ಹೆಜ್ಜೆಯ ಸಪ್ಪಳವು ಮಾತ್ರ ಕೇಳಿಬರಲಿಲ್ಲ. ಅಂಧ ಕಾರವು ಲೋಕವನ್ನಾಶ್ರಯಿಸಿದ್ದಿತು. ಆ ವೇಳೆಯಲ್ಲಿ ಆಕಸ್ಮಿಕವಾಗಿ ಯಾರೋ ಕೇಕೆ ಹಾಕಿದುದನ್ನು ಕೇಳಿ ಮಹಾದೇವನು ನಡುಗಿದನು. ಆದರೂ ಎಚ್ಚರಿಕೆಯಿಂದ ನಿಂತಿದ್ದನು.

ಪುನಃ ಆ ಧ್ವನಿಯು ಕಿವಿಗೆ ಬಿತ್ತು. ಮಹಾದೇವನ ಮನಸ್ಸು ಚೇತರಿಸಿಕೊಂ ಡಿತು. ಏಕೆಂದರೆ ಆ ಕೇಕೆ ಹಾಕಿದವನು, ಬ್ರಾಹ್ಮಣನು ಅವಿತುಕೊಂಡಿದ್ದ ಓಣಿ

ಯೊಳಕ್ಕೆ ಪ್ರವೇಶಿಸಿದನು. ಅದು ಬಹು ಹಳ್ಳಕೊಳ್ಳ ಪ್ರದೇಶವಾಗಿದ್ದಿತು. ಮಹಾದೇವಜೀಯು ಅವನು ನಿಂತಿದ್ದ ಕಡೆಯನ್ನು ನೋಡಿದನು. ಆತನು ತುಂಬ ಧೈರ್ಯಶಾಲಿ; ಉಸಿರನ್ನು ಮೆಲ್ಲನೆ ಬಿಡುತ್ತ ಕಠಾರಿಯನ್ನು ಗಟ್ಟಿಯಾಗಿ ಹಿಡಿದು ಕೊಂಡನು. ಅತ್ಯಂತ ಕತ್ತಲೆ; ಯಾವುದೂ ಕಾಣಬರಲಿಲ್ಲ. ಮುಂದೆ ಸಾಗಿ ಹೋದನು. ಅವನು ಮುಂದೆ ಸಾಗಿಹೋದಮೇಲೆ ಮಹಾದೇವಜೀಯು ಮೆಲ್ಲಮೆಲ್ಲನೆ ಬರುತ್ತ, ಮುಖದಲ್ಲಿದ್ದ ಬೆವರನ್ನು ಒರಸಿಕೊಂಡನು.

ಅನಂತರ ಆತನು ಹತ್ತಿರದಲ್ಲಿದ್ದ ಒಂದು ಮನೆಯ ಬಾಗಿಲನ್ನು ಮೆಲ್ಲನೆ ತಟ್ಟಿದನು. ಕೂಡಲೇ ಷಯಿಸ್ತಾಖಾನನ ಸೈನ್ಯದ ಮರಾಟೆಯವನೊಬ್ಬನು ಹೊರಗೆ ಬಂದನು. ಅವರಿಬ್ಬರೂ ಮೆಲ್ಲಮೆಲ್ಲನೆ ಪಟ್ಟಣದಲ್ಲಿರುವ ಒಂದು ನಿರ್ಜನ ಪ್ರದೇಶಕ್ಕೆ ಹೋದರು. ಅವರಿಬ್ಬರಿಗೂ ಈ ರೀತಿಯಾಗಿ ಸಂಭಾಷಣೆ ನಡೆಯಿತು.

ಮಹಾ—ಎಲ್ಲವೂ ಸಿದ್ಧವಾಗಿರುವುದೆ?

ಸೈನಿಕ—ಇರುವುದು.

ಮಹಾ—"ಆಜ್ಞಾಪತ್ರವು ಲಭಿಸಿತೆ?" ಪುನಃ ಕಾಲಿನ ಸಪ್ಪಳವು ಕೇಳಿಸಿತು. ಈ ಸಮಯದಲ್ಲಿ ಮಹಾದೇವಜೀಯು ಮುಖದಲ್ಲಿ ಕ್ರೋಧವನ್ನು ತೋರಿಸುತ್ತ ಕೈಯಲ್ಲಿ ಚಾಕನ್ನು ತೆಗೆದುಕೊಂಡು ನಾಲ್ಕು ಕಡೆಯಲ್ಲಿಯೂ ಹುಡುಕಿ ನೋಡಿದನು. "ಬರಿಯ ಕೈಯಲ್ಲಿ ಬಂದಿರುವಿಯೋ?" ಎನಲು ಅಂಗಿಯೊಳಗಿಂದ ಸಣ್ಣ ಕತ್ತಿಯನ್ನು ಹೊರತೆಗೆದು ತೋರಿಸಿದನು.

ಮಹಾ—ಒಳ್ಳೆಯ ಜಾಗರೂಕನಾಗಿರು. ಮದುವೆ ಯಾವಾಗ?

ಸೈನಿಕ—ನಾಳೆ.

ಮಹಾ—ಅನುಮತಿ ಹೊಂದಿದೆಯಾ?

ಸೈನಿಕ—ಅಹ!

ಮಹಾ—ಎಷ್ಟು ಮಂದಿ?

ಸೈನಿಕ—ವಾದ್ಯಗಾರರು ಹತ್ತು ಮಂದಿ, ಅಸ್ತ್ರಧಾರಿಗಳು ಮೂವತ್ತು ಮಂದಿ ಮೇಲ್ಪಟ್ಟ ಜನರು ಕೂಡದೆಂದು ಆಜ್ಞಾಪಿಸಿರುವನು.

ಮಹಾ—ಸಾಕು; ಯಾವ ವೇಳೆ?

ಸೈನಿಕ—ರಾತ್ರಿ, ಒಂದು ಜಾವ ಕಳೆದ ಮೇಲೆ.

ಮಹಾ—ಒಳ್ಳೆಯದು, ಈ ದಿಕ್ಕಿನಿಂದಲೇ ಮೆರವಣಿಗೆಗೆ ಪ್ರಾರಂಭವಾಗುವದು.

ಸೈನಿಕ—ಚಿತ್ತ—ಜ್ಞಾಪಕವಿದೆ.

ಮಹಾ—ವಾದ್ಯಗಾರರು ಶಕ್ತಿ ಮೀರಿ ವಾದ್ಯಮಾಡಬೇಕು,

ಸೈನಿಕ—ಚಿತ್ತ!

ಮಹಾ—ಸಾಧ್ಯವಾದಷ್ಟುಮಟ್ಟಿಗೆ ನೆಂಟರಿಷ್ಟರನ್ನು ಸೇರಿಸಬೇಕು

ಸೈನಿಕ—ಅಪ್ಪಣೆ.

ಆ ಬಳಿ ಮಹಾದೇವಜೀಯು ಮಂದಹಾಸದಿಂದ—“ಆರಂಭ ಕಾರ್ಯಕ್ಕೆ ನಾನೇ ಪುರೋಹಿತನು! ಆ ಶುಭವರ್ತಮಾನವು ಭರತಖಂಡದಲ್ಲೆಲ್ಲ ವ್ಯಾಪಿಸುವುದು!” ಎಂದು ಹೇಳಿದನು, ಪೂರ್ಣಶಕ್ತಿಯಿಂದ ಬಿಟ್ಟ ಒಂದು ಬಾಣವು ಹಠಾತ್ತಾಗಿ ಬ್ರಾಹ್ಮಣನ ವಕ್ಷಸ್ಥಳಕ್ಕೆ ತಗಲಿತು. ಆ ಶರದಿಂದ ತಪ್ಪದೆ ಪ್ರಾಣ ಹೋಗಬೇಕಾಗಿದ್ದಿತು. ಆದರೆ, ಒಳಗೆ ಕಬ್ಬಿಣದ ಕವಚವನ್ನು ಧರಿಸಿದ್ದುದರಿಂದ ಅದು ಆ ಕವಚಕ್ಕೆ ತಗಲಿ ಕೆಳಗೆ ಬಿದ್ದಿತು. ಬಿಲ್ಲಿನ ಪೆಟ್ಟೇನೋ ತಗಲಿತು; ಬ್ರಾಹ್ಮಣನು ಕೂಡಲೇ ನೆಲದಮೇಲೆ ಬಿದ್ದನು. ಆ ಕವಚವು ದುರ್ಭೇಧ್ಯವಾದುದರಿಂದ ಆ ಬಿಲ್ಲು ಶರೀರದೊಳಗ ಹೋಗಲಿಲ್ಲ. ಮಹಾದೇವಜೀಯು ತಟ್ಟನೆ ಎದ್ದು ನೋಡಲು ಇದಿರಿಗೆ ದೀರ್ಘಕಾಯನಾದ ಒಬ್ಬ ಯೋಧನು ತೀಕ್ಷ್ಣವಾದ ಖಡ್ಗವನ್ನು ಕೈಯಲ್ಲಿ ಹಿಡಿದು ಇದಿರಿಗೆ ನಿಂತಿದ್ದನು. ಅವನೇ ಚಾಂದಖಾನ್ ಎಂಬುವನು.

ಸಭಾಮಂದಿರದಲ್ಲಿ ಶಯಿಸ್ತಾಖಾನನು ಚಾಂದಖಾನನನ್ನು ಮುದುಕನೆಂದು ಆಕ್ಷೇಪಿಸಿದ್ದನು. ಯುದ್ಧದಲ್ಲಿಯೇ ಚಾಂದಖಾನನಿಗೆ ಕೂದಲು ನರೆತುಹೋಯಿತು. ಆದರೆ ಎಂದೂ ಈ ರೀತಿಯಾಗಿ ಅವಮಾನ ಹೊಂದಿರಲಿಲ್ಲ. ಶಯಿಸ್ತಾಖಾನನು ಹೇಳಿದಮಾತುಗಳು ಆತನ ಮನಸ್ಸನ್ನು ಬಂಧಿಸಲು ಆತನು ಒಬ್ಬರಸಂಗಡ ಹೇಳುವುದೇಕೆ? ಕೆಲಸಮಾಡಿ ಅವಮಾನವನ್ನು ಹೋಗಲಾಡಿಸಿಕೊಳ್ಳುವೆನು. ಇಲ್ಲವೆ ಯುದ್ಧದಲ್ಲಿ ಪ್ರಾಣವನ್ನು ಬಿಡುವೆನು” ಎಂದು ಯೋಚಿಸಿದನು.

ಬ್ರಾಹ್ಮಣನ ಆಚರಣೆಯಲ್ಲಿ ಅವನಿಗೆ ಸಂದೇಹವುಂಟಾಯಿತು. ಆವನು ಶಿವಾಜಿಯ ವಿಚಾರವೆಲ್ಲವನ್ನೂ ಚೆನ್ನಾಗಿ ತಿಳಿದಿದ್ದನು. ಆತನ ಅಮಾನುಷ ಪರಾಕ್ರಮವನ್ನೂ ದುರ್ಗಗಳನ್ನೂ ಅಶ್ವಸೇನೆಯನ್ನೂ ಹಿಂದೂಧರ್ಮಾಸಕ್ತಿಯನ್ನೂ ಸ್ವಾತಂತ್ರ್ಯ ರಕ್ಷಣಪ್ರತಿಜ್ಞೆಯನ್ನೂ ತಿಳಿದುಕೊಂಡಿದ್ದನು. ಮೊಗಲರೊಡನೆ ಯುದ್ಧವು ಪ್ರಾರಂಭವಾದಕೂಡಲೇ ಶಿವಾಜಿಯು ಪರಾಜಯವನ್ನು ಅಂಗೀಕರಿಸಿ ಸಂಧಿ ಪ್ರಯತ್ನಮಾಡುವನೆಂಬುದು ಕನಸಿನ ಮಾತು! ಹಾಗಾದರೂ ಈ ಬ್ರಾಹ್ಮಣನು ಆಜ್ಞಾಪತ್ರವನ್ನು ತೋರಿಸಲಿಲ್ಲ. ಈ ಬ್ರಾಹ್ಮಣನು ಯಾರು ? ಈತನ ರಹಸ್ಯ ವೃತ್ತಾಂತವೇನು ?

ರಾಯಭಾರಿಯ ಮಾತುಗಳಲ್ಲಿಯೂ ಆತನಿಗೆ ಸಂಶಯವುಂಟಾಯಿತು. ಮಹಾರಾಷ್ಟ್ರರ ನಿಂದಾವಾಕ್ಯಗಳನ್ನು ಕೇಳಿದ ಕೂಡಲೆ, ಬ್ರಾಹ್ಮಣನ ನೇತ್ರಗಳು ಬೆಂಕಿಯ ಕಿಡಿಗಳನ್ನು ಕಾರಹತ್ತಿದವು. ಅದನ್ನು ಕೂಡ ಚಾಂದಖಾನನು ನೋಡಿದನು ಈ ಸಂದೇಹಗಳನ್ನು ಷಯಿಸ್ತಾಖಾನನ ಸಂಗಡ ಹೇಳಲಿಲ್ಲ. "ಸತ್ಯವನ್ನಾಡಿ ಪುನಃ ತಿರಸ್ಕಾರಹೊಂದುವುದೇಕೆ ? ಈ ಠಕ್ಕದೂತನನ್ನು ಹಿಡಿದು ಸಂದೇಹ ನಿರಸನವಾದಮೇಲೆ ಮುಂದಿನ ಕೆಲಸವನ್ನು ಮಾಡುವೆನು." ಎಂದು ಯೋಚಿಸಿ ಚಾಂದಖಾನನು ಮಹಾದೇವಜೀಯನ್ನು ಹಿಂಬಾಲಿಸಿ, ಬ್ರಾಹ್ಮಣನು ಸಂದಿಗೊಂದಿಗಳಲ್ಲಿ ಪ್ರವೇಶಿಸಿದಾಗ ತಾನೂ ಮೆಲ್ಲಮೆಲ್ಲನೆ ಪ್ರವೇಶಿಸುತ್ತ ನಿಮಿಷವಾದರೂ ಮಹಾರಾಷ್ಟ್ರನು ದೃಷ್ಟಿದಾಟಿ ಹೋಗದಂತೆ ಜಾಗರೂಕತೆಯಿಂದ ನಡೆದು ಬರುತ್ತಿದ್ದನು.

ಸೈನಿಕನೊಡನೆ ಬ್ರಾಹ್ಮಣನು ನಡೆಯಿಸಿದ ಸಂಭಾಷಣೆಯನ್ನು ಸಮಗ್ರವಾಗಿ ಕೇಳಿ ಬುದ್ಧಿವಂತನಾದುದರಿಂದ (ತನ್ನಲ್ಲಿ ತಾನೆ) ಈ ಠಕ್ಕುದೂತನನ್ನು ಸಂಹರಿಸಿ, ಭಟನನ್ನು ಸೇನಾಪತಿಯ ಬಳಿಗೆ ಎಳೆದುಕೊಂಡು ಹೋಗುವೆನು. ಎಲೈ ಷಯಿಸ್ತಾಖಾ ! ಯುದ್ಧವ್ಯವಸಾಯದಲ್ಲಿ ನನ್ನ ತಲೆಯಕೂದಲು ನಿಷ್ಪ್ರಯೋಜನವಾಗಿ ನರೆತು ಹೋಗುವುದಿಲ್ಲ. ನಾನು ಹೆದರುವವನೂ ದ್ರೋಹಿಯೂ ಅಲ್ಲ. ಈ ದಿನ ನಡೆದ ತಂತ್ರವನ್ನು ಪ್ರಕಾಶಪಡಿಸಿದರೆ ನೀನು ಈ ಮುದುಕ ಸೈನಿಕನನ್ನು ಹಾಸ್ಯಮಾಡಲಾರೆ" ಎಂದು ಹೇಳಿಕೊಂಡನು.

ಮಹಾದೇವಜೀಯು ನೆಲದಮೇಲಿಂದ ಎದ್ದು ಚೇತರಿಸಿಕೊಳ್ಳುವುದಕ್ಕೆ ಮೊದಲು ಚಾಂದಖಾನನು ಕುಪ್ಪಳಿಸಿ, ಖಡ್ಗದಿಂದ ತನ್ನ ಶಕ್ತಿಯಿಂದ ಪ್ರಹರಿಸಿದನು.

ಈ ಪ್ರಹರಗಳು ಹಿಂದೆ ಪ್ರಯೋಗಿಸಿದ್ದ ಬಾಣ ಭಲ್ಯಗಳಂತೆಯೇ ಕವಚಕ್ಕೆ ತಗಲಿ ನಿಷ್ಫಲವಾಯಿತು.

"ದುಸ್ಸಮಯದಲ್ಲಿ ನನ್ನ ಹಿಂದೆ ಅನುಸರಿಸಿ ಬಂದೆಯಾ?" ಎಂದು ಹೇಳಿ ಮಹಾದೇವಜೀಯು ತನ್ನ ಕೈಯಲ್ಲಿದ್ದ ಕಠಾರಿಯನ್ನು ಮೇಲಕ್ಕೆತ್ತಿದನು. ನಿಮಿಷ ಮಾತ್ರದಲ್ಲೇ ಮೇಘಸದೃಶವಾದ ಹೊಸೆತವು ಚಾಂದಖಾನನ ವಕ್ಷಸ್ಥಳದಮೇಲೆ ಬಿದ್ದಿತು. ಬ್ರಾಹ್ಮಣನು ಹಲ್ಲನ್ನು ಬಿಗಿಹಿಡಿದಿದ್ದನು. ಆತನ ಕಣ್ಣುಗಳಿಂದ ಕಿಂಕಿಡಿಗಳು ಉದುರುವಂತಿದ್ದುವು. ಮಹಾದೇವಜೀಯು ಕತ್ತಿಯನ್ನು ಹಿಡಿದುಕೊಂಡು,—

"ಷಯಿಸ್ತಾಖಾನ್! ಮಹಾರಾಷ್ಟ್ರರನ್ನು ನಿಂದಿಸುವದರಿಂದ ಉಂಟಾದ ಮೊದಲನೆಯ ಫಲವು ಇದೇ! ನಾಳಿನ ಭವಾನೀ ಕಲ್ಯಾಣದಿಂದ ಎರಡನೆಯ ಫಲವನ್ನು ಅನುಭವಿಸುವಿರಿ." ಎಂದು ಮೆಲ್ಲಗೆ ಹೇಳಿದನು. ವಿಗೋಚಿತವಾದ ಕಾರ್ಯದಲ್ಲಿ ಚಾಂದಖಾನನು ಪ್ರಾಣಬಿಡುವಸಮಯದಲ್ಲಿ ಷಯಿಸ್ತಾಖಾನನು ನಿದ್ರಿಸುತ್ತಿದ್ದನು. ಪಾಪ! ಸುಖಸ್ವಪ್ನದಲ್ಲಿ ಆತನು ಶಿವಾಜಿಯನ್ನು ಬಂಧಿಸಿರುವಂತೆ ತಿಳಿಯುತ್ತಿದ್ದನು.

ಮಹಾರಾಷ್ಟ್ರ ಸೈನಿಕನು ಈ ವ್ಯಾಪಾರವನ್ನು ನೋಡಿ ನಿಶ್ಚೇಷ್ಟಿತನಾಗಿ "ಇದೇನು" ಪ್ರಭುಗಳು ಇಂತಹ ಕೆಲಸವನ್ನು ಮಾಡಿದರು? ನಾಳೆ ಈ ವಾರ್ತೆಯು ಎಲ್ಲರಿಗೂ ತಿಳಿದರೆ ನಮ್ಮ ಕಾರ್ಯವು ಕೆಟ್ಟುಹೋಗುವುದು." ಎಂದು ಹೇಳಿದನು.

ಮಹಾ —ಎಷ್ಟುಮಾತ್ರವೂ ವಿಫಲವಾಗುವದಿಲ್ಲ. ಈತನು ಸಭೆಯಲ್ಲಿ ಅವಮಾನಪಡಿಸಲ್ಪಟ್ಟವನಂತೆ ತಿಳಿದುಕೊಂಡೆನು. ಒಂದು ದಿನ ಮಾತ್ರ ಈತನು ಸಭೆಗೆ ಹೋಗದಿದ್ದರೆ ಅಲ್ಲಿ ಅವನು ಸಂದೇಹ ಪಡುವುದಿಲ್ಲ. ಈ ಶವವನ್ನು ಹತ್ತಿರ ಇರುವ ಒಂದು ಹಳ್ಳದಲ್ಲಿ ಬಿಸುಡುವ; ಮತ್ತೆ ನಾಳೆ ಒಂದು ಜಾವವಾದಮೇಲೆ ಈ ವಿಚಾರವನ್ನು ಜ್ಞಾಪಕದಲ್ಲಿಟ್ಟುಕೋ, ಸೈನಿಕನು ಒಪ್ಪಿದನು.

ಬ್ರಾಹ್ಮಣನು ನಿಶ್ಶಬ್ದವಾಗಿ ಆ ಸ್ಥಳವನ್ನು ಬಿಟ್ಟನು. ೩-೪ ಕಡೆಯಲ್ಲಿ ರಕ್ಷಕಭಟರು ಆತನನ್ನು ನಿಲ್ಲಿಸಿದರು; ಷಯಿಸ್ತಾಖಾನನು ಸ್ವಹಸ್ತದಿಂದ ಬರೆದು

ಕೊಟ್ಟ ಅನುಜ್ಞಾಪತ್ರವನ್ನು ಅವರಿಗೆ ತೋರಿಸಿ ಸುರಕ್ಷಿತವಾಗಿ ಪೂನಾನಗರದಿಂದ ಹೊರಹೊರಟನು.

---

## ಐದನೆಯ ಪ್ರಕರಣ.

---

### (ರಾಜಾ ಜಸವಂತಸಿಂಗ)

ರಾಜಾ ಜಸವಂತಸಿಂಗನು ಬಿಡಾರದಲ್ಲಿ ಕುಳಿತು ಕೆನ್ನೆಯಮೇಲೆ ಕೈಯಿಟ್ಟು ಕೊಂಡು ಯೋಚಿಸುತ್ತಿದ್ದನು. ಅಲ್ಲಿ ಮತ್ತಾರೂ ಇರಲಿಲ್ಲ. ಆಗ ಮಹಾರಾಷ್ಟ್ರ ದೂತನೊಬ್ಬನು ಅಲ್ಲಿಗೆ ದರ್ಶನಾರ್ಥಿಯಾಗಿ ಬಂದಿರುವನೆಂದು ವರ್ತಮಾನವು ಬಂದಿತು. ಜಸವಂತನು ಅವನು ಬರಬಹುದೆಂದು ತಿಳಿಸಿ ಅವನ ಆಗಮನವನ್ನೇ ನಿರೀಕ್ಷಿಸುತ್ತಿದ್ದನು. ಮಹಾದೇವಜೀ ನ್ಯಾಯಶಾಸ್ತ್ರಿಯು ಆ ಗುಡಾರದೊಳಗೆ ಪ್ರವೇಶಿಸಿದನು. ಜಸವಂತಸಿಂಗನು ಆತನನ್ನು ಸಾದರದಿಂದ ಕುಳ್ಳಿರಿಸಿದನು. ಇಬ್ಬರೂ ಮಾತನಾಡಲಿಲ್ಲ. ಜಸವಂತಸಿಂಗನು ನೀರವವಾಗಿ ಏನನ್ನೋ ಯೋಚಿಸು ತ್ತಿದ್ದನು. ಮಹಾದೇವಜೀಯು ನಿಶ್ಶಬ್ದವಾಗಿ ಕುಳಿತು ಆತನ ತೀಕ್ಷ್ಣದೃಷ್ಟಿ ಯನ್ನು ಗಮನಿಸುತ್ತಿದ್ದನು. ಸ್ವಲ್ಪ ಹೊತ್ತಿನಮೇಲೆ —ಜಸವಂತಸಿಂಗನು ಬ್ರಾಹ್ಮ ಣನನ್ನು ಕುರಿತು ಹೀಗೆ ಸಂಭಾಷಿಸಿದನು —

"ನಿಮ್ಮ ಪತ್ರಿಕೆಯು ನಮಗೆ ಸೇರಿರುವುದು"

ಮಹಾ— ಬರಿಯ ಸಂಗತಿಗಳನ್ನು ಮುಚ್ಚಿಡುವುದಕ್ಕೆ ಪ್ರಭುಗಳು ನನ್ನನ್ನು ಕಳುಹಿಲ್ಲ. ದುಃಖಿಸುವುದಕ್ಕಾಗಿ ಕಳುಹಿರುವರು.

ಜಸ......ಪೂನಾ, ಚಾಕಣದುರ್ಗಗಳು ಮಾತ್ರ ನಮಗೆ ಸಿಕ್ಕಿರುವುವು. ಇಷ್ಟಕ್ಕೆ ಬೇಡವೆ?

ಮಹಾ—ದುರ್ಗಗಳು ಕೈತಪ್ಪಿದುದಕ್ಕಾಗಿ ಅವರು ದುಃಖಿಸುವುದಿಲ್ಲ. ಇನ್ನೂ ಅನೇಕ ದುರ್ಗಗಳಿವೆ!

ಜಸ—ಮೊಗಲರೊಡನೆ ಯುದ್ಧದಲ್ಲಿ ತೊಡಗಿಕೊಂಡು ವ್ಯಸನಪಡುವರೋ ?

ಮಹಾ—ಆಪತ್ತು ಬಂದಾಗ ಖೇದಪಡುವುದು ಅವರ ಕಾರ್ಯವಲ್ಲ.

ಜಸ—ಹಾಗಾದರೆ ಸಂತಾಪವೇಕೆ ?

ಮಹಾ—ಹಿಂದೂರಾಜ ತಿಲಕರೂ ಕ್ಷತ್ರಿಯಕುಲ ಚೂಡಾಮಣಿಗಳೂ ಸನಾತನ ಧರ್ಮ ರಕ್ಷಾದೀಕ್ಷಿತರೂ ಆದವರು ಮ್ಲೇಂಛರ ದಾಸರಾಗಿರುವುದನ್ನು ಕುರಿತು, ಸಂತಾಪ ಪಡುವರು.

ಜಸವಂತಸಿಂಗನ ಮುಖವು ಸ್ವಲ್ಪ ಕೆಂಪೇರಿತು. ಮಹಾದೇವಜೀಯು ಅದನ್ನು ನೋಡಿಯೂ ನೋಡದವನಂತೆ ತನ್ನ ಮಾತನ್ನು ಮುಂದರಿಸಿದನು.—"ಉದಯಪುರದ ರಾಣಾರವರ ವಂಶದಲ್ಲಿ ಸಂಬಂಧಮಾಡಿರುವವರೂ ಮಾರವಾಡ ರಾಜಛತ್ರದಿಂದ ಶೋಭಿಸುವವರೂ ಆಗಿ, ನೀಮ್ರಾ ನದಿಯ ತೀರದಲ್ಲಿ ಯಾರ ಪರಾಕ್ರಮವನ್ನು ನೋಡಿ ಔರಂಗಜೇಬನು ಭಯವಿಸ್ಮಿತನಾಗಿ ಸಿಕ್ಕಿ ಬಿದ್ದನೋ, ಭರತಖಂಡವು ಯಾರನ್ನು ಸನಾತನ ಹಿಂದೂ ಧರ್ಮರಕ್ಷಕರನ್ನಾಗಿ ಭಾವಿಸುತ್ತಿರುವದೋ, ಮನೆಮನೆಯಲ್ಲಿಯೂ ಯಾರಿಗೆ ಜಯವಾಗಲೆಂದು ಹಿಂದುಗಳೆಲ್ಲರೂ ಜಗದೀಶ್ವರನನ್ನು ಪ್ರಾರ್ಥಿಸುತ್ತಿರುವರೋ ಅಂಥವರು ಈಗ ಮುಸಲ್ಮಾನರ ಪಕ್ಷವನ್ನು ಸೇರಿ ಹಿಂದುಗಳೊಡನೆ ಯುದ್ಧಮಾಡುವರೆಂದು ತಿಳಿದು ನಮ್ಮ ಪ್ರಭುಗಳು ಖೇದ ಹೊಂದಿರುವರು. ಮಹಾರಾಜಾ ! ನಾನು ಸಾಮಾನ್ಯನು. ಏನು ಹೇಳುತ್ತಿರುವೆನೋ ನನಗೆ ತಿಳಿಯದು. ಅಪರಾಧವಿದ್ದರೆ ಕ್ಷಮಿಸಬೇಕು. ಒಳ್ಳೆಯದು; ಈ ಯುದ್ಧ ಸನ್ನಾಹವೇಕೆ ? ಈ ವಿಜಯ ಪತಾಕೆಗಳು ಏತಕ್ಕಾಗಿ ಮೆರೆಯುತ್ತಿರುವುವು ? ಸ್ವಾಧಿಕಾರ ವ್ಯಾಪನಾರ್ಥವಾಗಿಯೇ ? ತಾವು ಕ್ಷತ್ರಿಯಕುಲಪುಂಗವರು, ತಿಳಿದವರು, ನಾನು ಕೇವಲ ಅಜ್ಞನು.

ಜಸವಂತಸಿಂಗನು ಅಧೋವದನನಾಗಿದ್ದನು. ಮಹಾದೇವಜೀಯು ಮತ್ತೂ ಹೇಳತೊಡಗಿದನು.—"ತಾವು ರಾಜಪುತ್ರರು. ಮಹಾರಾಷ್ಟ್ರರು ರಾಜಪುತ್ರರ ಪುತ್ರರು. ತಂದೆಮಕ್ಕಳಿಗೆ ಯುದ್ಧ ಸಂಭವಿಸಲಾರದು. ಭವಾನೀದೇವಿಯು ತಾನೇ ಯುದ್ಧವನ್ನು ನಿಷೇಧಿಸಿರುವಳು. ನೀವು ಅಪ್ಪಣೆಕೊಡಿರಿ; ನೀವು ತೋರಿಸಿದ ದಾರಿಯಲ್ಲಿ ನಾವು ನಡೆಯುವೆವು. ದಿಕ್ಕಿಲ್ಲದ ಭರತಖಂಡಕ್ಕೆ ರಾಜಪುತ್ರರ ಯಶೋಗೀತ

ಗಳನ್ನು ನಮ್ಮ ರಮಣಿಯರು ಹಾಡುತ್ತಿರುವರು. ರಾಜಪುತ್ರರಿಂದ ನಮ್ಮ ಬಾಲಕರು ಶಿಕ್ಷಣವನ್ನು ಹೊಂದುತ್ತಿರುವರು. ಕ್ಷತ್ರಿಯಕುಲಾವತಂಸರೇ! ರಾಜಪುತ್ರರ ರಕ್ತದಿಂದ ನಮ್ಮ ಖಡ್ಗಗಳು ಕಲುಷಿತವಾಗುವುದಕ್ಕೆ ಮೊದಲೇ ಮಹಾರಾಷ್ಟ್ರ ಸಾಮ್ರಾಜ್ಯವು ನಶಿಸಿಹೋಗಲಿ, ನಾವು ಭಲ್ಲೆಗಳನ್ನೂ ಕತ್ತಿಗಳನ್ನೂ ಬಿಟ್ಟು ಕಲಿತುಕೊಳ್ಳುವವರಾಗೋಣ.,,

ಆಬಳಿಕ ಜಸವಂತಸಿಂಗನು ಕೆಳಕ್ಕೂ ಮೇಲಕ್ಕೂ ನೋಡುತ್ತ ಮೆಲ್ಲಗೆ—‹ ದೂತಶ್ರೇಷ್ಠ! ನಿನ್ನ ಮಾತುಗಳು ಬಹು ಮಧುರವಾಗಿವೆ. ಆದರೆ ನಾನು ದಿಲ್ಲೀಶ್ವರನ ಊಳಿಗದಲ್ಲಿರುವೆನು. ಮಹಾರಾಷ್ಟ್ರರೊಡನೆ ಯುದ್ಧಮಾಡಬೇಕೆಂದು ಬಂದಿರುವೆನು. ಆದುದರಿಂದ ನಾನು ಯುದ್ಧಮಾಡುವೆನು'' ಎಂದು ಉತ್ತರವಿತ್ತನು.

ಮಹಾ—ಈ ರೀತಿ ಒಬ್ಬೊಬ್ಬರಾಗಿ ಬಂದು ಸ್ವಧರ್ಮನಿಷ್ಠರನ್ನು ಸಂಹರಿಸುವರು! ಹಿಂದುಗಳು ಹಿಂದುಗಳ ತಲೆಗಳನ್ನು ಕತ್ತರಿಸುವರು. ಬ್ರಾಹ್ಮಣನು ಬ್ರಾಹ್ಮಣನ ಎದೆಯಮೇಲೆ ಬಾಕನ್ನು ನೆಡುವನು. ಕ್ಷತ್ರಿಯರ ರಕ್ತದೊಡನೆ ಕ್ಷತ್ರಿಯರ ರಕ್ತ ಪ್ರವಾಹವು ಮಿಳಿತವಾಗುವುದು. ಕೊನೆಗೆ ಮ್ಲೇಂಛರಿಗೆ ಜಯವಾಗುವುದು.''

ಜಸವಂತಸಿಂಗನ ಮುಖವು ಕೋಪವನ್ನು ಸೂಚಿಸಿತು. ಆದರೂ ಕೋಪವನ್ನು ಅಡಗಿಸಿಕೊಂಡು ಕರ್ಕಶಸ್ವರದಿಂದ- "ಯುದ್ಧವು ದೆಹಲಿ ಚಕ್ರವರ್ತಿಗೋಸ್ಕರವೇ ಅಲ್ಲ; ನಾನು ನಿಮ್ಮ ಪ್ರಭುವಿನೊಡನೆ ಏನೆಂದು ಸ್ನೇಹವನ್ನು ಬೆಳಸಲಿ? ಶಿವಾಜಿಯು ಮಹಾಧೂರ್ತನು. ಅವನು ಈಗ ಆಡಿದ ಮಾತನ್ನು ನಾಳೆ ಸುಲಭವಾಗಿ ಬದಲಾಯಿಸುವನು." ಎಂದನು

ಮಹಾ—(ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಗಂಭೀರ ವಾಕ್ಯಗಳಿಂದ) ‹‹ ಮಹಾರಾಜಾ! ಪರಾಮರ್ಶಿಸು. ನಿಷ್ಕಾರಣವಾಗಿ ನಿಂದಿಸುವುದು ಯುಕ್ತವಲ್ಲ. ಶಿವಾಜಿಯು ಹಿಂದುಗಳಿಗೆ ಮಾಡಿದ ವಾಗ್ದಾನವನ್ನು ಎಂದಾದರೂ ಮುರಿದಿರುವನೆ? ದೇಶದಲ್ಲಿ ಅನೇಕ ಗ್ರಾಮಗಳಿವೆ ಪ್ರತಿಯೊಂದು ಊರಿನಲ್ಲಿಯೂ ದೇವಾಲಯಗ

ಳಿವೆ. ಶಿವಾಜಿಯು ಸತ್ಯವನ್ನು ಕಾಪಾಡುವುದಕ್ಕೂ ಬ್ರಾಹ್ಮಣರಿಗೆ ಆಶ್ರಯವನ್ನು ಕೊಡುವುದಕ್ಕೂ ಹಿಂದುಗಳಿಗೆ ಉಪಕಾರವನ್ನು ಮಾಡುವುದಕ್ಕೂ ಗೋವತ್ಸಾದಿಗಳನ್ನು ಸಂರಕ್ಷಿಸುವುದಕ್ಕೂ ದೇವರ ಪೂಜೆಯನ್ನು ನಡೆಯಿಸುವುದಕ್ಕೂ ಎಂದಾದರೂ ಪರಾಙ್ಮುಖನಾಗಿರುವನೇನೋ ವಿಚಾರಿಸು. ಇನ್ನು ಮುಸಲ್ಮಾನರೊಡನೆ ಯುದ್ಧವೆ? ಜಯಹೊಂದಿದವರಿಗೂ ಪರಾಜಿತರಿಗೂ ಯಾವದೇಶದಲ್ಲಿಯಾದರೂ ಸ್ನೇಹವಿರುವುದೆ? ಗರುಡನು ಸರ್ಪವನ್ನು ಹಿಡಿದುಕೊಂಡಾಗ ಸರ್ಪವು ಸತ್ತಂತೆ ಬಿದ್ದಿರುವುದು. ಸತ್ತಿರುವುದೆಂದು ಬಿಟ್ಟಕೂಡಲೇ ಅದು ತನ್ನ ಶತೃತ್ವವನ್ನು ತೀರಿಸಿಕೊಳ್ಳುವುದು. ಇದು ದ್ರೋಹಾಚರಣೆಯೋ? ನಾಯಿ, ಕುಂದಲಿಯನ್ನು ಹಿಡಿಯುವುದಕ್ಕೆ ಪ್ರಯತ್ನಿಸುವುದು. ಕುಂದಲಿಯು ಆತ್ಮರಕ್ಷಣೆಗೋಸ್ಕರ ಸ್ವಲ್ಪ ಪ್ರಯಾಸಪಡುವುದು. ಈ ದಿಕ್ಕಿನಲ್ಲಿ ಓಡಿ ಹೋಗುವಂತೆ ತೋರ್ಪಡಿಸಿ, ಕೂಡಲೇ ಮತ್ತೊಂದು ದಾರಿಯಲ್ಲಿ ಹೋಗುವುದು. ಇದು ಧೂರ್ತತೆಯೆ? ಅಲ್ಲದೆ ಸ್ವಾಭಾವಿಕವೆ? ಸಮಸ್ತ ಜೀವಜಂತುಗಳಿಗೂ ಪ್ರಾಣಸಂರಕ್ಷಣಾರ್ಥವಾಗಿ ಜಗದೀಶ್ವರನು ಏರ್ಪಡಿಸಿದ ಉಪಾಯವು ಮನುಷ್ಯನಿಗೆ ಮಾತ್ರ ಇಲ್ಲವೊ? ನಮ್ಮ ಪ್ರಾಣಗಳಿಗೆ ಪ್ರಾಣವನ್ನೂ ಜೀವಗಳಿಗೆ ಜೀವನಸ್ವರೂಪವಾದ ಸ್ವಾತಂತ್ರ್ಯವನ್ನೂ ಮುಸಲ್ಮಾನರು ಅಪಹರಿಸುತ್ತಿರುವರು. ಅಂತಹರೊಡನೆ ಸ್ನೇಹವೆ? ಅಂಥಹರಲ್ಲಿ ನಮ್ಮ ಸತ್ಯಪರಿಪಾಲನವೆ? ಅವರು ಸತ್ಯಸ್ವರೂಪವಾದ ನಮ್ಮ ಬಲವನ್ನೂ ದೇಶಗೌರವವನ್ನೂ ಧರ್ಮವನ್ನೂ ನಾಶಮಾಡುತ್ತಿರುವರು. ಅಂಥಹರ ಬಲೆಗೆ ಸಿಲುಕದಂತೆ ನಮ್ಮ ಸ್ವಾತಂತ್ರ್ಯವನ್ನೂ ಸ್ವಧರ್ಮವನ್ನೂ ಜಾತೀಯಗೌರವವನ್ನೂ ರಕ್ಷಿಸುವುದಕ್ಕೆ ಯಾವ ಉಪಾಯವನ್ನು ಅವಲಂಬಿಸುವೆವೋ-ಅದು ನಿಂದ್ಯವೇ? ಜೀವವನ್ನುಳಿಸಿಕೊಳ್ಳುವುದಕ್ಕೆ ಓಡಿಹೋಗುವುದೇ ಮುಖ್ಯವೆಂದು ಎಣಿಸಿದ ಜಿಂಕೆಯ ಗಮನವೇಗವು ದ್ರೋಹಾಚರಣೆಯೆಂದು ಹೇಳಬಹುದೆ? ಕ್ಷತ್ರಿಯವೀರರೇ! ಮುಸಲ್ಮಾನರು ಮಹಾರಾಷ್ಟ್ರರನ್ನು ಕಪಟಿಗಳೆಂದು ನಿಂದಿಸುವುದನ್ನು ಅಹೋರಾತ್ರಿಯಲ್ಲಿಯೂ ಕೇಳುತ್ತಿರುವೆನು; ಆದರೆ ತಾವು ಹಿಂದುಗಳಾಗಿ, ಹಿಂದುಗಳನ್ನು ನಿಂದಿಸಬಾರದು; ಮತ್ತು ಶಿವಾಜಿಯನ್ನು ದೂಷಿಸಲಾಗದು.–'' (ಪ್ರಜ್ವಲಿಸುತ್ತಿದ್ದ ಮಹಾದೇವಜೀಯ ನೇತ್ರದ್ವಯವು ಬಾಷ್ಪಾಕುಲಿತವಾಯಿತು).

ಬ್ರಾಹ್ಮಣನ ಕಣ್ಣೀರನ್ನು ನೋಡಿ ಜಸವಂತಸಿಂಗನು ವ್ಯಥೆಪಟ್ಟು.— “ದೂತಶ್ರೇಷ್ಠ! ನಾನು ನಿನಗೆ ಕಷ್ಟವನ್ನುಂಟುಮಾಡಬೇಕೆಂದು ಬಯಸಿದವನಲ್ಲ. ಅನ್ಯಥಾ ಮಾತನಾಡಿದ್ದರೆ ಕ್ಷಮಿಸಿ! ರಜಪೂತರು ಸ್ವಾತಂತ್ರ್ಯವನ್ನು ನಿಲ್ಲಿಸಿಕೊಳ್ಳುತ್ತಿರುವರು. ಆದರೆ ಅವರ ಪರಾಕ್ರಮವು ಬಹಿರಂಗಯುದ್ಧದಲ್ಲಿ ಹೊರತು ಬೇರೆ ರೀತಿಯಾಗಿ ಪ್ರಕಾಶಪಡುವದಲ್ಲ. ಮಹಾರಾಷ್ಟ್ರರು ಕೂಡ ಅದನ್ನೇ ಅವಲಂಬಿಸಿ ಅಂತಹ ಫಲವನ್ನು ಹೊಂದಲಾರರೆ?” ಎಂದು ಕೇಳಿದನು.

ಮಹಾ—“ಮಹಾರಾಜ! ರಜಪುತ್ರರಿಗೆ ಹೇರಳವಾದ ಐಶ್ವರ್ಯವಿರುವುದು. ಅನೇಕ ದುರ್ಗಗಳಿರುವುವು. ದೊಡ್ಡ ನಗರಗಳಿರುವುವು. ಅನೇಕ ವರ್ಷಗಳಿಂದ ವಂಶಪಾರಂಪರ್ಯವಾಗಿ ರಣಶಿಕ್ಷಣವನ್ನು ಹೊಂದುತ್ತಿರುವರು. ಮಹಾರಾಷ್ಟ್ರರು ಇವರಂತೆ ಇರಲು ಸಾಧ್ಯವೆ? ಅವರು ದರಿದ್ರರು. ಬಹುಕಾಲದಿಂದಲೂ ಪರಾಧೀನರು. ಅವರಿಗೆ ಈಗಲೇ ಪ್ರಥಮ ಯುದ್ಧ ಪ್ರಯತ್ನವು. ನಿಮ್ಮ ದೇಶವನ್ನು ಆಕ್ರಮಿಸುವಾಗ ನೀವು ಪುರಾತನರೀತಿಗೆ ಅನುಸಾರವಾಗಿ ಯುದ್ಧವನ್ನು ಮಾಡುವಿರಿ. ಪ್ರಾಚೀನರೀತಿ ಪರಾಕ್ರಮಗಳನ್ನು ಪ್ರಕಾಶಪಡಿಸುವಿರಿ. ರಾಜಪುತ್ರರ ವಾಹಿನೀ ಸಮ್ಮುಖದಲ್ಲಿ ದಿಲ್ಲೀಶ್ವರನ ಧ್ವಜಗಳು ನಿಲ್ಲುವುವೆ? ನಮ್ಮ ದೇಶದಮೇಲೆ ಶತ್ರುಗಳು ದಂಡೆತ್ತಿ ಬಂದಾಗ ನಾವೇನು ಮಾಡಬಲ್ಲೆವು! ವಂಶಪಾರಂಪರ್ಯವಾದ ರಣಶಿಕ್ಷಣವೂ ಇಲ್ಲ. ವಿಶೇಷ ಸೈನ್ಯವಾದರೂ ಇಲ್ಲ. ಇರುವ ಸೈನಿಕರಾದರೂ ಯುದ್ಧವನ್ನು ಎಂದೂ ನೋಡಿದವರಲ್ಲ. ದಿಲ್ಲೀಶ್ವರನು ಕಾಬೂಲ, ಬಿಹಾರ, ಮಾಳವ ಮತ್ತು ರಾಜಪುತ್ರಸ್ಥಾನ ಪ್ರದೇಶಗಳಿಂದ ಮಹಾ ಯೋಧರನ್ನೂ ಚುರುಕಾಗಿರುವ ಯುದ್ಧಾಶ್ವಗಳನ್ನೂ ಯುದ್ಧದ ಆನೆಗಳನ್ನೂ ಫಿರಂಗಿಗಳನ್ನೂ ಬಂದೂಕುಗಳನ್ನೂ ಮದ್ದು, ಗುಂಡು ಮೊದಲಾದುವುಗಳನ್ನೂ ನೂರಾರು ಗಾಡಿಗಳಲ್ಲಿ ಚಿನ್ನ, ಬೆಳ್ಳಿ ನಾಣ್ಯಗಳನ್ನೂ ಕಳುಹುತ್ತಿರುವಾಗ ದರಿದ್ರರಾದ ಮಹಾರಾಷ್ಟ್ರರು ಏನು ಮಾಡಬಲ್ಲರು? ನಮ್ಮಲ್ಲಿ ಸರಿಯಾಗಿ ಯುದ್ಧ ಮಾಡತಕ್ಕವರೇ ಇಲ್ಲ. ಜಾಗ್ರತೆಯಾಗಿ ಓಡುವುದು, ಪರ್ವತಯುದ್ಧ-ಇವು ಹೊರತು ಬೇರೆ ಉಪಾಯವೇ ಇಲ್ಲ. ಮಹಾಪ್ರಭುವೇ! ದಾರಿದ್ರ್ಯವನ್ನು ಅನುಭವಿಸುವವರಿಗೆ ಮೊತ್ತಮೊದಲು ಇಂಥ ಆಚರಣೆಯೇ ಅಲ್ಲವೆ? ಇದೇ ಬಲವಾದ ತಳಹದಿ! ಭಗವಂತನ ಅನುಗ್ರಹದಿಂದ ಮಹಾರಾಷ್ಟ್ರರು ದೀರ್ಘಾಯುಗಳಾಗಲಿ! ಹೆಚ್ಚಾದ ಐಶ್ವರ್ಯವನ್ನು

ಸಂಪೂರ್ಣವಾದ ರಕ್ಷಣಶಿಕ್ಷಣವನ್ನೂ ಹೊಂದಿದ ಕೆಲವು ಕಾಲದಮೇಲೆ, ಅವರು ರಾಜಪುತ್ರರ ಅಸಾಧಾರಣ ಸುಗುಣಗಳನ್ನು ಅನುಸರಿಸುವರು.

ಈ ಮಾತುಗಳನ್ನು ಕೇಳಿ ಜಸವಂತಸಿಂಗನು ವ್ಯಥೆಪಟ್ಟವನಾಗಿ ಗಲ್ಲದಮೇಲೆ ಕೈಯನ್ನಿಟ್ಟುಕೊಂಡು ಯೋಚಿಸುತ್ತ ಕುಳಿತನು. ಅದನ್ನು ನೋಡಿ, ಮಹಾದೇವ ಜೀಯು "ಜೀಯಾ! ತಾವು ಹಿಂದುಗಳಲ್ಲಿ ಶ್ರೇಷ್ಠರು. ಹಿಂದೂ ಧರ್ಮವನ್ನು ಉದ್ಧರಿಸುವುದೇ ತಮ್ಮ ಕರ್ತವ್ಯವಾಗಿರುವುದು. ಶಿವಾಜಿರಾಯನಿಗೆ ಇದಕ್ಕಿಂತಲೂ ಭಿನ್ನಾಭಿಪ್ರಾಯಪಡುವ ಇಚ್ಛೆಯಿಲ್ಲ. ಮುಸಲ್ಮಾನರ ಶಾಸನಧ್ವಂಸವೂ; ದೇವಾಲಯಗಳ ಸ್ಥಾಪನವೂ ಬ್ರಾಹ್ಮಣರಿಗೆ ಆಶ್ರಯವೂ ಗೋವತ್ಸಾದಿಗಳ ಸಂರಕ್ಷಣವೂ- ಇವೇ ಮೊದಲಾದ ಕಾರ್ಯಗಳನ್ನು ಮಾಡಬೇಕೆಂಬುದೇ ಶಿವಾಜಿಯ ಕೋರಿಕೆ. ಈ ಕಾರ್ಯಗಳಲ್ಲಿ ನೀವು ಅವರಿಗೆ ಸಹಾಯ ಮಾಡದೆ ವಿಮುಖರಾದರೂ ಚಿಂತೆಯಿಲ್ಲ. ಅವರೇ ಸ್ವತಃ ಈ ಕೆಲಸವನ್ನು ನಿರ್ವಹಿಸುವರು. ತಾವು ಈ ದೇಶದ ಪ್ರಭುತ್ವವನ್ನು ಸ್ವೀಕರಿಸಿ, ಮುಸಲ್ಮಾನರನ್ನು ಓಡಿಸಿ, ಹಿಂದೂ ರಾಷ್ಟ್ರವನ್ನು ಅಭಿವೃದ್ಧಿಮಾಡಿ, ಸ್ವಾತಂತ್ರ್ಯವನ್ನು ಪ್ರಕಾಶಪಡಿಸಿರಿ. ಸ್ಪಷ್ಟೆಮಾಡರೆ ಈಗಲೇ ಎಲ್ಲಾ ದುರ್ಗದ್ವಾರಗಳೂ ತೆರೆಯಲ್ಪಡುವುವು. ಪ್ರಜೆಗಳು ತಮಗೆ ಕಾಣಿಕೆಗಳನ್ನು ಸಲ್ಲಿಸುವರು. ಶಿವಾಜಿಗಿಂತಲೂ ತಾವು ಸಾವಿರಪಾಲು ಹೆಚ್ಚಾಗಿ ಶಕ್ತಿಯುಳ್ಳವರು. ತಾವು ದೂರದರ್ಶಿಗಳೂ ರಾಜಾರ್ಹರೂ ಆಗಿರುವಿರಿ. ಸಂತೋಷಚಿತ್ತನಾಗಿ, ಶಿವಾಜಿಯು ತನ್ನ ಸೇನಾಪತಿಯಾಗಿದ್ದು ಮುಸಲ್ಮಾನರನ್ನು ನಾಶಮಾಡಲು ಪ್ರಯತ್ನಿಸುವನು. ಆತನಿಗೆ ಮತ್ತೆ ಬೇರೆ ಅಪೇಕ್ಷೆಯಿರುವುದಿಲ್ಲ.

ಈ ಸಂಭಾಷಣೆಯಿಂದ ಮಹತ್ವಾಕಾಂಕ್ಷಿಯಾದ ಜಸವಂತಸಿಂಹನ ಕಣ್ಣುಗಳು ಆನಂದದಿಂದಲೂ ವಿಷಾದದಿಂದಲೂ ಕೂಡಿದಂತಾದುವು. ಸ್ವಲ್ಪ ಹೊತ್ತು ಆತನು ಆಲೋಚಿಸಿ, "ಮೇವಾರವೇ ಮಹಾರಾಷ್ಟ್ರದೇಶವು. ಒಂದಕ್ಕೊಂದಕ್ಕೆ ಬಹು ದೂರವಿರುವುದು. ಒಬ್ಬನೇ ದೊರೆ ಆಳುವುದು ಅಸಂಭವ." ಎಂದನು.

ಮಹಾ— ಹಾಗಾದರೆ ತಮಗೆ ಬೇಕಾದವರನ್ನು ಈ ರಾಜ್ಯಕ್ಕೆ ದೊರೆಯನ್ನಾಗಿ ಮಾಡಿರಿ; ಅಥವಾ ನಿಮ್ಮ ಬಂಧುಗಳಲ್ಲಿ ಒಬ್ಬ ಯೋಧನನ್ನು ನಿಯಮಿಸಿ. ಕ್ಷತ್ರಿಯನಾದ ಶಿವಾಜಿಯ ಅಧೀನದಿಂದ ಕಾರ್ಯಗಳನ್ನು ನಿರ್ವಹಿಸಬಹುದು.

ಆದರೆ ಒಂದು ವೇಳೆಯಾದರೂ ಕ್ಷತ್ರಿಯರೊಡನೆ ಯುದ್ಧವನ್ನು ಮಾಡುವೆನೆಂಬ ಮಾತು ಕನಸಿನ ವಾರ್ತೆಯಾಗಿರುವುದು.

ಜಸ—ಈ ವಿಪತ್ಕಾಲದಲ್ಲಿ ಔರಂಗಜೇಬನೊಡನೆ ಯುದ್ಧವನ್ನು ಮಾಡಿ, ರಾಜ್ಯವನ್ನು ಉಳಿಸಿಕೊಳ್ಳುವವರು ಯಾರೂ ನಮ್ಮಲ್ಲಿಲ್ಲ.

ಮಹಾ—ಯಾವನಾದರೂ ಒಬ್ಬ ಕ್ಷತ್ರಿಯನನ್ನು ನಿಯಮಿಸಿ ಹಿಂದೂಧರ್ಮದ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವ ಅವರ ಮನೋರಥವು ಸಫಲವಾದಂತೆಯೇ! ಅನಂತರ ಅವರು ಆನಂದಾತಿಶಯದಿಂದ ರಾಜ್ಯವನ್ನು ಬಿಟ್ಟು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವರು.

ಜಸ—ಅಂಥವನು ಇಲ್ಲ.

ಮಹಾ—ಹಾಗಾದರೆ ಶಿವಾಜಿಮಹಾರಾಯನಿಗೆ ಸಹಾಯವನ್ನು ಮಾಡಿ. ನಿಮ್ಮ ಬಲದಿಂದಲೂ ಆಶೀರ್ವಾದದಿಂದಲೂ ಅವರು ಸ್ವದೇಶವನ್ನೂ ಸ್ವಧರ್ಮವನ್ನೂ ಕಾಪಾಡಿಕೊಳ್ಳಬಲ್ಲರು. ಮಹಾಪ್ರಭುವೆ! ಕ್ಷತ್ರಿಯರಿಗೆ ಸಹಾಯಮಾಡಬೇಕು.

ಜಸ ದ್ವಿಜಾಗ್ರಣಿ! ನಿಮ್ಮ ಉಪದೇಶವು ಸಾಧುವಾದುದು. ಆದರೆ ಚಕ್ರವರ್ತಿಯು ನನ್ನನ್ನು ಸ್ನೇಹಪೂರ್ವಕವಾಗಿ ಈ ಕೆಲಸದಲ್ಲಿ ನೇಮಿಸಿರುವನು. ವಿಶ್ವಾಸಘಾತಕವಾದ ಈ ಕೆಲಸವನ್ನು ನಾನು ಹೇಗೆಮಾಡಲಿ? ದ್ರೋಹವನ್ನು ಚಿಂತಿಸುವುದೂ ಕೂಡ ಸತ್ಪುರುಷರಿಗೆ ತಕ್ಕುದಲ್ಲ.

ಮಹಾ—ಡಿಲ್ಲೀಶ್ವರನು ಹಿಂದುಗಳನ್ನು 'ಕಾಫರರು' ಎಂದು ದೂಷಿಸುತ್ತಾ, 'ಜೆಸಿಯಾ' ಎಂಬ ತಲೆತೆರಿಗೆಯನ್ನು ವಿಧಿಸಿದನಲ್ಲವೆ? ಅದು ಮಾತ್ರ ಸಜ್ಜನರ ಯೋಗ್ಯತೆಗೆ ತಕ್ಕುದೊ? ದೇಶದೇಶಗಳಲ್ಲಿ ದೇವಾಲಯಗಳನ್ನು ಹಾಳುಮಾಡಿಸಿದುದು ನ್ಯಾಯವಾದುದೊ? ಕಾಶಿಯಲ್ಲಿ ದೇವಮಂದಿರಗಳನ್ನು ಕೆಡಹಿಸಿ, ಅಲ್ಲಿಯೇ ಮಸೀದಿಗಳನ್ನು ಕಟ್ಟಿಸಿದನಲ್ಲವೇ? ಅದುಮಾತ್ರ ನ್ಯಾಯವೊ? ತನ್ನ ಅಣ್ಣತಮ್ಮಂದಿರನ್ನು ಸಂಹಾರಮಾಡಿ ಅನ್ಯಾಯಮಾರ್ಗದಲ್ಲಿ ಸಿಂಹಾಸನಾಸೀನನಾದನಲ್ಲವೆ. ಅದು ಸರ್ವಸಮ್ಮತವೊ?'

ಮಹಾದೇವಜೀಯ ವಿಮರ್ಶಾಪೂರ್ವಕ ಭಾಷಣವನ್ನು ಕೇಳುತ್ತಿದ್ದಂತೆಯೇ ಜಸವಂತನ ಭಾವವ ಬದಲಾಯಿಸುತ್ತ ಬಂದಿತು. ಕಡೆಗೆ ನಿಟ್ಟುಸುರಿಟ್ಟು ಹೇಳಿದನು.—

‘ಬ್ರಾಹ್ಮಣಶ್ರೇಷ್ಠ! ಇನ್ನು ಸಾಕು. ಇಂದು ಮೊದಲು ಶಿವಾಜಿಯು ನನ್ನ ಸ್ನೇಹಿತನು. ನಾನು ಶಿವಾಜಿಯ ಸ್ನೇಹಿತನು. ಶಿವಾಜಿಯ ಪ್ರತಿಜ್ಞೆಯೂ ನನ್ನ ಪ್ರತಿಜ್ಞೆಯೂ ಒಂದೇ! ಶಿವಾಜಿಯ ಪ್ರಯತ್ನ ನನ್ನ ಪ್ರಯತ್ನದಲ್ಲಿ ಎಷ್ಟೋ ಭೇದವುಂಟು. ಹಿಂದುಗಳ ವಿರೋಧಿಯಾದ ಡಿಲ್ಲೀಶ್ವರನಿಗೆ ಪ್ರತಿಕಕ್ಷಿಯಾಗಿ ಇಷ್ಟು ಕಾಲದವರೆಗೆ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುತ್ತಿದ್ದ ಮಹಾತ್ಮನೆಲ್ಲಿ? ಡಿಲ್ಲೀಶ್ವರನ ಸೇನಾಧಿಕಾರಿಯಾಗಿ ಸ್ವಾತಂತ್ರ್ಯವನ್ನು ಕಳೆದು ಹಿಂದುಗಳ ಮೇಲೆಯೇ ಕತ್ತಿಯನ್ನೆತ್ತಿದ ನಾನೆಲ್ಲಿ? ಒಂದುವೇಳೆ ಆ ಮಹಾನುಭಾವನ ದರ್ಶನವು ನನಗಾದರೆ ನನ್ನ ಬಾಹುಗಳಿಂದ ಆತನನ್ನು ದೃಢವಾಗಿ ಆಲಿಂಗಿಸಿ ನನ್ನ ಹೃತ್ತಾಪವನ್ನು ಕಳೆದುಕೊಳ್ಳುವೆನು.

ಬ್ರಾಹ್ಮಣನು ಜಸವಂತನ ಮುಖವನ್ನು ದೃಷ್ಟಿಸಿ ನೋಡಿದನು. ಒಡನೆಯೆ ತನ್ನ ಉಡುಪನ್ನು ಬದಲಾಯಿಸಿದನು. ತಲೆಯಲ್ಲಿ ರಾಜಮುಕುಟವು ಕಾಣಿಸಿತು. ಅನಂತರ ಮಹಾರಾಷ್ಟ್ರವೀರನು ಮೆಲ್ಲಮೆಲ್ಲನೆ ಹೇಳಿದನು.—

‘ಮಹಾರಾಜಾ! ಛದ್ಮವೇಷದಿಂದ ತಮ್ಮ ಬಳಿಗೆ ಬಂದು ಇಷ್ಟುದೂರ ಮಾತನಾಡಿದುದಕ್ಕೆ ಕ್ಷಮೆಯಿರಲಿ. ಇದನ್ನು ದೋಷವಾಗಿ ಎಣಿಸಬಾರದು. ಈತನು ಬ್ರಾಹ್ಮಣನಲ್ಲ, ಮಹಾರಾಷ್ಟ್ರಕ್ಷತ್ರಿಯನು; ಮಹಾದೇವಭಟನೂ ಅಲ್ಲ—ತಮ್ಮ ಅನುಗ್ರಹಕ್ಕೆ ಪಾತ್ರನಾದ ಶಿವಾಜಿ!’

ರಾಜಾ ಜಸವಂತಶಿಂಗನು ವಿಸ್ಮಿತನಾಗಿ ಸುಪ್ರಸಿದ್ಧ ಮಹಾರಾಷ್ಟ್ರವೀರನೂ ಡಿಲ್ಲೀಶನ ಪ್ರತಿಕಕ್ಷಿಯೂ ದಾಕ್ಷಿಣಾತ್ಯವೀರ ಚೂಡಾಮಣಿಯೂ ಆದ ಶಿವಾಜಿಯನ್ನು ರೆಪ್ಪೆಹಾಕದೆ ನೋಡತೊಡಗಿದನು; ಆನಂದಾತಿಶಯದಿಂದ ಆಸನವನ್ನು ಬಿಟ್ಟು ಎದ್ದುಬಂದು, ಸ್ವಲ್ಪಹೊತ್ತಿಗೆ ಮೊದಲು ಶತ್ರುವೆಂದು ಭಾವಿಸಿದ್ದ ಆತನನ್ನು ತಾನಾಗಿಬಂದು, ಪ್ರೀತಿಪೂರ್ವಕವಾಗಿ ಆಲಿಂಗಿಸಿದನು. ರಾತ್ರಿಯೆಲ್ಲ ಸಂಭಾಷಣೆಯಲ್ಲಿ ಕಳೆಯಿತು. ಶಿವಾಜಿಯು ಹೊರಡುವಾಗ ಜಸವಂತಶಿಂಗನಿಗೆ ‘ಮಹಾರಾಜ! ನಮ್ಮಲ್ಲಿ ಅನುಗ್ರಹವಿಟ್ಟು, ಯಾವುದಾದರೂ ಕಾರಣದಿಂದ ಪೂನಾನಗರದಿಂದ ಒಂದೆರಡು ಹರಿದಾರಿ ದೂರದಲ್ಲಿರುವುದಾದರೆ ಸಹಾಯವಾಗುವುದು.’ ಎಂದು ಹೇಳಿದನು.

ಜಸ— ಏನು! ನಾಳೆ ಪೂನಾನಗರವನ್ನು ಸ್ವಾಧೀನಮಾಡಿಕೊಳ್ಳಲು ಯತ್ನಿಸುವಿರಾ?

ಶಿವಾಜಿ—(ಮಂದಹಾಸದಿಂದ) ಇಲ್ಲ; ಒಂದು ಮದುವೆ ನಡೆಯಬೇಕಾಗಿದೆ. ಮಹಾರಾಜರವರು ಅಲ್ಲಿದ್ದರೆ ಶುಭಕಾರ್ಯಕ್ಕೆ ವಿಘ್ನವುಂಟಾಗಬಹುದು.

ಜಸ—ಒಳ್ಳೆಯದು, ದೂರವಾಗಿಯೇ ಇರುವೆನು. ವಿವಾಹ ಮಂತ್ರಗಳು ನ್ಯಾಯಶಾಸ್ತ್ರಿ ಮಹಾಶಯನಿಗೆ ಜ್ಞಾಪಕದಲ್ಲಿವೆಯೊ?

ಶಿವಾಜಿ—ಸಂದೇಹವೇನು? ನನ್ನ ಪಾಂಡಿತ್ಯವನ್ನು ನೋಡಿ ಷಯಿಸ್ತಾಖಾನನು ಆಶ್ಚರ್ಯಹೊಂದಿರುವನು. ನಾಳೆ ಆತನು ಮತ್ತೊಂದು ವಿಧದಲ್ಲಿ ಪಾಂಡಿತ್ಯವನ್ನು ನೋಡಬಲ್ಲನು.

ಜಸವಂತಸಿಂಗನು ಶಿವಾಜಿಯೊಡನೆ ಬಾಗಿಲವರೆಗೂ ಬಂದು 'ಹಾಗಾದರೆ ಯುದ್ಧದ ವಿಷಯದಲ್ಲಿ ನಾವು ಮಾತಾಡಿದ ಪ್ರಕಾರ ಕೆಲಸ ಮಾಡುವಿರಿ?' ಎಂದು ಎಚ್ಚರಿಸಲು ಶಿವಾಜಿಯು 'ಹಾಗೆ ಮಾಡುವುದಕ್ಕೆ ಶಿವಾಜಿಮಹಾರಾಜನೊಡನೆ ಹೇಳುವೆನು.' ಎಂದು ಪ್ರತ್ಯುತ್ತರವೀಯಲು ಆತನು, 'ಆ ಮರೆತೆನು ಆ ಪ್ರಕಾರಮಾಡುವಂತೆ ನಿಮ್ಮ ಪ್ರಭುಗಳಿಗೆ ನಿವೇದಿಸು.' ಎಂದು ಹೇಳಿ ನಗುತ್ತ ಗುಡಾರದೊಳಗೆ ಪ್ರವೇಶಿಸಿದನು.

---

# ಆರನೆಯ ಪ್ರಕರಣ.

---

(ಶಿವಾಜಿ.)

ಪೂರ್ವದಿಕ್ಕಿನಲ್ಲಿ ಬೆಳಕು ಹೆಚ್ಚುತ್ತಿರಲು, ಆ ಸಮಯದಲ್ಲಿ ಬ್ರಾಹ್ಮಣವೇಷಧಾರಿಯಾದ ಶಿವಾಜಿಯು ಸಿಂಹಗಡ ದುರ್ಗದಲ್ಲಿ ಪ್ರವೇಶಿಸಿದನು. ಆತನನ್ನು ನೋಡಿ ಪೇಷ್ವೆ ಮುರೇಶ್ವರನು ಆನಂದದಿಂದ,—'ಭವಾನೀದೇವಿಗೆ ಜಯವಾಗಲಿ! ಇಷ್ಟುಹೊತ್ತಿಗೆ ತಾವು ಕ್ಷೇಮವಾಗಿ ಬಂದು ತಲುಪಿದಿರಿ,' ಎಂದು ಕೇಳಿದನು.

ಶಿವಾಜಿ—ತಮ್ಮ ಆಶೀರ್ವಾದ ಪ್ರಭಾವದಿಂದ ನಾನು ವಿಪತ್ತಿನಿಂದ ಪಾರಾದೆನು.

ಮುರೇ—ಎಲ್ಲವೂ ಸಿದ್ಧವಾಯಿತೇ ?

ಶಿವಾಜಿ—ಎಲ್ಲವೂ ಸಿದ್ಧವಾಗಿದೆ.

ಮುರೇ—ಮದುವೆ, ಈ ರಾತ್ರಿಯೇ ನಡೆಯುವುದೆ?

ಶಿವಾಜಿ—ಆಗುವುದು.

ಮುರೇ—ಷಯಿಸ್ತಾಖಾನನಿಗೆ ಕೊಂಚವಾದರೂ ತಿಳಿಯಲಿಲ್ಲವೆ ? ಸೂಕ್ಷ್ಮ ಬುದ್ಧಿಯುಳ್ಳ ಚಾಂದಖಾನನು ಸ್ವಲ್ಪವಾದರೂ ಗ್ರಹಿಸಲಾರದೆ ಹೋದನೇ!

ಶಿವಾಜಿ—ಭಯಪಟ್ಟಿದ್ದರೂ ಶಿವಾಜಿಯಿಂದ ಸಂಧಿಮಾಡಿಕೊಳ್ಳಲು ಷಯಿಸ್ತಾಖಾನನು ಕರಾರುಪತ್ರವನ್ನು ನಿರೀಕ್ಷಿಸುತ್ತಿರುವನು. ಚಾಂದಖಾನನು ದೀರ್ಘನಿದ್ರೆಯಲ್ಲಿರುವನು. ಇನ್ನು ಅವನು ಯುದ್ಧವನ್ನು ಮಾಡನು.

ಮುರೇ—ರಾಜಾ ಜಸವಂತಸಿಂಹನೋ ?

ಶಿವಾಜಿ—ತಾವು ಪತ್ರಿಕೆಯಲ್ಲಿ ತೋರಿಸಿದ ಯುಕ್ತಿಗಳಿಂದ ಮನಸ್ಸು ಚಲಿಸಿತು. ನಾನು ಅಲ್ಲಿಗೆ ಹೋದಮೇಲೆ ಅವರು ತಮ್ಮ ಕರ್ತವ್ಯವನ್ನು ಮರೆತಿರುವರೆಂಬುದು ಸ್ಪಷ್ಟವಾಯಿತು. ಆದರಿಂದ ಅನಾಯಾಸವಾಗಿ ಕಾರ್ಯಸಿದ್ಧಿಯಾಯಿತು.

ಮುರೇ—ಭವಾನಿಗೆ ಜಯವಾಗಲಿ ! ತಾವು ಬಂದು ಈ ರಾತ್ರಿಯಲ್ಲಿ ಮಾಡಬೇಕೆಂದು ನೆನಸಿದ ಕಾರ್ಯಗಳನ್ನು ಅಷ್ಟು ಶೀಘ್ರವಾಗಿ ಯಾರೂ ನೆರವೇರಿಸಲಾರರು ಪ್ರಭುಗಳು ನಿರ್ವಹಿಸಿದ ಕಾರ್ಯಗಳನ್ನು ಸ್ಮರಿಸಿಕೊಂಡರೆ ಈಗಲೂ ನನಗೆ ಎದೆಯು ಕಟಕಟನೆ ಹೊಡೆದುಕೊಳ್ಳುವುದು. ಇನ್ನುಮೇಲೆ ಇಂಥ ಕೆಲಸಗಳಲ್ಲಿ ಮುಂದಾಗಿ ಮಾತ್ರ ಪ್ರವೇಶಿಸಬಾರದೆಂದು ಪ್ರಾರ್ಥಿಸುವೆನು. ತಮಗೇನಾದರೂ ಅಪಾಯ ಸಂಭವಿಸಿದರೆ ಮಹಾರಾಷ್ಟ್ರದಗತಿಯೇನು ?

ಶಿವಾಜಿ—ಮುರೇಶ್ವರ ! ಅಪಾಯವಾದರೆ ಭಯಪಡುವುದೇಕೆ ? ಈಗಲೂ ಜಾಗರೂಕನಾಗಿಯೇ ಇರುವೆನು. ವಿಪದ್ಭಯಗಳಿದ್ದರೆ ಮಹದುದ್ದೇಶಗಳನ್ನು ಸಾಧಿಸುವುದು ಹೇಗೆ ? ಯಾವಾಗಲೂ ಜೀವಿತವು ವಿಪತ್ಪರಂಪರೆಗಳಿಂದ ಕೂಡಿದ್ದರೂ ನನಗೆ ಸ್ವಲ್ಪವೂ ವಿಚಾರವಿಲ್ಲ. ಆದರೂ, ಭವಾನೀದೇವಿಯು ಮಹಾರಾಷ್ಟ್ರರಿಗೆ

ಯಿಂದರೆ ಸಂಭವಿಸದಂತೆ ಕಾಪಾಡಿಕೊಳ್ಳುತ್ತಿರಲೆಂಬುದೇ ನನ್ನ ಕೋರಿಕೆ!

ಮುರೇ—ತಮಗೆ ವಿಜಯವಾಗತಕ್ಕ ಕೆಲಸಕ್ಕೆ ಭವಾನೀದೇವಿಯು ಸ್ವಂತ ವಾಗಿ ಸಹಾಯ ಮಾಡುವಳು. ಆದರೆ, ರಾತ್ರಿವೇಳೆಯಲ್ಲಿ,-ಶತ್ರುಮಧ್ಯದಲ್ಲಿ,-ಛದ್ಮವೇಷದೊಡನೆ......

ಶಿವಾಜಿ—ಇವೆಲ್ಲವೂ ಶಿವಾಜಿಗೆ ಹೊಸದೆ? ಆದರೂ ನಾನು ಒಂದು ಸಂಕ ಟದಲ್ಲಿ ಬಿದ್ದುದೇನೋ ನಿಜ.

ಮುರೇ—(ಗಾಬರಿಯಿಂದ) ಏನದು?

ಶಿವಾಜಿ—ಎಂಥ ಮೂಢನಿಗೆ ನೀವು ಶ್ಲೋಕಗಳನ್ನು ಕಲಿಸಿರುವಿರಿ? ತಮ್ಮ ಹೆಸರನ್ನು ಬರೆಯಲಾರದವನು ಸಂಸ್ಕೃತ ಶ್ಲೋಕಗಳನ್ನು ಜ್ಞಾಪಕದಲ್ಲಿಟ್ಟು ಕೊಳ್ಳುವನೆ?

ಮುರೇ—ಏನು ಸಂಭವಿಸಿತು?

ಶಿವಾಜಿ—ಮತ್ತೇನೂ ಇಲ್ಲ; ಷಯಿಸ್ತಾಖಾನನ ಸಭೆಗೆ ಹೋಗಿ ಮಹಾ ದೇವಜೀಯು ನ್ಯಾಯಶಾಸ್ತ್ರಜ್ಞನಾಗಿದ್ದರೂ ಸಾಧಾರಣವಾಗಿ ಎಲ್ಲ ಶ್ಲೋಕಗಳನ್ನೂ ಮರೆತುಹೋದನು.

ಮುರೇ—ಆ ತರುವಾಯ?

ಶಿವಾಜಿ—'ಒಂದೆರಡು ಶ್ಲೋಕಗಳು ಮಾತ್ರ ಜ್ಞಾಪಕಕ್ಕೆ ಬಂದು ಆದ ರಿಂದಲೇ ಕಾರ್ಯಸಿದ್ಧಿಯಾಯಿತು.'

(ಇಲ್ಲಿ ಶಿವಾಜಿಯ ಪೂರ್ವ ಚರಿತ್ರವನ್ನು ತಿಳಿದಿರಬೇಕಾದುದು ಅವಶ್ಯಕವಾ ಗಿರುವುದರಿಂದ ವಾಚಕರು ಇದನ್ನು ವಿಶೇಷ ಗಮನಿಸಬೇಕು.)

ಶಿವಾಜಿಯು ಕ್ರಿ. ಶ. ೧೬೨೭ನೆ ಇಸವಿಯಲ್ಲಿ ಹುಟ್ಟಿದನು. ಆದುದರಿಂದ ಈ ಚರಿತ್ರ ಪ್ರಾರಂಭಕಾಲದಲ್ಲಿ ಅವನಿಗೆ ಮೂವತ್ತಾರು ವರುಷ. ಶಿವಾಜಿಯ ತಂದೆ ಶಹಜಿ. ತಾತ ಮಲ್ಲಜೀ. ಪ್ರಥಮ ಪ್ರಕರಣದಲ್ಲಿ ನಿಂಬಾಳಕರವಂಶವನ್ನು ಕುರಿತು ಹೇಳಿರುವೆವು ಆ ವಂಶದವನಾದ ಯೋಗಪಾಲ ಎಂಬುವನ ತಂಗಿ ದೀಪಾ ಬಾಯಿಯನ್ನು ಮಲ್ಲಾಜಿಯು ಮದುವೆಯಾದನು. ಅನೇಕ ಸಂವತ್ಸರಗಳವರೆಗೆ ಮಕ್ಕಳಿಲ್ಲದೆ ಹೋದುದರಿಂದ ಅಹಮದ್‌ನಗರದ ನಿವಾಸಿಯಾದ 'ಸಾಹಸರೀಫ್'

ಎಂಬ ಸಾಧು (ಮುಹಮ್ಮದೀಯಜ್ಞಾನಿ)ವಿನ ಬಳಿಗೆ ಹೋಗಿ ಮಲ್ಲಾಜಿಯು ಅವನನ್ನು ಪ್ರಾರ್ಥಿಸಿದನು. ಆತನು ಮಲ್ಲಾಜಿಗೆ ಪುತ್ರಸಂತಾನವಾಗಲೆಂದು ದೇವರನ್ನು ಪ್ರಾರ್ಥಿಸಿದನು. ಆ ತರುವಾಯ ಕೆಲವು ಕಾಲದಮೇಲೆ ದೀಪಾಬಾಯಿ ಒಂದು ಗಂಡು ಮಗುವನ್ನು ಹಡೆದಳು ಮಲ್ಲಾಜಿಯು ಆ ಸಾಧುವಿನ ಹೆಸರಿನಲ್ಲಿ ತನ್ನ ಮಗನಿಗೆ ಶಾಹಜಿ ಎಂದು ನಾಮಕರಣ ಮಾಡಿದನು.

ಆ ಕಾಲದಲ್ಲಿ ಯಾದವರಾಯನೆಂಬ ಪ್ರಸಿದ್ಧ ಸೇನಾಪತಿಯು ಅಹಮದ್ ನಗರದಲ್ಲಿದ್ದನು. ಆತನು ಹತ್ತುಸಾವಿರ ಕುದುರೆಬಂಡಿಗೆ ಅಧಿಪತಿ ಮತ್ತು ಅವನಿಗೆ ಒಂದು ಜಹಗೀರೂ ಇದ್ದಿತು. ೧೫೯೯ನೆ ಇಸವಿಯಲ್ಲಿ ನಡೆದ ಹೋಳಿ ಹಬ್ಬದ ದಿನದಲ್ಲಿ, ತನ್ನ ಮಗ ಆಯ್ದುವರ್ಷದವನಾದ ಶಾಹಜಿಯನ್ನು ಕರೆದುಕೊಂಡು ಮಲ್ಲಾಜಿಯು ಯಾದವರಾಯನ ಮನೆಗೆ ಹೋದನು. ಯಾದವರಾಯನಿಗೆ ಮೂರು ವರ್ಷದ ‹ ಜೀಜೀಬಾಯಿ ’ ಎಂಬ ಮಗಳಿದ್ದಳು. ಶಾಹಜಿಯೂ ಜೀಜೀಬಾಯಿಯೂ ಕೂಡಿ ಆಡತೊಡಗಿದರು. ಅದನ್ನು ನೋಡಿ ಯಾದವರಾಯನು ಸಂತೋಷದಿಂದ ಜೀಜೀಯನ್ನು ಕರೆದು,—‹ ಜೀಜೀ ! ಈ ಹುಡುಗನನ್ನು ಮದುವೆಯಾಗುವೆಯಾ ? ಎಂದು ಕೇಳಿ ಅಲ್ಲಿದ್ದವರನ್ನು ನೋಡಿ ‹ ಇಬ್ಬರೂ ಸರಿಯಾದ ಜೋಡಿಯೇ ? ’ ಎಂದನು ಆ ಸಮಯದಲ್ಲಿಯೇ ಜೀಜೀ ಶಾಹಜಿಗಳು ಒಬ್ಬರ ಮೇಲೊಬ್ಬರು ಬುಕ್ಕಾ ಪುಡಿಯನ್ನು ಚೆಲ್ಲಿದುದರಿಂದ ಎಲ್ಲರೂ ಪಕಪಕನೆ ನಕ್ಕರು. ಆದರೆ ಮಲ್ಲಾಜಿಯು ಮಾತ್ರ ಗಂಭೀರವಾಗಿ ಅವರ ಕಡೆಗೆ ತಿರುಗಿ ‹ ಮಿತ್ರರೇ ! ನೀವೇ ಸಾಕ್ಷಿ ! ಯಾದವರಾಯನು ನನಗೆ ಬೀಗನಾಗುವಂತೆ ಈಗತಾನೇ ಮದುವೆಯ ಮಾತನ್ನು ಹೇಳಿರುವನು.’ ಎಂದನು. ಈ ಮಾತುಗಳಿಗೆ ಅವರು ಸಮ್ಮತಿಪಟ್ಟರು. ಯಾದವರಾಯನು ದೊಡ್ಡ ವಂಶಸ್ಥನು. ಶಾಹಜಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡ ವುದಕ್ಕೆ ಎಂದೂ ಒಪ್ಪನು. ಆದರೆ ಮಲ್ಲಾಜಿಯು ವಿಸ್ಮಿತನಾಗಿ ಸುಮ್ಮನಿದ್ದನು.

ಮರುದಿನ ಯಾದವರಾಯನು ಮಲ್ಲಾಜಿಯನ್ನು ಕರೆದುಕೊಂಡು ಬರಲು ಜನರನ್ನು ಕಳುಹಿಸಿದನು. ಮಲ್ಲಾಜಿಯು ‹ ಯಾದವರಾಯನು ತನ್ನನ್ನು ಬೀಗನೆಂದು ಸಮ್ಮತಿಸದಿದ್ದರೆ ನಾನು ಬಾರೆನು.’ ಎಂದು ಪ್ರತ್ಯುತ್ತರವನ್ನು ಕಳುಹಿದನು. ಯಾದವರಾಯನು ಅದನ್ನು ಅಂಗೀಕರಿಸಲಿಲ್ಲ ; ಮಲ್ಲಾಜಿಯು ಅಲ್ಲಿಗೆ ಹೋಗಲೂ ಇಲ್ಲ.

ಯಾದವರಾಯನ ಭಾರ್ಯೆಗೆ ಗಂಡನಿಗಿಂತಲೂ ಅಧಿಕವಾದ ಜಾತ್ಯಭಿಮಾನ ವಿದ್ದಿತು. ತನ್ನ ಪತಿಯು ಸಾಹಜಿಗೆ ಮಗಳನ್ನು ಕೊಟ್ಟು ಮದುವೆ ಮಾಡುವನೆಂದು ತಿಳಿದು ಆತನಿಗೆ ಎರಡು ಮೂರು ಸಂಗತಿಗಳನ್ನು ತಿಳಿಸಿದಳೆಂದು ವಾಡಿಕೆ. ಮಲ್ಲಾಜಿಯು ಕೋಪದಿಂದ ಒಂದು ಗ್ರಾಮಕ್ಕೆ ಹೋಗಿ ಭವಾನೀದೇವಿಯನ್ನು ಪೂಜಿಸಿ ತನಗೆ ಹೆಚ್ಚಾಗಿ ದ್ರವ್ಯವನ್ನು ಕೊಡಬೇಕೆಂದು ಅಪೇಕ್ಷಿಸಿದನು. ಭವಾನಿಯು ಒಲಿದು 'ಮಲ್ಲಾಜಿ ! ನಿನ್ನ ವಂಶದಲ್ಲಿ ಒಬ್ಬನು ರಾಜನಾಗಿ ಮಹಾರಾಷ್ಟ್ರ ದೇಶವನ್ನು ಉತ್ತಮರೀತಿಯಿಂದ ಆಳುವನು ಹಿಂದೂಧರ್ಮ ವಿರೋಧಿಗಳನ್ನು ಕಡಿಮೆ ಮಾಡುವನು. ಇಪ್ಪತ್ತೇಳುವರ್ಷ ರಾಜ್ಯವಾಳುವನು. ಅವನ ರಾಜ್ಯದಲ್ಲಿ ಶಕೆಯೊಂದು ಹೊಸದಾಗಿ ಪ್ರಾರಂಭವಾಗುವುದು' ಎಂದು ವರವಿತ್ತುದಾಗಿ ಪ್ರವಾದವುಂಟು. ಅದು ಹೇಗಾದರೂ ಇರಲಿ, ಮಲ್ಲಾಜಿಗೆ ಆಗ ವಿಶೇಷವಾಗಿ ದ್ರವ್ಯಸಿಕ್ಕಿದ ಮಾತು ನಿಸ್ಸಂಶಯವು. ಅದರಿಂದ ಮಲ್ಲಾಜಿಯು ದೊಡ್ಡವನಾಗಲು ಪ್ರಯತ್ನಿಸಿದನು ಆ ಪ್ರಯತ್ನದಲ್ಲಿ ಅವನ ಭಾವಮೈದುನ ಯೋಗಪಾಲನು ತುಂಬಾ ಸಹಾಯಮಾಡಿದನು. ಜಾಗ್ರತೆಯಾಗಿಯೇ ಮಲ್ಲಾಜಿಯು ಅಹಮುದ್‌ನಗರದ ಸುಲ್ತಾನನ ಬಳಿ ಐದುಸಾವಿರ ಅಶ್ವಸೈನಿಕರಿಗೆ ಅಧಿಪತಿಯಾದನು. ಆತನಿಗೆ ರಾಜನಿಂದ ಸುವರ್ಣದುರ್ಗ, ಚಾಕಣದುರ್ಗಗಳೂ ಅದರ ಸುತ್ತಮುತ್ತಲು ಇರುವ ಪ್ರದೇಶಗಳೂ ಕೊಡಲ್ಪಟ್ಟವು. ಪೂನಾ ಸೋಪಾನಗಡ ಇವೆರಡೂ ಜಹಗೀರಾಗಿ ಲಭಿಸಿದುವು. ಆಗ ಯಾದವರಾಯನು ಬದಲು ಮಾತನಾಡಲಿಕ್ಕೆ ಅವಕಾಶವಿಲ್ಲದಿದ್ದಿತು. ೧೬೦೪ರಲ್ಲಿ ಜೀಜೀಬಾಯಿಗೂ ಸಾಹಜಿಗೂ ಮದುವೆಯಾಯಿತು. ಸುಲ್ತಾನನು ಮದುವೆಗೆ ಬಂದಿದ್ದನು. ಆಗ ಸಾಹಜಿಗೆ ಹತ್ತು ವರ್ಷ ವಯಸ್ಸು. ಕಾಲಕ್ರಮದಲ್ಲಿ ಮಲ್ಲಾಜಿಯು ಮೃತನಾದ ತರುವಾಯ ಸಾಹಜಿಗೆ ತಂದೆಯ ಜಹಗೀರೂ ಬಿರುದೂ ಮರಳಿ ಬಂದುವು.

ಸಾಹಜಿಯು ಪರಾಕ್ರಮಶಾಲಿ, ಜಹಾಂಗೀರ್ ಬಾದಶಹನ ಕಾಲದಲ್ಲಿ ೧೬೨೦ ರಲ್ಲಿ ಆತನು ಅಹಮುದ್‌ನಗರದ ಪ್ರಧಾನ ಸೇನಾಪತಿಯಾದ ಮಲ್ಲಿಕ್ ಅಂಬರ್ ಎಂಬವನೊಡನೆ ಒಂದು ಮಹಾಯುದ್ಧದಲ್ಲಿ ತನ್ನ ಸಾಹಸಪರಾಕ್ರಮಗಳನ್ನು ಪ್ರಕಾಶಗೊಳಿಸಿ ಎಲ್ಲರಿಂದಲೂ ಸನ್ಮಾನಿಸಲ್ಪಟ್ಟನು. ಷಹಜಹಾನು ಬಾದಶಹನಾದ ಬಳಿಕ ಸಾಹಜಿಯನ್ನು ಐದುಸಾವಿರ ಸೈನಿಕರಿಗೆ ಅಧಿಪತಿಯನ್ನಾಗಿ ಮಾಡಿ ಅನೇಕ

ಜಹಗೀರುಗಳನ್ನು ಕೊಟ್ಟನು. ಪ್ರಭುಗಳ ಅನುಗ್ರಹವು ಅಸ್ಥಿರವಾದುದಷ್ಟೆ ? ಮೂರು ವರ್ಷಗಳು ಕಳೆದ ತರುವಾಯ ಬಾದಶಹನು ಷಾಹಜಿಯ ಕೆಲವು ಜಹಗೀರುಗಳನ್ನು ಹಿಂದಕ್ಕೆ ತೆಗೆದುಕೊಂಡನು. ಷಾಹಜಿಯು ವಿರಕ್ತಿಹೊಂದಿದವನಾಗಿ ಬಿಜಾಪುರದ ಸುಲ್ತಾನನ ಪಕ್ಷವನ್ನು ವಹಿಸಿ ತಾನು ಸಾಯುವವರೆಗೂ ಆ ಕಾರ್ಯವನ್ನು ನಿರ್ವಹಿಸುತ್ತಿದ್ದನು.

ಶತ್ರುಗಳ ಕೈಗೆ ಸಿಕ್ಕಿದ್ದ ಅಹಮ್ಮದ್‌ನಗರವನ್ನು ಸ್ವಾಧೀನಪಡಿಸಿಕೊಳ್ಳಲು ಷಾಹಜಿಯು ಚಕ್ರವರ್ತಿಯ ಸೈನ್ಯದೊಡನೆ ಅನೇಕ ಸಾರಿ ಯುದ್ಧವನ್ನು ಮಾಡಿದನು. ಸುಲ್ತಾನನು ಶತ್ರುಗಳಿಂದ ಸಾಯಲು ಅವನ ವಂಶದವನೊಬ್ಬನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ವಿಧ್ವಾಂಸರಾದ ಕೆಲವರು ಬ್ರಾಹ್ಮಣರ ಸಹಾಯದಿಂದ ದೇಶವನ್ನು ಚೆನ್ನಾಗಿ ಪರಿಪಾಲಿಸುವ ಪದ್ಧತಿಯನ್ನು ಏರ್ಪಡಿಸಿದನು. ಅನೇಕ ದುರ್ಗಗಳನ್ನು ವಶಪಡಿಸಿಕೊಂಡು ಹೊಸಸುಲ್ತಾನನ ಹೆಸರಿನಿಂದ ಸೈನ್ಯವನ್ನು ಕೂಡಿಸುತ್ತ ಬಂದನು. ಈ ಸಮಾಚಾರವನ್ನು ಕೇಳಿ ಷಹಜಹಾನನು ತುಂಬ ಕೋಪಿಷ್ಟನಾಗಿ ಷಾಹಜಿಯನ್ನೂ ಆತನ ಹೊಸ ರಾಜನನ್ನೂ ಶಿಕ್ಷಿಸಲು, ದೊಡ್ಡ ಸೈನ್ಯವನ್ನು ಕಳುಹಿದನು. ಚಕ್ರವರ್ತಿಯ ಸೈನ್ಯದೊಡನೆ ಯುದ್ಧಮಾಡುವುದಕ್ಕೆ ಷಾಹಜಿಗಾಗಲಿ, ಸುಲ್ತಾನನಿಗಾಗಲಿ ಸಾಧ್ಯವಿರಲಿಲ್ಲ. ಆದರೂ ಹೇಗೋ ಒಂದು ವರ್ಷದವರೆಗೂ ಯುದ್ಧವು ನಡೆಯಿತು. ತರುವಾಯ ಕರಾರು ನಡೆಯಿತು. ಅದರೊಡನೆ ೧೬೩೭ರಲ್ಲಿ ಅಹಮ್ಮದ್ ನಗರವು ಹಾಳಾಯಿತು.

ತನ್ನ ಪ್ರಭುವಿನ ಅಪ್ಪಣೆ ಪ್ರಕಾರ ಕರ್ಣಾಟಕ ದೇಶದಲ್ಲಿ ಷಾಹಜಿಯು ಅನೇಕ ಭಾಗಗಳನ್ನು ಜಯಿಸಿದನು. ಅದುದರಿಂದ ಆತನಿಗೆ ಉತ್ತರದಕ್ಷಿಣ ಕರ್ಣಾಟಕ ರಾಜ್ಯಗಳಲ್ಲಿ ಕೆಲವು ಜಹಗೀರಾಗಿ ಕೊಡಲ್ಪಟ್ಟವು.

ಜೀಜೀಬಾಯಿಯ ಗರ್ಭದಲ್ಲಿ ಶಂಭುಜೀ ಶಿವಾಜೀ ಎಂಬ ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಜೀಜೀಬಾಯಿಯ ತಂದೆಯಾದ ಯಾದವರಾಯನು ದೇವಗಡದ ಪುರಾತನ ಹಿಂದೂರಾಜರ ವಂಶಕ್ಕೆ ಸೇರಿದವನೆಂಬ ಹೇಳಿಕೆಯುಂಟೆಂದು ಹಿಂದೆಯೇ ತಿಳಿಸಿರುವೆವು. ಇದು ನಿಶ್ಚಯವಾದರೆ ಶಿವಾಜಿಯು ಕ್ಷತ್ರಿಯನೆಂಬುದಕ್ಕೆ ಯಾವ ಸಂದೇಹವೂ ಇಲ್ಲ. ಷಾಹಜಿಯು ೧೬೦೩ರಲ್ಲಿ ತುಕಾಬಾಯಿಯೆಂಬ ಯುವತಿಯನ್ನು ಮದುವೆಯಾದನು. ಅದರಿಂದ ಅಭಿಮಾನವತಿಯಾದ ಜೀಜೀಬಾ

ಯಿಯು ಕುಪಿತೆಯಾಗಿ ಪತಿಯ ಸಹವಾಸವನ್ನು ಬಿಟ್ಟು ಶಿವಾಜಿಯನ್ನು ಕರೆದುಕೊಂಡು ಕರ್ಣಾಟಕ ದೇಶದಲ್ಲಿ ವಾಸಮಾಡತೊಡಗಿದಳು. ಆಗ ವೆಂಕಾಜಿಯೆಂಬ ಮಗನು ಹುಟ್ಟಿದನು. ಶಾಹಜಿಗೆ ವಿಶ್ವಾಸಪಾತ್ರರಾದ ಇಬ್ಬರು ಬ್ರಾಹ್ಮಣರು ಮಂತ್ರಿಗಳಾಗಿದ್ದರು. ಅವರಲ್ಲಿ ದಾದಾಜೀ ಕೊಣದೇವನು ಪೂನಾ ಜಹಗೀರನ್ನೂ ಶಿವಾಜಿಯನ್ನೂ ನೋಡಿಕೊಳ್ಳುತ್ತಿದ್ದನು.

ಶಿವಾಜಿಯು ೧೬೨೭ರಲ್ಲಿ ಪೂನಾನಗರಕ್ಕೆ ಉತ್ತರದಲ್ಲಿ ಸುಮಾರು ಇಪ್ಪತ್ತು ಹರದಾರಿ ದೂರದಲ್ಲಿರುವ ಸುವರ್ಣಗಡ (ಸವಣೂರು) ದುರ್ಗದಲ್ಲಿ ಹುಟ್ಟಿದನು. ಅವನು ಹುಟ್ಟಿದ ಮೂರನೆ ವರ್ಷದಲ್ಲಿ ಅವನ ತಂದೆ ತುಕಾಬಾಯಿಯನ್ನು ಮದುವೆಯಾದನು. ಆದುದರಿಂದಲು ಜೀಜೀಬಾಯಿ ಮಗನೊಡನೆ ದಾದಾಜೀಕೊಣದೇವನ ಸಂರಕ್ಷಣೆಯಲ್ಲಿ ಪೂನಾನಗರದಲ್ಲಿ ವಾಸಮಾಡತೊಡಗಿದಳು. ಶಿವಾಜಿಯು ತನ್ನ ಬಾಲ್ಯದಿಂದಲೂ ಬಾಣಗಳನ್ನು ಬಿಡುವುದರಲ್ಲಿಯೂ ಬಿಲ್ಲು ಕತ್ತಿ ಮೊದಲಾದ ನಾನಾ ಬಗೆಯ ಆಯುಧಗಳನ್ನು ಉಪಯೋಗಿಸುವುದರಲ್ಲಿಯೂ ನಿಪುಣನಾದನು. ಮಹಾರಾಷ್ಟ್ರರು ಕುದುರೆ ಸವಾರಿ ಮಾಡುವುದರಲ್ಲಿ ನಿಪುಣರು. ಅವರಲ್ಲಿ ಶಿವಾಜಿಯು ಮತ್ತೂ ಬುದ್ಧಿವಂತನು ಆ ವ್ಯಾಯಾಮದಿಂದ ಅವನ ಶರೀರವು ವಜ್ರಸದೃಶವಾಗಿದ್ದಿತು.

ಶಿವಾಜಿಯು ಈ ಧನುರ್ವಿದ್ಯೆಯಲ್ಲಿಯೇ ಕಾಲವನ್ನು ಕಳೆಯದೆ ತನ್ನ ಗುರುವಾದ ದಾದಾಜೀ ಕೊಣದೇವನ ಬಳಿಯಲ್ಲಿ ರಾಮಾಯಣ ಮಹಾಭಾರತಾದಿಗಳಲ್ಲಿ ಹೇಳಿರುವ ವೀರಪುರುಷರ ಚರಿತ್ರೆಗಳನ್ನು ಕೇಳುತ್ತಿದ್ದನು. ಆ ಕಥೆಗಳನ್ನು ಕೇಳುತಿದ್ದ ಹಾಗೆಲ್ಲ ಆತನ ಮನಸ್ಸಿನಲ್ಲಿ ಸಾಹಸವು ಹೆಚ್ಚುತ್ತಿದ್ದಿತು. ಕಥೆಯೆಂದರೆ ಆತನಿಗೆ ತುಂಬ ಪ್ರೀತಿ, ಆತನು ರಾಜ್ಯವನ್ನು ಸಂಪಾದಿಸುವ ಪ್ರಯತ್ನವನ್ನು ಕೈಕೊಳ್ಳುವವರೆಗೂ ಎಲ್ಲಿಯಾದರೂ ಕಥೆಯನ್ನು ಓದುವರೆಂಬ ವರ್ತಮಾನವು ತಿಳಿದರೆ ಒಡನೆ, ಎಷ್ಟು ಕಷ್ಟಪಟ್ಟಾದರೂ ಅಲ್ಲಿಗೆ ಹೋಗುತ್ತಿದ್ದನು.

ಹೀಗೆ ದಾದಾಜಿಯ ಶಿಕ್ಷಣೆ ಸಂರಕ್ಷಣೆಗಳಲ್ಲಿದ್ದ ಶಿವಾಜಿಯು ಜಾಗ್ರತೆಯಾಗಿ ಹಿಂದೂ ಧರ್ಮಾನುರಕ್ತನಾಗಿ ಮುಸಲ್ಮಾನರಲ್ಲಿ ದ್ವೇಷಿಯಾದನು. ಮಹಾಪುರುಷರ ಚರಿತ್ರೆಗಳನ್ನು ಕೇಳುವುದರಿಂದ ಅವರಂತೆ ತಾನೂ ಕೂಡ ದೊಡ್ಡವನಾಗಬೇಕೆಂಬ ಕೋರಿಕೆಯು ಅವನ ಹೃದಯದಲ್ಲಿ ನಾಟಿಕೊಂಡಿತು. ಹದಿನಾರನೆಯ ವರ್ಷದಲ್ಲಿ

ತಾನು ಸ್ವತಂತ್ರನಾದ ರಾಜನಾಗಬೇಕೆಂದು ಯೋಚಿಸಿದನು. ಹಾಗೆಯೇ ಯೋಚಿಸಿ ಉತ್ಸಹಶಾಲಿಗಳಾದ ಕೆಲವರು ಹುಡುಗರೊಂದಿಗೆ ಸೇರಿ, ಕೊಂಕಣದೇಶನಿವಾಸಿಗಳೊಡನೆ ಸ್ನೇಹಮಾಡತೊಡಗಿದನು. ಆ ಪರ್ವತವನ್ನು ಹತ್ತುವುದು ಹೇಗೆ? ದಾರಿಯೆಲ್ಲಿರುವದು ? ಯಾವಮಾರ್ಗದಲ್ಲಿ, ಯಾವದುರ್ಗಕ್ಕೆ ಹೋಗಬಹುದು. ಯಾವಯಾವದುರ್ಗಗಳು ಕಷ್ಟಸಾಧ್ಯ? ಯಾವದುರ್ಗವನ್ನು ಮುತ್ತುವುದಕ್ಕೆ ಹೇಗೆ ಪ್ರಯತ್ನಿಸಬೇಕು ? ಎಂಬ ವಿಚಾರಗಳಿಂದಲೇ ಕಾಲವನ್ನು ಕಳೆಯುತ್ತ ಬಂದನು. ಅಗಾಗ್ಗೆ ಆತನು ರಾತ್ರಿಯಲ್ಲಿ ಕೂಡ ಬೆಟ್ಟದಮೇಲೆಯೋ, ಕೊನೆಯಲ್ಲಿಯೋ, ಕೆಳಗೋ, ಅರಣ್ಯದಲ್ಲಿಯೋ ತಿರುಗಾಡುತ್ತ ಕಾಲಕಳೆಯುತ್ತಿದ್ದನು. ಹೀಗೆ ಕೆಲವು ಕಾಲ ಕಳೆದ ತರುವಾಯ ಆತನಿಗೆ ತಿಳಿಯದ ದುರ್ಗವಾಗಲಿ, ಮಾರ್ಗವಾಗಲಿ ಮತ್ತಾವುದೂ ಆ ದೇಶದಲ್ಲಿಲ್ಲದೆ ಹೋಯಿತು, ಕೊನೆಗೆ ಶಿವಾಜಿಯು ಒಂದೆರಡು ದುರ್ಗಗಳನ್ನು ವಶಪಡಿಸಿಕೊಳ್ಳುವ ವಿಚಾರದಲ್ಲಿ ಮಗ್ನನಾದನು.

ಶಿವಾಜಿಯ ಮಾತುಗಳನ್ನು ಕೇಳಿಯೂ ಆತನ ಕಾರ್ಯಗಳನ್ನು ನೋಡಿಯೂ ದಾದಾಜಿಯು ಭಯಪಟ್ಟನು. ಸವಿಮಾತುಗಳಿಂದ ಆತನ ಮನೋಭಾವವನ್ನು ಬದಲಾಯಿಸಲು ಪ್ರಯಾಸಪಟ್ಟನು. ಇದ್ದ ಜಹಗೀರನ್ನು ಸುರಕ್ಷಿತವಾಗಿ ಕಾಪಾಡಿಕೊಂಡರೆ ಸಾಕೆಂದು ಎಷ್ಟೋಬಗೆಯಾಗಿ ಬೋಧಿಸಿದನು. ಕ್ಷಾತ್ರ ತೇಜಸ್ಸಿನಿಂದ ಉದ್ದೀಪ್ತವಾದ ಆತನ ದೃಢಮನೋಭಾವವು ಎಳ್ಳಷ್ಟಾದರೂ ಬದಲಾಯಿಸಲಿಲ್ಲ. ಕಷ್ಟವನ್ನು ಸಹಿಸುವವರಾಗಿಯೂ ವಿಶ್ವಾಸಪಾತ್ರರಾಗಿಯೂ ಇರುವ ಮಾವಳರನ್ನು ಶಿವಾಜಿಯು ಹೆಚ್ಚಾಗಿ ಪ್ರೀತಿಸುತ್ತಿದ್ದನು. ಆತನ ಬಾಲ್ಯ ಸ್ನೇಹಿತರಲ್ಲಿ ಅಶಾಜೀಕಂಕು, ತಾನಾಜೀ ಮಾಲಸೂರೇ, ಬಾಜೀ ಫಸಳೇಕರ್ ಎಂಬ ಮಾವಳರು ಮೂವರು ಅಗ್ರಗಣ್ಯರು. ಕೊನೆಗೆ ಇವರ ಸಹಾಯದಿಂದಲೇ ೧೬೪೬ರಲ್ಲಿ ತೋರಣದುರ್ಗದ ಖಿಲ್ಲೇದಾರನನ್ನು ಹೇಗೋ ವಶಪಡಿಸಿಕೊಂಡು ಆ ದುರ್ಗವನ್ನು ಸ್ವಾಧೀನಪಡಿಸಿಕೊಂಡನು. ಈ ಕಥಾಪ್ರಾರಂಭದಲ್ಲಿಯೇ ತೋರಣದುರ್ಗವನ್ನು ವರ್ಣಿಸಿರುವುದು. ಪ್ರಥಮವಿಜಯದಲ್ಲಿ ಶಿವಾಜಿಗೆ ಹತ್ತೊಂಭತ್ತು ವರ್ಷವಾಗಿದ್ದಿತು. ಮರುವರ್ಷ ಆತನು ತೋರಣದುರ್ಗಕ್ಕೆ ಮೂರು ಮೈಲಿ ದೂರದಲ್ಲಿರುವ ಒಂದು ಉನ್ನತವಾದ ಪರ್ವತ ಶಿಖರದಮೇಲೆ ಹೊಸದುರ್ಗವೊಂದನ್ನು ಕಟ್ಟಿಸಿ, ಅದಕ್ಕೆ ರಾಜಗಡವೆಂದು ಹೆಸರಿಟ್ಟನು.

ಬಿಜಾಪುರದ ಸುಲ್ತಾನನು ಈ ವಾರ್ತೆಯನ್ನು ಕೇಳಿ ಸಾಹಜಿಯನ್ನು ಕರೆಯಿಸಿ ಇದಕ್ಕೆ ಕಾರಣವೇನೆಂದು ಕೇಳಿದನು. ಸುಲ್ತಾನನ ನಂಬಿಗೆಗೆ ಪಾತ್ರನಾಗಿದ್ದ ಸಾಹಜಿಗೆ ಆ ಸಂಗತಿ ಎಷ್ಟುಮಾತ್ರವೂ ತಿಳಿಯದು. ಆದುದರಿಂದ ಆತನು ದಾದಾಜಿಯಲ್ಲಿ ಈ ವಿಚಾರವಾಗಿ ಪ್ರಸ್ತಾಪಿಸಿದನು. ದಾದಾಜಿಯು ವಿಚಾರವನ್ನು ತಿಳಿಸಿ, ಶಿವಾಜಿಗೆ ಬುದ್ಧಿಗಲಿಸುವುದಾಗಿ ಹೇಳಿದನು.

ದಾದಾಜಿಯು ಶಿವಾಜಿಯನ್ನು ಕರೆದು, "ನೀನು ಇಂಥ ಕೆಲಸಗಳನ್ನು ಮಾಡುವುದರಿಂದ ಸಂಪೂರ್ಣನಾಶಕ್ಕೆ ಕಾರಣವಾಗುವುದು ನಿನ್ನ ತಂದೆಯು ಸುಲ್ತಾನನ ಬಳಿಯಿದ್ದು ಜಹಗೀರನ್ನೂ ಕೀರ್ತಿಯನ್ನೂ ಗೌರವವನ್ನೂ ಸಂಪಾದಿಸಿದನು. ಹಾಗೆಯೇ ನೀನು ಕೂಡ ಮಾಡುವದು ಒಳ್ಳೆಯದು." ಎಂದು ಬೋಧಿಸಿದನು. ಸತ್ಯಸಂಕಲ್ಪನಾದ ಶಿವಾಜಿಯು ಪಿತೃಸಮಾನಸನ್ಮಾನ್ಯನಾಗಿದ್ದ ದಾದಾಜಿಗೆ ವಿನೀತಭಾವದಿಂದ ಸಮಯೋಚಿತವಾದ ಉತ್ತರವನ್ನಿತ್ತನೇ ಹೊರತು, ತನ್ನ ಸಂಕಲ್ಪವನ್ನಾಗಲೀ ಪ್ರಯತ್ನವನ್ನಾಗಲೀ ಬದಲಾಯಿಸಲಿಲ್ಲ. ಸ್ವಲ್ಪಕಾಲದೊಳಗಾಗಿಯೇ ದಾದಾಜಿಯು ಕಾಲಾಧೀನನಾದನು. ಅವನು ಸಾಯುವುದಕ್ಕೆ ಮೊದಲು ಶಿವಾಜಿಯನ್ನು ತನ್ನಬಳಿಗೆ ಕರೆಯಿಸಲು, ವೃದ್ಧನು ಅಂತ್ಯಕಾಲದಲ್ಲಿ ತನಗೆ ವಿರೋಧವಾಗಿ ಏನು ಹೇಳುವನೋ ಎಂಬ ಶಂಕೆ, ಶಿವಾಜಿಗೆ ಬಲವಾಗಿದ್ದಿತು. ಆದರೆ ಅವನು ಭಾವಿಸಿದಂತೆ ಆಗಲಿಲ್ಲ. ದಾದಾಜಿಯು ಅವ್ಯಾಜವಾದ ಪುತ್ರವಾತ್ಸಲ್ಯದಿಂದ ಶಿವಾಜಿಯನ್ನು ಆದರಿಸಿ, "ಮಗುವೆ! ನೀನು ಕೈಕೊಂಡಿರುವ ಈ ಪ್ರಯತ್ನವು ಸರ್ವೋತ್ತಮವಾದುದರಿಂದ ಈ ನಿನ್ನ ಮಾರ್ಗವನ್ನು ಬಿಡದೆ ಜಾಗ್ರತನಾಗಿ ಸಾಧಿಸು. ರಾಜ್ಯವನ್ನು ಅಭಿವೃದ್ಧಿಗೊಳಿಸು; ದೇಶದ ಸ್ವಾತಂತ್ರ್ಯವನ್ನು ರಕ್ಷಿಸು; ಗೋಬ್ರಾಹ್ಮಣರನ್ನೂ ರೈತರನ್ನೂ ಸಂರಕ್ಷಿಸು, ಧರ್ಮವಿರೋಧಿಗಳನ್ನು ದಂಡಿಸು. ಭವಾನೀದೇವಿಯು ನಿನಗೆ ತೋರಿಸಿದ ದಾರಿಯನ್ನು ಬಿಡಬೇಡ." ಎಂದು ಬೋಧಿಸಿದನು.

ದಾದಾಜಿಯ ಈ ಉಪದೇಶವು ಇಪ್ಪತ್ತುವರ್ಷದ ತರುಣನಾದ ಶಿವಾಜಿಗೆ ದ್ವಿಗುಣವಾದ ಉತ್ಸಾಹವನ್ನೂ ದೇಶಾಭಿಮಾನವನ್ನೂ ಉಂಟುಮಾಡಿತು. ಅವಕ್ಕನುಸಾರವಾಗಿಯೇ ಆತನು ಚಾಕಣ, ಕಾಂದಾನಾ ದುರ್ಗಗಳ ಖಿಲ್ಲೇದಾರರನ್ನು ಧನದಿಂದ ವಶಪಡಿಸಿಕೊಂಡು, ಈ ಎರಡು ದುರ್ಗಗಳನ್ನೂ ಸ್ವಾಧೀನದಲ್ಲಿರಿಸಿಕೊಂಡನು. ಅದರಲ್ಲಿ ಕಾಂದಾನಾ ದುರ್ಗಕ್ಕೆ ಸಿಂಹಗಡನೆಂಬ ಹೆಸರಿಟ್ಟನು. ಶಿವಾಜಿಯು ಬಲ

ತಾಯಿಯಾದ ತುಕಾಬಾಯಿಯ ಸೋದರನಾದ ಬಾಜಿಯು ಸೋಪಾನದುರ್ಗಕ್ಕೆ ಅಧಿಪತಿಯಾಗಿದ್ದನು. ಒಂದುದಿನ ನಡುರಾತ್ರಿಯಲ್ಲಿ ಶಿವಾಜಿಯು ಮಾವಳರನ್ನು ಹಿಂದೆ ಕರೆದುಕೊಂಡು ಸೋಪಾನದುರ್ಗವನ್ನು ಮುತ್ತಿ ಅದನ್ನೂ ವಶಪಡಿಸಿಕೊಂಡನು; ಸೋದರಮಾವನನ್ನು ತೊಂದರೆಪಡಿಸದೆ ಕರ್ಣಾಟಕದೇಶದಲ್ಲಿದ್ದ ತನ್ನ ತಂದೆಯ ಬಳಿಗೆ ಕಳುಹಿದನು. ಪುರಂಧರವೆಂಬ ದುರ್ಗದ ದೊರೆಯು ಮೃತನಾಗಲು, ಅವನ ಮಕ್ಕಳು ಸಿಂಹಾಸನಕ್ಕಾಗಿ ವ್ಯಾಜ್ಯಮಾಡತೊಡಗಿದರು. ಚಿಕ್ಕಮಕ್ಕಳಿಗೆ ಸಹಾಯಮಾಡುವ ನೆವದಿಂದ ಶಿವಾಜಿಯು ಅಲ್ಲಿಗೆ ಹೋಗಿ ತಾನೇ ಆ ದುರ್ಗವನ್ನು ಸ್ವಾಧೀನಮಾಡಿಕೊಂಡನು. ಆ ಮೂವರು ಅಣ್ಣತಮ್ಮಂದಿರೂ ಶಿವಾಜಿಯನ್ನು ನಿಂದಿಸಿದರು. ಶಿವಾಜಿಯು ಕೋಪಗೊಳ್ಳದೆ ನಯವಾಕ್ಯಗಳಿಂದ ತನ್ನ ಉದ್ದೇಶವನ್ನು ಅವರಿಗೆ ತಿಳಿಸಿ, ತನಗೆ ಸಹಾಯಮಾಡಬೇಕೆಂದು ಕೇಳಿಕೊಂಡನು. ಅವರು ಕೋಪವನ್ನು ಬಿಟ್ಟು, ಶಿವಾಜಿಯ ಪ್ರಯತ್ನಕ್ಕೆ ಸಹಾಯಕರಾಗಿ ಆತನ ಬಳಿಯಲ್ಲಿಯೇ ಇದ್ದರು.

ಈ ಪ್ರಕಾರ ಶಿವಾಜಿಯು ಒಂದೊಂದಾಗಿ ದುರ್ಗಗಳನ್ನು ಸ್ವಾಧೀನಪಡಿಸಿಕೊಳ್ಳುತ್ತ ಬಂದನು. ೧೬೪೮ ರಲ್ಲಿ ಆತನ ಸೇನಾನಾಯಕನಾದ ಅಬಾಜೀಸೋನದೇವನೆಂಬವನು ಕಲ್ಯಾಣದುರ್ಗವನ್ನೂ ಅದರ ಸುತ್ತಲೂ ಇರುವ ಪ್ರದೇಶವನ್ನೂ ಜಯಿಸಿದನು. ಆಗ ಬಿಜಾಪುರದ ಸುಲ್ತಾನನು ಕೋಪಗೊಂಡು ಷಾಹಜಿಯನ್ನು ಸೆರೆಯಲ್ಲಿಡಿಸಿದನು. ನಿಯಮಿತಕಾಲದೊಳಗೆ ಶಿವಾಜಿಯು ತನಗೆ ವಶವಾಗದಿದ್ದರೆ ಆ ಸೆರೆಮನೆಯ ಬಾಗಿಲನ್ನು ಕಲ್ಲಿನಿಂದ ಮುಚ್ಚಿಸಿಬಿಡುವೆನೆಂದು ಪ್ರಕಟಿಸಿದನು. ಆ ವೇಳೆಯಲ್ಲಿ ಶಿವಾಜಿಯು ದೆಹಲಿಯ ಬಾದಶಹನನ್ನು ಬೇಡಿಕೊಂಡು ತನ್ನ ತಂದೆಯನ್ನು ಬಿಡಿಸಿದನು. ಆದರೂ ಸೆರೆಮನೆಯಿಂದ ಹೊರಗೆ ಬರುವುದಕ್ಕೆ ನಾಲ್ಕು ವರ್ಷಗಳಾದುವು.

ಮುಸಲ್ಮಾನರ ಸ್ನೇಹವನ್ನು ಬಿಟ್ಟು ತನ್ನ ಕಡೆ ಸೇರಬೇಕೆಂದು ಜಾವಳೀರಾಜನಾದ ಚಂದ್ರರಾಯನಿಗೆ ಶಿವಾಜಿಯು ಎಷ್ಟೋ ವಿಧದಿಂದ ಹೇಳಿದನು. ಆದರೆ ಅವನು ಅದಕ್ಕೆ ಆಗಲಾರದೆಂದು ಖಂಡಿತವಾಗಿ ಹೇಳಿದುದರಿಂದ ಅವನನ್ನೂ ಅವನ ತಮ್ಮನನ್ನೂ ಶಿವಾಜಿಯು ತನ್ನ ಕಡೆಯವರಿಂದ ಕೊಲ್ಲಿಸಿ ರಾತ್ರಿ ವೇಳೆಯಲ್ಲಿ ಆ ದುರ್ಗವನ್ನು ಸ್ವಾಧೀನಪಡಿಸಿಕೊಂಡನು. ಆ ಸಂವತ್ಸರದಲ್ಲಿ ಪ್ರತಾಪಗಡವೆಂಬ ಹೊಸ ದುರ್ಗವನ್ನು ಕಟ್ಟಿಸಿದನು. ತರುವಾಯ ಎರಡು ವರ್ಷಗಳ ಮೇಲೆ ಮುರೇಶ್ವರ,

ಪಿಂಗಳೆ, ಎಂಬಿವರನ್ನು ಪೇಷ್ವೆಗಳನ್ನಾಗಿ ನಿಯಮಿಸಿ ಕೊಂಕಣದೇಶವನ್ನು ಸಂಪೂರ್ಣವಾಗಿ ಜಯಿಸುವುದಕ್ಕೆ ಸೈನ್ಯವನ್ನು ಸೇರಿಸಿದನು. —ಅಷ್ಟರಲ್ಲಿ ಬಿಜಾಪುರದ ಸುಲ್ತಾನನು ಶಿವಾಜಿಯನ್ನು ಕೊಲ್ಲಿಸಬೇಕೆಂದು ಎಣಿಸಿ, ೧೬೫೯ ರಲ್ಲಿ ಅಫ್‌ಜುಲ್‌ಖಾನನೆಂಬ ಪ್ರಸಿದ್ಧ ಸೇನಾಪತಿಯನ್ನು ೫೦೦೦ ಕುದುರೆಗಳು ೭೦೦೦ ಪದಾತಿಗಳೊಡನೆ ಕಳುಹಿದನು. ಅಫ್‌ಜುಲ್‌ಖಾನನು ಕೋಪದಿಂದ "ಬೆಟ್ಟಗಳಲ್ಲಿ ಗರ್ವದಿಂದ ತಿರುಗುತ್ತಿರುವ ಶಿವಾಜಿಯನ್ನು ಸರಪಣಿಗಳಿಂದ ಕಟ್ಟಿಸಿ ಸುಲ್ತಾನರ ಪಾದಗಳ ಬಳಿ ನಿಲ್ಲಿಸುವೆನು." ಎಂದು ಪ್ರತಿಜ್ಞೆ ಮಾಡಿಕೊಂಡನು. ಇಷ್ಟು ಸೈನ್ಯದೊಡನೆ ಯುದ್ಧ ಮಾಡಿದರೆ ತುಂಬ ತೊಂದರೆಯಾಗುವುದೆಂದು ಯೋಚಿಸಿ, ಶಿವಾಜಿಯು ಸಂಧಿಮಾಡಿಕೊಳ್ಳಲು ಅಪೇಕ್ಷಿಸಿದನು. ಖಾನನು ಗೋಪೀನಾಥನೆಂಬ ಬ್ರಾಹ್ಮಣನನ್ನು ಶಿವಾಜಿಯ ಬಳಿಗೆ ಕಳುಹಿದನು. ಶಿವಾಜಿಯು ಪ್ರತಾಪಗಡ ದುರ್ಗದಬಳಿ, ಸಭಾಮಂದಿರದಲ್ಲಿ ದೂತನಿಗೆ ದರ್ಶನವಿತ್ತು, ನಾನಾವಿಷಯಗಳನ್ನು ಕುರಿತು ಪ್ರಸಂಗಿಸುತ್ತಿದ್ದನು. ರಾತ್ರಿಯಲ್ಲಿ ವಿಶ್ರಮಿಸಿಕೊಳ್ಳಲು ಒಂದು ಪ್ರದೇಶವು ಏರ್ಪಡಿಸಲ್ಪಟ್ಟಿತು. ರಾತ್ರಿಯಲ್ಲಿ ಶಿವಾಜಿಯು ಗೋಪೀನಾಥನಿಗೆ ದರ್ಶನವಿತ್ತನು. ಮಹಾರಾಷ್ಟ್ರ ಪ್ರಭುವು ತನ್ನ ಅಸಾಧಾರಣ ವಾಕ್‌ಪ್ರೌಢಿಮೆಯಿಂದ ಗೋಪೀನಾಥನೊಡನೆ "ದೇವಾ! ನೀವು ಬ್ರಾಹ್ಮಣರು, ನನಗಿಂತಲೂ ಶ್ರೇಷ್ಠರು. ಆದರೂ ನನ್ನ ಮಾತನ್ನು ಲಾಲಿಸಬೇಕು. ಹಿಂದೂಧರ್ಮವನ್ನು ನಿಲ್ಲಿಸುವದಕ್ಕಾಗಿ ನಾನು ಕೆಲಸಮಾಡುತ್ತಿರುವೆನು. ಬ್ರಾಹ್ಮಣರನ್ನೂ ಗೋವುಗಳನ್ನೂ ಕಾಪಾಡುವಂತೆ ಭವಾನೀಮಾತೆಯು ನನಗೆ ಅಪ್ಪಣೆ ಮಾಡಿರುವಳು; ಮತ್ತು ಹಿಂದೂಧರ್ಮವಿರೋಧಿಗಳನ್ನು ಜಯಿಸಬೇಕೆಂದೂ ಆಜ್ಞಾಮಾಡಿರುವಳು. ಬ್ರಾಹ್ಮಣರು ತಾವು ದೇವಿಯ ಉದ್ದೇಶವನ್ನು ನೆರವೇರಿಸಿ ಸ್ವಮತದವರೊಡನೆ ಸೇರಿ, ನನ್ನ ರಾಜ್ಯದಲ್ಲಿ ಸುಖವಾಗಿ ವಾಸಮಾಡಿರಿ." ಎಂದು ಬೋಧಿಸಿದನು. ಈ ಉಪದೇಶದಿಂದ ಗೋಪೀನಾಥನು ಸಂತೋಷಪಟ್ಟು ಶಿವಾಜಿಗೆ ಸಹಾಯಮಾಡುವುದಾಗಿ ಒಪ್ಪಿಕೊಂಡನು. ಕಾರ್ಯಸಿದ್ಧಿಗೋಸ್ಕರ ಶಿವಾಜಿಯು ಅಫ್‌ಜುಲ್‌ಖಾನನೊಡನೆ ಸೇರಿ ಮಾತನಾಡುವದೇ ಮುಖ್ಯವೆಂದು ನಿಶ್ಚಯಿಸಿದನು.

ನಿಶ್ಚಯಿಸಿದಂತೆಯೇ ಪ್ರತಾಪಗಡ ದುರ್ಗದಬಳಿ, ಅವರಿಬ್ಬರೂ ಸೇರಿದರು. ಮುಸಲ್ಮಾನರ ಸೈನ್ಯವು ಸಮೀಪದಲ್ಲಿಯೇ ಬೀಡುಬೇರೆಯಾಗಿದ್ದಿತು. ಒಬ್ಬ ಸೇವಕ

ನೊಡನೆ ಖಾನನು ಪಾಲ್ಕಿಯಲ್ಲಿ ಕುಳಿತು ಗೊತ್ತಾಗಿದ್ದ ಸ್ಥಳಕ್ಕೆ ಬಂದನು. ಆ ದಿನ ಬೆಳಿಗ್ಗೆ ಶಿವಾಜಿಯು ಬಹು ನಿಷ್ಠೆಯಿಂದ ದೇವಿಯನ್ನು ಪೂಜಿಸಿ, ತಾಯಿಗೆ ನಮಸ್ಕರಿಸಿ ಅವಳ ಆಶೀರ್ವಾದವನ್ನು ಪಡೆದು, ಸಮಯೋಚಿತವಾದ ಉಡುಪನ್ನು ಧರಿಸಿ, ವ್ಯಾಘ್ರನಖವನ್ನು ತೋಳಿಗೆ ಸೇರಿಸಿಕೊಂಡು, ತನ್ನ ಪ್ರಾಣಾಪ್ತನಾದ ತಾನಾಜಿ ಮಾಲಾಸೂರೇನನ್ನು ಜೊತೆಗೊಂಡು, ಅಫ್‌ಜಲ್‌ಖಾನನ ಬಳಿಗೆ ಬಂದನು. ಗೌರವಾರ್ಥವಾಗಿ ಪರಸ್ಪರ ಆಲಿಂಗನಮಾಡಲು ಇಬ್ಬರೂ ಸಮೀಪಿಸಿದರು. ಶಿವಾಜಿಯು ಆಲಿಂಗನೆಯ ನೆವದಲ್ಲಿ ತನ್ನ ಕಠಾರಿಯಿಂದ ಅವನ ಎದೆಯನ್ನು ಇರಿದು ಆ ಮುಸಲ್ಮಾನನನ್ನು ನೆಲದಮೇಲೆ ಉರುಳಿಸಿದನು. ತಕ್ಷಣವೇ ಮಹಾರಾಷ್ಟ್ರರ ಸೈನ್ಯವು ಮುಸಲ್ಮಾನರ ಸೈನ್ಯದಮೇಲೆ ಬಿದ್ದು ಅವರನ್ನು ನಾಶಪಡಿಸಿತು. ಶಿವಾಜಿಯು ಆ ಸಂದರ್ಭದಲ್ಲಿ ಮತ್ತೆ ಕೆಲವು ದುರ್ಗಗಳನ್ನು ವಶಪಡಿಸಿಕೊಂಡು ಬಿಜಾಪುರದವರೆಗೂ ದೇಶವನ್ನು ಆಕ್ರಮಿಸಿದನು.

ಬಿಜಾಪುರದವರೊಡನೆ ಯುದ್ಧವು ಮೂರು ವರ್ಷಗಳವರೆಗೆ ನಡೆಯುತ್ತಿದ್ದರೂ ಯಾವಕಡೆಯವರಿಗೂ ವಿಶೇಷಲಾಭವುಂಟಾಗಲಿಲ್ಲ. ಕಡೆಗೆ ೧೬೬೨ರಲ್ಲಿ ಷಾಹಜಿಯು ಮಧ್ಯವರ್ತಿಯಾಗಿ ನಿಂತು ಸಂಧಿಮಾಡಿಸಿದನು. ಷಾಹಜಿಯು ಬಂದಾಗ ಶಿವಾಜಿಯು ಕುದುರೆಯಿಂದಿಳಿದು, ತಂದೆಗೆ ಸಾಷ್ಟಾಂಗಪ್ರಣಾಮವಮಾಡಿ ಕರೆದುಕೊಂಡು ಬಂದು ಆತನನ್ನು ಭಕ್ತಿಗೌರವದಿಂದ ಕುಳ್ಳಿರಿಸಿ, ಅವನು ಕುಳಿತುಕೊಳ್ಳೆಂದು ಹೇಳುವವರೆಗೂ ತಾನು ನಿಂತೇ ಇದ್ದು ತನ್ನ ಪಿತೃಭಕ್ತಿಯನ್ನು ಪ್ರಕಾಶಪಡಿಸಿದನು.

ಷಾಹಜಿಯು ಪುತ್ರನಬಳಿ ಕೆಲವು ದಿನಗಳಿದ್ದು ಪರಮ ಸಂತೋಷದಿಂದ ಬಿಜಾಪುರಕ್ಕೆ ಹೋದನು. ತಂದೆಯು ಮಾಡಿದ ಸಂಧಿಗೆ ಶಿವಾಜಿಯು ತಪ್ಪಲಿಲ್ಲ. ತಂದೆ ಬದುಕಿರುವವರೆಗೂ ಬಿಜಾಪುರದವರೊಡನೆ ಯುದ್ಧ ಮಾಡಲಿಲ್ಲ. ಆ ಬಳಿಕ ಯುದ್ಧವು ಸಂಭವಿಸಿದಾಗಲೂ ಶಿವಾಜಿಯು ಮುಂದಾಗಿ ಸಂಧಿಯನ್ನು ಮುರಿದವನಲ್ಲ.

೧೬೬೪ರಲ್ಲಿ ಈ ಸಂಧಿ ನಡೆಯಿತೆಂದು ಇದಕ್ಕೆ ಮೊದಲೇ ತಿಳಿಸಿರುವುದಷ್ಟೆ? ಇದೇ ಮೊಗಲರೊಡನೆ ಯುದ್ಧಕ್ಕೆ ಪ್ರಾರಂಭವೆಂದು ತಿಳಿಯಬೇಕು. ಕಥೆಯು

ಇಲ್ಲಿಂದ ಪ್ರಾರಂಭವಾಗಿರುವುದು. ಮೊಗಲರೊಡನೆ ಯುದ್ಧವಾಗುವುದಕ್ಕೆ ಮೊದಲು ಕೊಂಕಣದೇಶವೂ ಶಿವಾಜಿಯ ಆಳ್ವಿಕೆಯಲ್ಲಿದ್ದಿತು. ಆತನ ಕೈಕೆಳಗೆ ಏಳುಸಾವಿರ ಕುದುರೆ ಸವಾರರೂ ಎಪ್ಪತ್ತುಸಾವಿರ ಕಾಲಾಳುಗಳೂ ಇದ್ದರು. ಆಗ ಶಿವಾಜಿಗೆ ಮೂವತ್ತು ವರ್ಷ ಮಾತ್ರ.



## ಏಳನೆಯ ಪ್ರಕರಣ.

### (ಶುಭಕಾರ್ಯವು.)

ಸೂರ್ಯನು ಅಸ್ತಂಗತನಾದನು. ಸಿಂಹಗಡ ದುರ್ಗದಬಳಿ, ವೀರಭಟರು ನಿಶ್ಶಬ್ದವಾಗಿ ಬಂದು ಸೇರುತ್ತಿದ್ದರು. ಹೊರಗಡೆ ಇರುವವರಿಗೆ ಒಳಗೆ ಏನು ನಡೆಯುತ್ತಿದ್ದಿತೆಂಬುದು ತಿಳಿಯುತ್ತಿರಲಿಲ್ಲ. ದುರ್ಗದ ಎತ್ತರವಾದೊಂದು ಪ್ರದೇಶದಲ್ಲಿ ಕೆಲವರು ವೀರಭಟರು. ಪ್ರಕೃತಿಯು ಮನೋಹರವಾಗಿದ್ದಿತು. ಪೂರ್ವದಿಕ್ಕಿನಲ್ಲಿ ತಂಗಾಳಿ ಬೀಸುತ್ತಲಿದ್ದಿತು ದಕ್ಷಿಣದಲ್ಲಿ ಮಹಾಪರ್ವತಗಳು ಪುಷ್ಪಾದಿಗಳಿಂದಲೂ ವನಮೂಲಿಕೆಗಳಿಂದಲೂ ಅಪೂರ್ವವಾದ ರಮಣೀಯತೆಯನ್ನು ಹೊಂದಿದ್ದವು. ಉತ್ತರದಲ್ಲಿ ಸಸ್ಯಗಳು ಸಂಧ್ಯಾರುಚಿಯಿಂದ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದವು. ಪ್ರಕೃತಿಸೌಂದರ್ಯದ ಈಬಗೆಯ ವಿಚಿತ್ರಶೋಭೆಯನ್ನು ಅವಲೋಕಿಸದೆ ಭಟರು ಪೂನಾನಗರದಮೇಲೆ ದೃಷ್ಟಿಯನ್ನಿಟ್ಟರು.

ಯಾವುದೋ ಒಂದು ಸಾಹಸಕಾರ್ಯ. ಅದರಿಂದ ಚಿರಮನೋರಥವು ಸಫಲವಾಗುವುದು ಇಲ್ಲದಿದ್ದರೆ ಸಂಪೂರ್ಣ ನಷ್ಟವಾಗುವುದು. ಈ ರೀತಿಯಾಗಿ ಸಂಭವಿಸಿದರೆ ಮಾಡುವುದೇನು ? ಅಂತಹಕಾರ್ಯಗಳಲ್ಲಿ ಪ್ರವರ್ತಿಸಿದ ಸಾಹಸಿಗೂ ಸ್ವಲ್ಪ ಅಧೈರ್ಯವಾಗದಿರುತ್ತಿರಲಿಲ್ಲ. ಆ ವೀರನ ಮನಸ್ಸಿನಲ್ಲಿ 'ಈದಿನ ಷಯಿಸ್ತಾಖಾನನು ಸೈನಿಕರೊಡನೆ ಸಾಯುವನು, ಇಲ್ಲವೆ, ಮಹಾರಾಷ್ಟ್ರಸೂರ್ಯನು ಅಸ್ತಮಿಸುವನು.' ಎಂಬ ಯೋಚನೆಯುಂಟಾಗಿದ್ದಿತು. ಹೀಗಿದ್ದರೂ ಅವರಲ್ಲಿ ಒಬ್ಬನಾದರೂ

ಈ ಅಭಿಪ್ರಾಯವನ್ನು ಪ್ರಕಾಶವಾಗಿ ಹೇಳಲಿಲ್ಲ; ಆದರೆ ಮುಖಚಹರೆಯು ಒಂದೇರೀತಿಯಾಗಿದ್ದಿತು.

ಈ ವೀರಮಂಡಲದಲ್ಲಿ ದೂರದರ್ಶಿಯಾದ ಪೇಷ್ವೆ ಮೋರೇಶ್ವರತ್ರಿಮೂಲ ಎಂಬುವನಿದ್ದನು. ಆತನು ಚಿಕ್ಕಂದಿನಲ್ಲಿ ಶಾಹಜಿಯ ಕೈಕೆಳಗಿದ್ದು ಅನಂತರ ಶಿವಾಜಿಯ ಸೇವೆಯಲ್ಲಿ ನಿಂತನು. ಪ್ರತಾಪಗಡ ದುರ್ಗವನ್ನು ಅವನು ವಿಚಿತ್ರವಾಗಿ ಕಟ್ಟಿಸಿದನು. ನಾಲ್ಕು ವರ್ಷಗಳ ಹಿಂದೆ ಪೇಷ್ವೆಯ ಪದವಿಯನ್ನು ಹೊಂದಿದ್ದನು. ಆಗಿನಿಂದ ತನ್ನ ಅಧಿಕಾರಕ್ಕೆ ತಕ್ಕ ಯೋಗ್ಯತೆಯನ್ನು ತೋರ್ಪಡಿಸುತ್ತಿದ್ದನು. ಶಿವಾಜಿಯು ಅಫ್ಜುಲ್‌ಖಾನನನ್ನು ಕೊಂದಕೂಡಲೇ ಮೋರೇಶ್ವರನು ತುರುಕರ ದಂಡಿನಮೇಲೆ ಬಿದ್ದು ಅವರನ್ನು ಓಡಿಸಿದನು. ಮೊಗಲರ ಸಂಗಡ ಯುದ್ಧವು ಪ್ರಾರಂಭವಾದಂದಿನಿಂದ ಆತನೇ 'ಸರ್‌ನೌಬತ್' ಎಂದರೆ ಸೇನಾಧಿಪತಿಯಾಗಿದ್ದನು. ಯುದ್ಧದಲ್ಲಿ ಪರಮಸಾಹಸಿ; ಆಪತ್ತಿನಲ್ಲಿ (ಕಷ್ಟದಲ್ಲಿ) ಮಹಾಸ್ಥೈರ್ಯವಂತನು; ರಾಜಕಾರ್ಯನಿರ್ವಾಹದಲ್ಲಿ ಅತ್ಯಂತ ನಿಪುಣನು. ಕುಶಾಗ್ರಬುದ್ಧಿಯುವನು. ಕಾರ್ಯದಲ್ಲಿ ದಕ್ಷನು. ಮೋರೇಶ್ವರನಿಗಿಂತ ಬೇರೆ ಯಾರೂ ಶಿವಾಜಿಯ ಆಸ್ಥಾನದಲ್ಲಿ ಕಾಣಿಸಲ್ಪಡರು.

ರಾಜನೀತಿಜ್ಞನೂ ರಣಶೂರನೂ ಆದ 'ಆಬಾಜೀಸೋನದೇವ' ಎಂಬಾತನು ಅವರಲ್ಲಿದ್ದನು. ಆತನ ಈಗಿನ ಹೆಸರು ನೀಲಪಂತಸೋನದೇವ. ಆದರೂ ಆಬಾಜೀ ಎಂಬ ಹೆಸರೇ ಪ್ರಸಿದ್ಧವಾಗಿದ್ದಿತು. ೧೬೪೮ರಲ್ಲಿ ಕಲ್ಯಾಣ ದುರ್ಗವನ್ನೂ ಸುತ್ತಮುತ್ತಲಿರುವ ಪ್ರದೇಶವನ್ನೂ ಜಯಿಸಿದವನು ಈತನೇ-ಮತ್ತು ಈಗ ರಾಜಗಡ ದುರ್ಗವನ್ನು ನಿರ್ಮಿಸುವುದಕ್ಕೆ ಪ್ರಾರಂಭಿಸಿದವನೂ ಈತನೇ. ಪ್ರಖ್ಯಾತನಾದ ಅನ್ನಾಜೀದತ್ತನ ಸಂಗಡ ಸಿಂಹಗಡ ದುರ್ಗಕ್ಕೆ ಬಂದನು. ನಾಲ್ಕು ವರ್ಷಗಳ ಹಿಂದೆ ಈತನು ಪವನಗಡ ದುರ್ಗವನ್ನು ಜಯಿಸಿದನು.

ಅಶ್ವಸೇನಾಪತಿಯಾದ ನೇತಾಜಿಯು ಸಿಂಹಗಡ ದುರ್ಗದಲ್ಲಿರಲಿಲ್ಲ. ಆತನು ಹೇಗೆಯೋ ಮೊಗಲರ ಸೇನೆಯನ್ನು ಮೋಸಪಡಿಸಿ ಔರಂಗಾಬಾದ್, ಅಹಮ್ಮದನಗರಗಳನ್ನು ದೋಚಿದನೆಂದು ನಮಗೆ ಈ ವರೆಗೆ ತಿಳಿದಿರುವುದು. ನೇತಾಜಿಗೆ ಸಹಾಯವಾಗಿ ಕರ್ತಾಜಿ ಗುಜ್ಜರ, ಎಂಬಾತನು ಕೆಲವು ಮಂದಿ ಅಶ್ವಿಕರ ಸಂಗಡ ಸಿಂಹಗಡ ದುರ್ಗವನ್ನು ಬಿಟ್ಟಿದ್ದನು.

ಮಾವಳರ ಸ್ನೇಹಿತರಲ್ಲಿ ಬಾಜಿ ಫಸಳೀಕರ್ ಎಂಬುವನು ಮೂರು ವರ್ಷಗಳ ಹಿಂದೆ ಮೃತಪಟ್ಟನು. ತಾನಾಜಿ ಮಾಲಸೂರೇ, ಆಶಾಕಂಕು ಎಂಬಿಬ್ಬರೂ ಸಿಂಹಗಡದಲ್ಲಿದ್ದರು. ಅವರಿಗೆ ಶಿವಾಜಿಯಲ್ಲಿ ಅತ್ಯಂತ ವಿಶ್ವಾಸವಿದ್ದಿತು. ಶಿವಾಜಿಗೆ ಸಹಾಯವಾಗಿ ಅವರು ಅನೇಕವೇಳೆ ತಮ್ಮ ಮಾವಳರ ಸೇನೆಯೊಡನೆ ಪರ್ವತ ದುರ್ಗಗಳನ್ನು ಹಠಾತ್ತಾಗಿ ಆಕ್ರಮಿಸಿ ಸ್ವಾಧೀನಮಾಡಿಕೊಂಡಿದ್ದರು.

ಕ್ರಮವಾಗಿ ಕತ್ತಲೆಯಾಗುತ್ತ ಬಂದಿತು. ಆಗ ಶಿವಾಜಿಯು ತನ್ನ ಸೇವಕರ ಬಳಿಗೆ ಬಂದನು. ಆತನ ಮುಖವು ಗಾಂಭೀರ್ಯವನ್ನು ವಹಿಸಿದ್ದಿತು. ಮತ್ತು ದೃಢಪ್ರತಿಜ್ಞೆಯನ್ನು ಸೂಚಿಸುತ್ತಿದ್ದಿತು ನೇತ್ರಗಳು ಜಾಜ್ವಲ್ಯಮಾನವಾಗಿಯೂ ದೃಷ್ಟಿಯು ಅಚಂಚಲವಾಗಿಯೂ ಇದ್ದುವು. ಕಂಚುಕದೊಳಗೆ ಕವಚವಿದ್ದಿತು. ಅಂದಿನ ಪರಮ ಸಾಹಸ ಕಾರ್ಯಕ್ಕೆ ಆತನು ಸಂಸಿದ್ಧನಾಗಿದ್ದನು.

ಆಗ ಶಿವಾಜಿಯು ತನ್ನ ಭೃತ್ಯರನ್ನು ಕುರಿತು— ಎಲ್ಲವೂ ಸಿದ್ಧವಾಗಿದೆ, ಮಿತ್ರರೇ ಹೋಗಿಬರುವೆನು ' ಎಂದು ಮೆಲ್ಲನೆ ಹೇಳಿದನು

ಮುಟೇಶ್ವರ:—ಹಾಗಾದರೆ ನಿಶ್ಚಯ ಮಾಡಿದಂತೆಯೋ ? ಸೋನದೇವನನ್ನಾಗಲಿ, ಅನ್ನಾಜೀಯನ್ನಾಗಲೀ ನನ್ನನ್ನಾಗಲೀ ತಮ್ಮ ಹಿಂದೆ ಕರೆದುಕೊಂಡು ಹೋಗಬಾರದೇ ? ಮಹಾಪ್ರಭು ! ವಿಪತ್ಕಾಲದಲ್ಲಿ ನಿಮ್ಮನ್ನು ಯಾವಾಗಲಾದರೂ ಬಿಟ್ಟಿರುವೆವೆ ?

ಶಿವಾಜಿ:—ಪೇಷ್ವಾಜೀ ! ಕ್ಷಮಿಸಿರಿ; ಇನ್ನು ಬಲವಂತ ಮಾಡಬೇಡಿರಿ, ನಿಮ್ಮ ಸಾಹಸ, ವಿಕ್ರಮ, ತಿಳುವಳಿಕೆಗಳು ನನಗೆ ನೂತನವಲ್ಲ. ಆದರೂ ಇಂದು ನನ್ನನ್ನು ಕ್ಷಮಿಸಿ. 'ಈ ದಿನವೇ ಈ ಕಾರ್ಯವನ್ನು ಸಾಧಿಸುವೆನು ; ಇಲ್ಲದಿದ್ದರೆ ಈ ಮುಷ್ಟಿ ಪ್ರಾಣಗಳನ್ನು ಬಿಡುವೆನು ' ಎಂದು ಪ್ರತಿಜ್ಞೆ ಮಾಡಿರುವೆನು. ನನಗೆ ಜಯವುಂಟಾಗುವಂತೆ ನೀವೆಲ್ಲರೂ ಅನುಗ್ರಹಿಸಿರಿ. ಪ್ರಯತ್ನದಲ್ಲಿ ಒಂದುವೇಳೆ ನನಗೆ ಕೇಡುಂಟಾದರೂ ನೀವು ಮೂವರು ಇದ್ದ ಪಕ್ಷದಲ್ಲಿ ಮಹಾರಾಷ್ಟ್ರವು ಸಿಲ್ಲಬಲ್ಲದು. ನೀವು ನನ್ನ ಸಂಗಡವಿದ್ದರೆ ತೊಂದರೆ ಸಂಭವಿಸಿದಾಗ, ಮತ್ತಾರ ದೂರದರ್ಶಿತ್ವದಿಂದಲೂ ಬುದ್ಧಿಬಲದಿಂದಲೂ ದೇಶವು ಸುರಕ್ಷಿತವಾಗಿರಬಲ್ಲುದು !

ಜಾತೀಯ ಗೌರವವು ಹೇಗೆ ನಿಲ್ಲುವುದು ? ದೇಶದ ಸ್ವಾತಂತ್ರ್ಯವನ್ನು ರಕ್ಷಿಸುವವರಾದರೂ ಮತ್ತಾರು ? ಆದುದರಿಂದ ಪ್ರಯಾಣ ಸಮಯದಲ್ಲಿ ತಡೆಮಾಡಬೇಡಿರಿ.

ಇನ್ನು ಏನು ಹೇಳಿದರೂ ಲಾಭವಿಲ್ಲವೆಂದು ಪೇಷ್ವೆಯು ಸುಮ್ಮನಿದ್ದನು. ಶಿವಾಜಿಯು ಮೃದುಸ್ವರದಿಂದ ಮತ್ತೆ "ಪೇಷ್ವಾಜೀ ! ನೀವು ನನಗೆ ತಂದೆಯ ಸಮಾನರು. ನನಗೆ ಜಯವುಂಟಾಗುವಂತೆ ಆಶೀರ್ವದಿಸಿರಿ. ಬ್ರಾಹ್ಮಣರ ಆಶೀರ್ವಾದವು ನಿಷ್ಫಲವಾಗದು. ಅಜಾಜೀ ! ಅನ್ನಾಜೀ ! ನೀವು ಸಹ ಧೈರ್ಯೋತ್ಸಾಹವನ್ನುಂಟುಮಾಡಿ ಸಮ್ಮತಿಯನ್ನು ಕೊಡಿರಿ. ಇದೊ ಇನ್ನು ಹೊರಡುವೆನು ?" ಎಂದು ಹೇಳಿದನು.

ಕಣ್ಣುಗಳಲ್ಲಿ ಆನಂದ ಬಾಷ್ಪವು ಸುರಿಯುತ್ತಿರಲು ಆ ಮುದಿವರು ಮಹಾರಾಷ್ಟ್ರವೀರರೂ ಆಶೀರ್ವದಿಸಿದರು. ಶಿವಾಜಿಯು ಮಾವಳರನ್ನು ನೋಡಿ 'ಮಿತ್ರರೇ ! ಹೋಗಿಬರುವೆನು ' ಎಂದನು.

ತಾನಾಜೀ:—ಪ್ರಭೂ ! ನಾವು ಆವ ಅಪರಾಧವಮಾಡಿದುದಕ್ಕಾಗಿ ನಿಮ್ಮ ಹಿಂದೆ ಬರದಂತೆ ನಮ್ಮನ್ನು ನಿಷೇಧಿಸಿರುವಿರಿ ? ದೇವ ! ಕಳೆದ ದಿನಗಳನ್ನು ಸ್ಮರಿಸಿಕೊಳ್ಳಿರಿ ! ಕೊಂಕಣದೇಶದಲ್ಲಿ ನಿಮ್ಮೊಡನೆ ಸಂಚಾರಮಾಡುತ್ತಿದ್ದವರು ಯಾರು ? ಬೆಟ್ಟ ಗುಡ್ಡಗಳಲ್ಲಿಯೂ ಪರ್ವತದ ತಪ್ಪಲುಗಳಲ್ಲಿಯೂ ಗಿರಿ ಗುಹೆಗಳಲ್ಲಿಯೂ ಹಗಲಿರುಳೆನ್ನದೆ ನಿನ್ನೊಡನೆ ಸಂಚರಿಸಿದವರಾರು ? ಗತಿಸಿದ ಬಾಜಿಯೂ ಆಶಾಜಿಯೂ ಈ ದಾಸನೂ ಅಲ್ಲವೆ ? ಬಾಜಿಯು ನಿಮ್ಮ ಕಾರ್ಯದಲ್ಲಿಯೇ ಇದ್ದು ಮೃತಿಹೊಂದಿದನಲ್ಲವೆ ? ನಮಗೂ ಅದೇ ಕೋರಿಕೆ, ಅಪ್ಪಣೆಕೊಡಿರಿ. ನಾವು ನಿಮ್ಮ ಸಂಗಡ ಬರುವೆವು ; ಜಯವುಂಟಾದರೆ ಪ್ರಭುಗಳು ಇವರ ಆನಂದವನ್ನು ನೋಡಿ ಸಂತೋಷಪಡಲಿ. ಒಂದು ವೇಳೆ ಅವರಿಗೆ ಕೇಡುಂಟಾದರೆ ನಾವು ಇಲ್ಲಿ ಜೀವಿಸಿದ್ದು ಏನುಲಾಭ ! ರಾಜ್ಯತಂತ್ರದಲ್ಲಿ ನಿಮಗೆ ಸಹಾಯಮಾಡಲು ನಮಗೆ ಬುದ್ಧಿಶಕ್ತಿ ಸಾಲದು. ಸಹಚರರಾದ ನಮ್ಮನ್ನು ಮಾತ್ರ ಮೋಸಪಡಿಸಿ ಹೋಗಬೇಡಿರಿ." ಎಂದು ಹೇಳುತ್ತಿದ್ದಂತೆಯೇ ಅವನ ಕಣ್ಣುಗಳಲ್ಲಿ ನೀರು ಸುರಿಯಿತು.

ಶಿವಾಜಿ— ಅಣ್ಣಂದಿರ ! ನಿಮಗೆ ಕೊರಗಿರುವುದೇನು ? ಬೇಗಹೊರಡಿರಿ.

ಹೀಗೆ ಹೇಳಿ ಶಿವಾಜಿಯು ಆ ಬಳಿಕ ಶುದ್ಧಾಂತಃಪುರಕ್ಕೆ ಹೋದನು. ಜೀಜೀಬಾಯಿಯು ಒಬ್ಬಳೇ ಕುಳಿತು ಮಗನಿಗೆ ವಿಪತ್ತುಬಾರದಿರಲೆಂದು ಭವಾನಿಯನ್ನು ಪ್ರಾರ್ಥಿಸುತ್ತಿದ್ದಳು. ಆ ಸಮಯದಲ್ಲಿ ಶಿವಾಜಿಯು ಅಲ್ಲಿಗೆಹೋಗಿ ನಮಸ್ಕರಿಸಿ— ಅಮ್ಮಾ ! ದಯೆಯಿಟ್ಟು ಆಶೀರ್ವಾದಮಾಡಿ ಅಪ್ಪಣೆಕೊಡು." ಎಂದು ಕೇಳಿದನು.

ಜೀಜೀ—ಮಗುವೇ ! ನಿನ್ನ ಕಷ್ಟಗಳು ಪರಿಹಾರವಾಗಿ ಈ ದೀನಳ ದುಃಖವು ಎಂದಿಗೆ ಕೊನೆಗಾಣುವುದೋ ?

ಶಿವಾಜಿ—ಅಮ್ಮಾ ! ನಿನ್ನ ಆಶೀರ್ವಾದ ಬಲದಿಂದ ನಾನು ಎಷ್ಟೆಷ್ಟು ವಿಪತ್ತಿನಿಂದ ತಪ್ಪಿಸಿಕೊಂಡು ಬರಲಿಲ್ಲ ? ಎಂತೆಂತಹ ಯುದ್ಧದಲ್ಲಿ ಜಯಹೊಂದಿಬರಲಿಲ್ಲ ? ಈಗಲೂ ಹಾಗೆಯೇ ನಿನ್ನ ಆಶೀರ್ವಾದ ಬಲದಿಂದ ಕೃತಕಾರ್ಯನಾಗಿ ಬರುವೆನೆಂದು ನಂಬಿರುವೆನು,

ಜೀಜೀ—ಅಪ್ಪಾ ! ದೀರ್ಘಾಯುಷ್ಮಂತನಾಗು ದೇವಿಯು ನಿನ್ನನ್ನು ರಕ್ಷಿಸಲಿ. ಎಂದು ಆಶೀರ್ವದಿಸಿ, ಮುಡಿಸಡಿಲಿ, ಬೀಳ್ಕೊಟ್ಟಳು.

ಶಿವಾಜಿಯು ಮಾತೆಯ ಅಪ್ಪಣೆಹೊಂದಿ ಬಂದು ನಿಶ್ಶಬ್ದವಾಗಿ ಕುದುರೆಯನ್ನೇರಿದನು. ಸೈನಿಕರೆಲ್ಲರೂ ಸಿದ್ಧರಾಗಿದ್ದರು ಸೈನ್ಯನೊಡನೆ ಶಿವಾಜಿಯು ದುರ್ಗದಹೊರಗೆ ಹೊರಟನು.

ದುರ್ಗದ ದ್ವಾರವನ್ನು ದಾಟುವ ವೇಳೆಯಲ್ಲಿ ಒಬ್ಬ ಯುವಕ ಯೋಧನು ಶಿವಾಜಿಯ ಇದಿರಿಗೆ ಮಸ್ತಕವನ್ನು ಚಾಚಿದನು. ಶಿವಾಜಿಯು ಅವನ ಕೈ ಹಿಡಿದು—"ರಘುನಾಥಜೀ ! ನಿನ್ನ ಅಪೇಕ್ಷೆಯೇನು ? '' ಎಂದು ಕೇಳಿದನು.

ರಘು —ದೇವಾ ! ತೋರಣದುರ್ಗದಿಂದ ಪತ್ರಗಳನ್ನು ತಂದಾಗ ಪ್ರಭುಗಳು ಪ್ರಸನ್ನರಾಗಿ ನನಗೆ ಬಹುಮಾನಕೊಡುವುದಾಗಿ ವಾಗ್ದಾನಮಾಡಿದ್ದಿರಿ.

ಶಿವಾಜಿ—ಇದೇ ನಿನಗೆ ಸರಿಯಾದ ಸಮಯವೇ ? ಅತಿ ಕಷ್ಟವಾದ ಕಾರ್ಯವನ್ನು ನಿರ್ವಹಿಸುವುದಕ್ಕಾಗಿ ಹೊರಟಿರುವು ಬಹುಮಾನಕೇಳಲು ಬಂದೆಯಾ ?

ರಘು—ಪ್ರಭು ! ಸಮಯವೆಂದು ತಿಳಿದೇ ಬಂದೆನು. ಆಗ್ರಹಿಸಬಾರದು. ನನ್ನನ್ನೂ ತಮ್ಮ ಸಂಗಡ ಕರೆದುಕೊಂಡು ಹೋಗುವುದೇ ನನಗೆ ಬಹುಮಾನ. ಅಪ್ಪಣೆ

ಯಾದರೆ ಇಪ್ಪತ್ತೈದು ಸಾವಿರರೊಡನೆ ಈ ಭೃತ್ಯನು ಜೊತೆಯಲ್ಲಿ ಬರಲು ಸಿದ್ಧನಾಗಿರುವನು.

ಶಿವಾಜಿ—ರಜಪೂತ ತರುಣನೇ ! ಸ್ವಯಂಪೂರ್ವಕವಾಗಿ ಏಕೆ ಸಂಕಟದಲ್ಲಿ ಸಿಕ್ಕಿಕೊಳ್ಳುವೆ ? ಈ ತಾರುಣ್ಯದಲ್ಲಿ ಪ್ರಾಣವನ್ನು ಕಳೆದುಕೊಳ್ಳಲು ಉತ್ಸಾಹಿತನಾಗಿರುವೆಯಾ ?

ರಘು—ದೇವ ! ತಮ್ಮ ಜೊತೆಯಲ್ಲಿ ಬಂದರೆ ಪ್ರಾಣ ಹೋಗುವುದೆಂಬ ಭಯವು ನನಗಿಲ್ಲ. ಒಂದುವೇಳೆ ನಾನು ಮೃತನಾದರೂ ನನಗಾಗಿ ದುಃಖಿಸುವವರು ಈ ಲೋಕದಲ್ಲಿ ಯಾರೂ ಇಲ್ಲ. ಪ್ರಭುವನ್ನು ಸಂತೋಷಪಡಿಸುವುದೇ ನನ್ನ ಜೀವನದ ಮುಖ್ಯಗುರಿ.

ಶಿವಾಜಿಯು ಅವನ ಮುಖವನ್ನು ನೋಡಿ ಕಿರುನಗೆಯಿಂದ ಅಂಗೀಕಾರವನ್ನು ಸೂಚಿಸಿದನು. ರಘುನಾಥನು ವಿನಯದಿಂದ ವಂದಿಸಿ ಕೂಡಲೇ ತನ್ನ ಕುದುರೆಯನ್ನು ಹತ್ತಿ, ಸೈನಿಕರೊಡನೆ ಸೇರಿಕೊಂಡನು. ಯಾರಾದರೂ ತಿಳಿಯುವರೆಂಬ ಭೀತಿಯಿಂದ ಗದ್ದಲವಿಲ್ಲದೆಯೂ ಬೆಳಕಿಲ್ಲದೆಯೂ ಗುಂಪಾಗಿ ಹೋಗದೆಯೂ ಒಬ್ಬರಿಗೊಬ್ಬರು ಸೇರದೆ, ಬೇರೆಬೇರೆಯಾಗಿ ಹೋಗಿ ಕೊನೆಗೆ ಪೂನಾನಗರದ ಹೊರಗಿದ್ದ ಒಂದು ತೋಟದಲ್ಲಿ ಸೇರಿದರು. ರಘುನಾಥನು ನೆರಳಿನಂತೆ ಪ್ರಭುವನ್ನು ಹಿಂಬಾಲಿಸಿದ್ದನು.

ಅಂಧಕಾರವು ದಟ್ಟವಾಗುತ್ತ ಬಂದಿತು. ಆ ನಿಶಾಮಾರುತನು ಆ ಉಪವನದ ನಡುವೆ ಮರಮರಧ್ವನಿಮಾಡುತ್ತಿದ್ದನು. ಕ್ರಮವಾಗಿ ಪ್ರಯಾಣಿಕರು ತಗ್ಗಿ ಹೋದರು. ಕಗ್ಗತ್ತಲೆಯಲ್ಲಿ ಮತ್ತೇನೂ ಕಾಣಬರುತ್ತಲಿಲ್ಲ. ಒಣಗಿದ ಎಲೆಗಳು ಬೀಳುವ ಧ್ವನಿಹೊರತು ಮತ್ತಾವ ಶಬ್ದವೂ ಕೇಳಿ ಬರುತ್ತಲಿಲ್ಲ.

ಸ್ವಲ್ಪ ಹೊತ್ತಿಗೆ ಪೂನಾನಗರದಲ್ಲಿ ಸದ್ದಡಗಿತು ; ದೀಪಗಳೆಲ್ಲವೂ ಆರಿಹೋದುವು. ಜನರೆಲ್ಲರೂ ನಿದ್ರಾವಶರಾಗಿರಲು ನಿಶ್ಶಬ್ದವಾಗಿದ್ದ ಆ ನಗರದಲ್ಲಿ ಪ್ರಯಾಣಿಕರ ಧ್ವನಿಯೂ ನಡುನಡುವೆ ನಾಯಿಗಳ ಗೊಳ್ಳೆಂಬಶಬ್ದವೂ ಮಾತ್ರ ವಾಯುಮಾರ್ಗದಲ್ಲಿ ವ್ಯಾಪಿಸಿದ್ದಿತು. ಆ ಸಮಯದಲ್ಲಿ ಆಕಸ್ಮಿಕವಾಗಿ “ಢಂ ಢಂ” ಎಂದು ಶಬ್ದವು ಕೇಳಿಸಿತು. ಆ ಶಬ್ದಕ್ಕೆ ತೋಟದಲ್ಲಿ ಅಡಗಿದ್ದವರ ಹೃದಯಗಳು ತಲ್ಲಣಿಸಿದುವು. ಮತ್ತೆ ‘ ಢಂ ಢಂ ’ ಶಬ್ದವು ಕಿವಿಗಳನ್ನು ಭೇದಿಸುವಂತೆ ಮಾಡಿದುವು. ಕೆಲವರು ದೀವಟಿಗೆಗಳನ್ನು ಹಿಡಿದುಕೊಂಡು ವಾದ್ಯಗಳನ್ನು ಮಾಡಿಸಿಕೊಂಡು ಬಂದು

ಸಂದಿಯಲ್ಲಿ ಹೋಗುತ್ತಿದ್ದರು. ಆದೇ ಉತ್ಸವವು, ಮದುವೆಯ ಮೇಳವು, ಸಮೀಪಕ್ಕೆ ಬಂದಿತು. ಪೂನಾನಗರಕ್ಕೆ ನಾಲ್ಕುಕಡೆಗಳಲ್ಲಿಯೂ ಸುತ್ತು ಗೋಡೆಯು ಇಲ್ಲದುದರಿಂದ ಅದು ಚೆನ್ನಾಗಿ ಕಾಣಿಸುತ್ತಿದ್ದಿತು. ಮಾರ್ಗವು ಜನಭರಿತವಾಗಿದ್ದಿತು; ನಾನಾವಿಧ ವಾದ್ಯಗಳಿಂದ ಒಂದು ದೊಡ್ಡ ಮೆರವಣಿಗೆಯು ಹೋಗುತ್ತಿದ್ದಿತು; ಕೆಲವರು ಕುದುರೆಯ ಮೇಲೆ ಕುಳಿತೂ ಮತ್ತೆ ಕೆಲವರು ನಡೆದುಕೊಂಡೂ ಹೋಗುತ್ತಿದ್ದರು.

ಶಿವಾಜಿಯು ಮಾವಳರ ಸ್ನೇಹಿತರನ್ನು ಆಲಿಂಗಿಸಿಕೊಂಡನು. ಅನ್ಯೋನ್ಯ ಮುಖಾವಲೋಕನದಲ್ಲಿ 'ಇದೇ ಕೊನೆಯ ಸಾರಿ' ಎಂದು ವ್ಯಕ್ತಪಡುವಂತಿದ್ದಿತು. ಗದ್ದಲವಾಗದಂತೆ ಶಿವಾಜಿಯೂ ಆತನ ಅನುಚರರೂ ಮದುವೆಯವರ ಸಂಗಡ ಸೇರಿಕೊಂಡರು.

ಮದುವೆಯವರು ಸ್ವಲ್ಪ ಹೊತ್ತಿಗೆ ಷಯಿಸ್ತಾಖಾನನು ಇಳಿದಿದ್ದ ಮನೆಯ ಪಕ್ಕದಲ್ಲಿ ಹೋಗುತ್ತಿದ್ದರು. ಹೆಂಗಸರು ಗವಾಕ್ಷಿಗಳಲ್ಲಿ ಸೇರಿ ಉತ್ಸವವನ್ನು ನೋಡಿ, ಒಳಗೆ ಹೋಗಿ ನಿದ್ರೆ ಮಾಡಿದರು. ಪ್ರಯಾಣಕರು ಮೂವತ್ತೈದು ಮಂದಿ ಮಾತ್ರ ಖಾನಸಾಹೇಬನ ಮನೆಯ ಪಕ್ಕದಲ್ಲಿ ಅಡಗಿದರು. ಆದರೆ ಅವರನ್ನು ಯಾರೂ ಲಕ್ಷ್ಯವಿಟ್ಟು ನೋಡಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಉತ್ಸವದ ಗದ್ದಲವು ಕೇಳಲ್ಪಡದೆ ಹೋಯಿತು.

ಸ್ವಲ್ಪ ಹೊತ್ತಾದ ಮೇಲೆ ಷಯಿಸ್ತಾಖಾನನ ಅಡಿಗೆಮನೆಯ ಗೋಡೆಯ ಕಿಟಿಕಿಯ ಹತ್ತಿರ ಸ್ವಲ್ಪ ಸ್ವಲ್ಪವಾಗಿ ಶಬ್ದವಾಗುತ್ತಿದ್ದಿತು. ಖಾನಸಾಹೇಬನೂ ಪರಿವಾರದ ಸ್ತ್ರೀಯರೂ ಮಲಗಿದ್ದರು. ಕೆಲವರು ಎಚ್ಚರವಾಗಿದ್ದರು. ಆ ಶಬ್ದವು ಅವರಿಗೆ ಕೇಳಿಸಿದರೂ ಅವರು ಅದನ್ನು ಲೆಕ್ಕಮಾಡಲಿಲ್ಲ. ಒಂದು ಇಟ್ಟಿಗೆಯು ತರುವಾಯ ಇನ್ನೊಂದು, ಮತ್ತೊಂದು, ಮಗುದೊಂದು, ಈ ರೀತಿಯಾಗಿ ಇಟ್ಟಿಗೆಗಳು ಬೀಳುತ್ತಿದ್ದುವು. ಸುಣ್ಣವೂ ಗಾರೆಯೂ ಜಲಜಲವೆಂದು ಬೀಳುತ್ತಿದ್ದಿತು. ಆಗ ಸಂದೇಹಮನಸ್ಕರಾಗಿ ಪರಿಚಾರಕರು ಆ ಕಡೆ ನೋಡಲು, ದೃಷ್ಟಿಗೆ ತಾಕದೆ ಒಬ್ಬನ ತರುವಾಯ ಮತ್ತೊಬ್ಬನು, ಅವನ ಹಿಂದೆ ಮಗುವೊಬ್ಬನು-ಈ ರೀತಿಯಾಗಿ ಮಹಾರಾಷ್ಟ್ರರು ಮನೆಯಲ್ಲಿ ಪ್ರವೇಶಿಸುತ್ತಿದ್ದರು. ಆಗ ಅಲ್ಲಿದ್ದ ಸ್ತ್ರೀಯರು ಗಟ್ಟಿಯಾಗಿ

ಕೂಗಿಕೊಂಡು ಓಡಿಹೋಗಿ ಷಯಿಸ್ತಾಖಾನನನ್ನು ಎಬ್ಬಿಸಿ ಅವನಿಗೆ ಈ ಸಮಾಚಾರವನ್ನು ತಿಳಿಸಿದರು

ಶಿವಾಜಿಯು ಸಂಧಿಗಾಗಿ ತನ್ನನ್ನು ಬೇಡುತ್ತಿರುವಂತೆ ಖಾನಸಾಹೇಬನು ಸ್ವಪ್ನವನ್ನು ನೋಡುತಿದ್ದನು. ಪಾಪ ! ಆಕಸ್ಮಿಕವಾಗಿ ಶಿವಾಜಿಯು ಪೂನಾನಗರವನ್ನು ವಶಪಡಿಸಿಕೊಂಡು ತನ್ನ ಮನೆಯನ್ನೂ ಸ್ವಾಧೀನಪಡಿಸಿಕೊಂಡನೆಂಬ ವರ್ತಮಾನವು ಕೇಳಿಸಿತು !

ತಪ್ಪಿಸಿಕೊಂಡು ಓಡಿಹೋಗಬೇಕೆಂದು ಷಯಿಸ್ತಾಖಾನನು ಒಂದು ಬಾಗಿಲ ಹತ್ತಿರಕ್ಕೆ ಹೋದನು. ಅಲ್ಲಿ ಕವಚಧಾರಿಯಾದ ಮಹಾರಾಷ್ಟ್ರ ವೀರನೊಬ್ಬನು ಕಣ್ಣೆದಿರಿಗೆ ಕಾಣಿಸಿದನು. ಇನ್ನೊಂದು ಬಾಗಿಲಿಗೆ ಹೋಗಲು ಅಲ್ಲಿಯೂ ಕೂಡ ಮತ್ತೊಬ್ಬನು ಪ್ರತ್ಯಕ್ಷನಾದನು. ಖಾನನು ಭಯಭ್ರಾಂತನಾಗಿ ಒಂದು ಕಿರುಮನೆಯೊಳಗೆ ಹೋಗಿ ಬಾಗಿಲನ್ನು ಮುಚ್ಚಿಕೊಂಡು ಓಡಿಹೋಗಲು ಸುಲಭವಾದ ಮಾರ್ಗವನ್ನು ಕುರಿತು ಯೋಜಿಸುತ್ತಿದ್ದನು. ಆಗಲೇ ಎದೆಯು ಒಡೆದು ಹೋಗುವಂತೆ "ಹರಹರ ಮಹಾದೇವ" ಎಂದು ಕೂಗುತ್ತ ಮಹಾರಾಷ್ಟ್ರರು ಪಕ್ಕದ ಕಿರುಮನೆಯನ್ನು ಸೇರಿದರು.

ಸೇನಾಪತಿಯ ಮಂದಿರದ ಸುತ್ತಲೂ ಮುತ್ತಿಗೆ ಹಾಕಿರುವರೆಂದು ಕೋಲಾಹಲವೆದ್ದಿತು. ಹಠಾತ್ತಾಗಿ ಮುತ್ತಿಗೆ ಹಾಕಿದುದರಿಂದ ಕಾವಲುಗಾರರಿಗೆ ದಿಕ್ಕುತೋರದಂತಾಯಿತು. ಅವರಲ್ಲಿ ಅನೇಕರು ಹತರಾದರು. ಕೆಲವರು ಮಾತ್ರ ತಮ್ಮ ಸ್ವಾಮಿಯ ರಕ್ಷಣೆಗಾಗಿ ಓಡಿಬಂದು ಮಹಾರಾಷ್ಟ್ರರ ಮೇಲೆ ಬಿದ್ದರು. ಆ ಮನೆಯು ಭಯಂಕರವಾದ ಕೂಗುಗಳಿಂದ ತುಂಬಿಹೋಯಿತು. ದೀಪಗಳನ್ನಾರಿಸಿ ಮಾವಳರು ಮುಸಲ್ಮಾನರೊಡನೆ ಅಂಧಕಾರದಲ್ಲಿ ಹೋರಾಡುತ್ತಿದ್ದರು. ಜಯಿಸುವವರ ಉಲ್ಲಾಸ ಧ್ವನಿಯಿಂದಲೂ ಬಾಗಿಲುಗಳ ಝುಂಝುಣ ನಾದದಿಂದಲೂ ಗಾಯಪಟ್ಟವರ ಆರ್ತನಾದದಿಂದಲೂ ಆ ಮನೆಯು ನಿಬಿಡವಾಗಿದ್ದಿತು. ಆ ಸಮಯದಲ್ಲಿ ದೊಡ್ಡ ಈಟಿಯನ್ನು ಕೈಯಲ್ಲಿ ಹಿಡಿದುಕೊಂಡು "ಹರಹರ ಮಹಾದೇವ" ಎಂದು ಕೂಗುತ್ತಾ ಮಾವಳರ ಮಧ್ಯಕ್ಕೆ ಒಬ್ಬನು ಧುಮಿಕಿದನು. ಮೊಗಲಾಯರ ಸೇನೆಗಳು ದಿಕ್ಕುಪಾಲಾದವು. ಭಯಂಕರವಾದ ಈಟಿಯ ಪೆಟ್ಟಿನಿಂದ ಬಾಗಿಲನ್ನು ಒಡೆದು ಹಾಕಿ ಶಿವಾಜಿಯು ಷಯಿಸ್ತಾಖಾನನು ಮಲಗುವ ಮನೆಯನ್ನು ಸೇರಿದನು.

ಸೇನಾಪತಿಯನ್ನು ರಕ್ಷಿಸುವುದಕ್ಕಾಗಿ ಮೊಗಲಾಯಿ ಭಟನು ಶಿವಾಜಿಗೆ ಎದು ರಾದನು. ಆಗ ಒಂದವನು ಚಾಂದಖಾನನ ಮಗನಾದ ಷಂಷೇರ್‌ಖಾನನು ! ತನ್ನ ತಂದೆಯು ಅವಮಾನಿತನಾಗಿ ಪ್ರಾಣವನ್ನು ಕಳೆದುಕೊಂಡರೂ ಷಂಷೇರನು ತನ್ನ ಅಧಿ ಕಾರಿಯನ್ನು ಕಾಪಾಡಲು ಸಿದ್ಧನಾದನು. ಶಿವಾಜಿಯು ಅವನನ್ನು ಕೂಗಿ— "ಯುವಕನೇ ! ನಿನ್ನ ತಂದೆಯನ್ನು ಸಂಹರಿಸಿದ ಕತ್ತಿಯು ಇನ್ನೂ ನನ್ನ ಕೈಯಲ್ಲಿದೆ. ನಿನ್ನನ್ನೂ ಕೊಲ್ಲನೆ ಬಿಡೆನು. ದಾರಿಯನ್ನು ಬಿಡು" ಎಂದು ಕೂಗಿದನು.

ಷಂಷೇರುಖಾನನು ಪ್ರತ್ಯುತ್ತರವನ್ನು ಕೊಡಲಿಲ್ಲ ಅವನ ಕಣ್ಣುಗಳು ಕೆಂಡವನ್ನು ಸುರಿಸುತ್ತಿದ್ದುವು. ತಾನು ಈ ಕಷ್ಟದಿಂದ ಪಾರಾಗುವುದಕ್ಕೆ ಮೊದಲೇ ಶಿವಾಜಿಯು ಮಸ್ತಕದ ಮೇಲೆ ಥಳಥಳನೆ ಹೊಳೆಯುತ್ತಿದ್ದ ಷಂಷೇರನ ಖಡ್ಗವು ಇಳಿವುದರಲ್ಲಿ ದ್ದಿತು. ಶಿವಾಜಿಯು ಪ್ರಾಣದಮೇಲಿನ ಆಶೆಯನ್ನು ತೊರೆದು, ಕಣ್ಣುಗಳನ್ನು ಮುಚ್ಚಿ ಭವಾನೀ ನಾಮವನ್ನುಚ್ಚರಿಸಿ. ಪುನಃ ಕಣ್ಣುಗಳನ್ನು ತೆರೆಯುವಷ್ಟರಲ್ಲಿ ಷಂಷೇರನು ನೆಲದಮೇಲೆ ಬಿದ್ದಿದ್ದನು. ಏನೆಂದು ಹಿಂದಿರುಗಿ ನೋಡಲು ರಘುನಾಥನು ಪ್ರತ್ಯಕ್ಷನಾದನು. ತನ್ನ ಪ್ರಭುವನ್ನು ಕೊಲ್ಲಬೇಕೆಂದಿದ್ದ ತುರುಕನನ್ನು ಕತ್ತಿಯ ಏಟಿನಿಂದ ನೆಲಕ್ಕುರುಳಿಸಿದವನೇ ಇವನು.

"ರಘುನಾಥಾ ! ಈ ಸಂಗತಿಯನ್ನು ಎಂದಿಗೂ ಮರೆಯೆನು" ಎಂದು ಹೇಳಿ ಶಿವಾಜಿಯು ಮುಂದಕ್ಕೆ ನಡೆದನು. ಈ ನಡುವೆ ಗವಾಕ್ಷದ್ವಾರಕ ಕಂಬಿಯ ಸಹಾಯದಿಂದ ಷಯಿಸ್ತಾಖಾನನು ಅಲ್ಲಿಂದ ಧುಮುಕಿ ಓಡಿದನು. ಅಷ್ಟರಲ್ಲಿ ಮಾವ ಳರು ಗವಾಕ್ಷದ ಬಳಿಗೆ ಓಡಿಹೋಗಿ ಧುಮುಕುತ್ತಿದ್ದವನ ಕೈಬೆರಳನ್ನು ಕತ್ತಿಯಿಂದ ಕತ್ತರಿಸಿದರು. ಆದರೆ ಖಾನನು ಹಿಂತಿರುಗಿ ನೋಡದೆ ಕಾಲಿಗೆ ಬುದ್ಧಿಹೇಳಿದನು. ಅವನ ಮಗನಾದ ಅಬುಲ್‌ಫತಲೇಖಾನನು ಸೈನಿಕರ ಜತೆಯಲ್ಲಿಯೇ ಹತನಾದನು. ಮನೆಯೆಲ್ಲವೂ ರಕ್ತಮಯವಾಗಿದ್ದಿತು ಅಲ್ಲಲ್ಲಿ, ಕಾವಲುಗಾರರ ಮೃತದೇಹಗಳು ಬಿದ್ದಿದ್ದುವು. ಒಬ್ಬನ ಮುಂಡವೂ ಇನ್ನೊಬ್ಬನ ಕೈಗಳೂ ಮತ್ತೊಬ್ಬನ ಕಾಲೂ ರಕ್ತಪ್ರವಾಹವೂ ಬೆಳಕಿನಲ್ಲಿ ಭಯಂಕರವಾಗಿ ಕಾಣುತಿದ್ದುವು ಮೊಗಲಾಯರನ್ನು ಸಂಹರಿಸುವುದಕ್ಕೆ ನಾಲ್ಕು ದಿಕ್ಕುಗಳಿಗೂ ಮಾವಳರು ಓಡಿಹೋಗುತ್ತಿದ್ದರು. ಯುದ್ಧದಲ್ಲಿ ಜಯಹೊಂದಿದ ತರುವಾಯ ಶಿವಾಜಿಯು ಕೊಲೆಮಾಡುತ್ತಿರುವುದನ್ನು ಒಪ್ಪಲಿಲ್ಲ. ಎಲ್ಲಿಯ ವರೆಗೆ ಅಗತ್ಯವೋ ಅಲ್ಲಿಯ ವರೆಗೆ ತನ್ನ ಕೃತ್ಯವನ್ನು ನೆರವೇರಿಸ

ಬಹುದು. ಆದುದರಿಂದ ಶಿವಾಜಿಯು ಮೊಗಲ ಸೈನಿಕರನ್ನು ನೋಡಿ, “ಓಡಿ ಹೋಗುವ ಷಾಯಿಸ್ತಾಖಾನನು ಇನ್ನು ನಮ್ಮೊಡನೆ ಯುದ್ಧಮಾಡನು. ಇನ್ನು ನಾವು ಸಿಂಹಗಡಕ್ಕೆ ಹೊರಡುವ” ಎಂದು ಎಲ್ಲರನ್ನೂ ಕೂಗಿ ಕರೆಸಿಕೊಂಡನು.

ಆ ಕತ್ತಲೆಯ ರಾತ್ರಿ, ಆದರೂ ಶಿವಾಜಿಯು ಅನಾಯಾಸವಾಗಿ ಪೂನಾನಗರವನ್ನು ಬಿಟ್ಟು ಸಿಂಹಗಡ ದುರ್ಗಕ್ಕೆ ವೇಗವಾಗಿ ಪ್ರಯಾಣಮಾಡುತ್ತಿದ್ದನು. ಸುಮಾರು ಎರಡು ಮೈಲುಗಳು ಬಂದ ತರುವಾಯ ಭಟರು ದೀವಟಿಗೆಗಳನ್ನು ಹಚ್ಚಿದರು. ಅದರ ಸಹಾಯದಿಂದ ಅವರು ಸುರಕ್ಷಿತವಾಗಿ ಪ್ರಯಾಣಮಾಡಿದರು.

ಮರುದಿನ ಪ್ರಾತಃಕಾಲ ಮೊಗಲ ಸೈನಿಕರು ಕೋಪಗೊಂಡು ಸಿಂಹಗಡ ದುರ್ಗವನ್ನು ಮುತ್ತಲು ಪ್ರಯತ್ನಿಸಿದರು. ಆದರೆ ಕೋಟೆಯಿಂದ ಬೀಳುವ ಫಿರಂಗಿಗಳ ಹೊಡೆತವು ಹೆಚ್ಚು; ಅದರಿಂದ ಅವರು ಚದರಿ ಓಡಿಹೋದರು. ಕರ್ತಾಜಿ ಗಜ್ಜರನು ತುರುಕರ ಸೈನ್ಯವನ್ನು ಬಹುದೂರ ಓಡಿಸಿ ಹಿಂತಿರುಗಿದನು.

ಕೆಲವು ತೊಂದರೆಗಳಿಂದ ಸಾಹಸಿಗಳಾದ ಅವರಿಗೆ ಯುದ್ಧದಲ್ಲಿ ಅಭಿವೃದ್ಧಿಯಾಯಿತು. ಆದರೆ ಷಯಿಸ್ತಾಖಾನನು ಅಂಥವನಲ್ಲ. ಅವನು ಚಕ್ರವರ್ತಿಯ ಹೆಸರಿನಲ್ಲಿ ಪತ್ರವನ್ನು ಬರೆದನು. ಅದರಲ್ಲಿ ತನ್ನ ಸೈನಿಕರನ್ನು ಮನಬಂದಂತೆ ಬೈದು ಜಸವಂತಸಿಂಗನು ದ್ರೋಹಿಯೆಂದು ನಿಂದಿಸಿದ್ದನು. ಜಸವಂತನು ಶತೃಗಳಿಂದ ಲಂಚವನ್ನು ತೆಗೆದುಕೊಂಡಿರುವನೆಂದೂ ಸೂಚಿಸಿದ್ದನು. ಇಬ್ಬರೂ ಕೈಲಾಗದವರೆಂದು ಭಾವಿಸಿ, ಔರಂಗಜೇಬನು ಮೋಜೀಂ ಎಂಬವನನ್ನು ದಕ್ಷಿಣದೇಶಕ್ಕೆ ಜಯಸಿಂಹನೊಡನೆ ಕಳುಹಿಸಿದನು.

ಇದಾದ ಒಂದು ವರ್ಷದವರೆಗೆ ಮುಖ್ಯಗಳಾದ ಯುದ್ಧಗಳೇನೂ ನಡೆಯಲಿಲ್ಲ. ೧೬೬೪ರಲ್ಲಿ ಷಾಹಜಿಯು ಮೃತಪಟ್ಟನು. ಶಿವಾಜಿಯು ರಾಜಗಡ ದುರ್ಗಕ್ಕೆ ಹೋಗಿ ರಾಜನೆಂಬ ಹೆಸರನ್ನು ಹೊಂದಿ, ನಾಣ್ಯಗಳನ್ನು ಮುದ್ರಿಸಿದನು.

---

## ಎಂಟನೆಯ ಪ್ರಕರಣ.

---

### (ರಾಜಗಡಕ್ಕೆ ಪ್ರಯಾಣ.)

ಯಾವ ದಿನ ರಘುನಾಥಸಿಂಹನು ತೋರಣ ದುರ್ಗಕ್ಕೆ ಬಂದನೋ ಯಾವ ದಿವಸ ಅವನ ಮನಸ್ಸು ಚಂಚಲವಾಯಿತೋ ಅದೇ ದಿನವೇ ಒಬ್ಬ ಬಾಲೆಯ ಮನಸ್ಸು

ಕೂಡ ಪ್ರಥಮಾನುರಾಗದಲ್ಲಿ ಮುಳುಗಿ ತೇಲಿತು. ಸಂಧ್ಯಾಕಾಲದಲ್ಲಿ ತೋಟದಲ್ಲಿ ಸ್ವದೇಶೀಯ ಯೋಧನನ್ನು ನೋಡಿ ಸರಳಬಾಲೆಯು ಆಶ್ಚರ್ಯಹೊಂದಿ ಮನೆಗೆ ಹೋದಳು. ರಾತ್ರಿ ಆವನಿಗೆ ಸರಳೆಯು ಊಟಕ್ಕೆ ಬಡಿಸಿ, ಒಂದು ಪಾರ್ಶ್ವದಲ್ಲಿ ನಿಂತು ಆತನನ್ನು ನೋಡುತ್ತಿದ್ದಳು. ನಾಲ್ಕು ಕಣ್ಣುಗಳೂ ಸೇರಿರುವಾಗ ಅವಳು ನಾಚಿಕೆಯಿಂದ ತಲೆಯನ್ನು ಒಗ್ಗಿಸಿ ಹೊರಹೇರಟು ಹೋದಳು.

ಹೊರಹೊರಟು ಬಂದರೂ ಅವಳ ಮನಸ್ಸಿನಲ್ಲಿ ಒಂದು ನೂತನವೃತ್ತಿಯು ಹುಟ್ಟಿತು. ರಘುನಾಥನು ಅವಳನ್ನು ಆತುರದಿಂದ ನೋಡುವುದೇಕೆ ? ತನ್ನ ದೇಶ ದಲ್ಲಿ ಹುಟ್ಟಿದವಳೆಂದೇ ? ಅಥವಾ ಬೇರೆ ಯೋಚನೆಯಿಂದಲೇ ?

ಮರುದಿನ ಪ್ರಾತಃಕಾಲ ಸರಳೆಯು ಅವನನ್ನು ನೋಡಿದಳು. ತರುವಾಯ ರಘುನಾಥನ ಮಧುರವಾಕ್ಯಗಳನ್ನು ಕೇಳಿ ಅವಳ ಗುಂಡಿಗೆಯು ಝಲ್ಲೆಂದಿತು. ಅವನು ಕಂಠದಲ್ಲಿ ಹಾರವನ್ನು ಹಾಕಿದಾಗ ಶರೀರವು ಪುಲಕಿತವಾಯಿತು. ಸಂತೋ ಷವು ಹೆಚ್ಚಿತು. ಆತನು ತನ್ನಿಂದ ಅಪ್ಪಣೆ ಪಡೆದು ಅಶ್ವಾರೂಢನಾಗಿ ಹೋಗುತ್ತಿ ರಲು ಸರಳೆಯು ಕಿಟಕಿಯ ಬಳಿ ನಿಂತು ಅವನು ಹೋಗುತಿದ್ದ ದಾರಿಯನ್ನೇ ನೋಡು ತ್ತಿದ್ದಳು

ಬಹಳ ಹೊತ್ತಿನವರೆಗೂ ಅವಳು ಕಿಟಕಿಯ ಬಳಿ ನಿಂತಿದ್ದಳು ಕುದುರೆಯೂ ಸವಾರನೂ ಕಾಣಲಿಲ್ಲ. ಎಷ್ಟೋ ಹೊತ್ತಾಯಿತು. ಆದರೂ ಅವಳ ದೃಷ್ಟಿಯು ಆ ಮಾರ್ಗಾಭಿಮುಖವಾಗಿಯೇ ಇದ್ದಿತು. ಬೆಟ್ಟಗಳು ಮರ್ಮರಧ್ವನಿಯಿಂದ ಪ್ರವಹಿಸುತ್ತಿದ್ದವು. ಸಮೀಪದಲ್ಲಿ ಗ್ರಾಮದ ಕುಟೀರಗಳು ಕಂಡುಬರುತ್ತಿದ್ದುವು. ಸಸ್ಯಗಳು ಆನಂದವನ್ನುಂಟುಮಾಡುತ್ತಿದ್ದುವು ಬಾಲಸೂರ್ಯನು ತನ್ನ ಪ್ರಭಾ ತರಂಗಗಳನ್ನು ಮನೆಗಳ ಮೇಲೆ ಪ್ರಸರಿಸುತ್ತಿದ್ದನು. ಆದರೆ ಸರಳಬಾಲೆಯು ಈ ದೃಶ್ಯವಾವುದನ್ನೂ ನೋಡುತ್ತಿರಲಿಲ್ಲ ಅವಳ ಅಂತರಂಗವು ಎಲ್ಲಿಯೋ ಸಂಚರಿಸು ತ್ತಿದ್ದಿತು.

ಸರಳಬಾಲೆಯು ಆದಿನವೆಲ್ಲಾ ಅನ್ಯಮನಸ್ಕಳಾಗಿದ್ದಳು. ಸಾಯಂಕಾಲ ತಂದೆಯು ಊಟಮಾಡುವಾಗಲೂ ಸಮೀಪದಲ್ಲಿ ಕುಳಿತಿದ್ದಳು. ತಂದೆಗೆ ತಾನೇ ಹಾಸಿಗೆ ಹಾಸಿದಳು. ಅನಂತರ ಅವಳು ತನ್ನ ಮಲಗುವ ಮನೆಗೆ ಹೋಗಿ ಕಿಟಕಿ

ಯಲ್ಲಿ ಕುಳಿತುಕೊಂಡು ಬೆಳದಿಂಗಳನ್ನು ನೋಡುತ್ತಿದ್ದಳು. ಸರಳೆಯ ಪ್ರಕೃತಿಯು ಹೀಗೆ ಕ್ಷಣಕ್ಷಣಕ್ಕೂ ಪರಿವರ್ತಿತವಾಗುತ್ತಿದ್ದಿತು.

ಜನಾರ್ದನನು ಸರಳಹೃದಯನು. ಅವನು ಹಗಲು ಶಾಸ್ತ್ರಾಲೋಚನೆಯಲ್ಲಿಯೂ ದೇವಿಯ ಪೂಜೆಯಲ್ಲಿಯೂ ಆಸಕ್ತನಾಗಿರುತ್ತಿದ್ದನು. ಉದಯಾಸ್ತಮಯಗಳಲ್ಲಿ ಖಿಲ್ಲೇದಾರನನ್ನು ನೋಡಲು ಹೋಗುತ್ತಿದ್ದನು. ಒಂದೊಂದು ಸಾರಿ ಮನೆಯಲ್ಲಿಯೇ ಇರುತ್ತಿದ್ದನು. ಸರಳಬಾಲೆಯು ಭೋಜನದ ಸಮಯದಲ್ಲಿ ಇದಿರಿಗೆ ಇಲ್ಲದೆಹೋದರೆ ಸರಿಯಾಗಿ ಊಟ ಮಾಡನು. ವಿರಾಮವಾದಾಗ ರಾತ್ರಿಯವೇಳೆ ಜನಾರ್ದನನು ಸರಳಬಾಲೆಗೆ ಕಥೆಗಳನ್ನು ಹೇಳುತ್ತಿದ್ದನು. ಆತನು ನಿತ್ಯಕೃತ್ಯಗಳಲ್ಲಿರುವಾಗ ಬಾಲೆಯ ಈ ನೂತನ ಭಾವಗಳನ್ನು ವಯೋವೃದ್ಧನಾದಾತನು ಹೇಗೆ ತಿಳಿಯಬಲ್ಲನು ?

ಬಾಲೆಯ ಮನಸ್ಸಿನಲ್ಲಿ ಉಂಟಾದ ಯೋಚನೆ ಬಹು ದಿನ ಸ್ಥಾಯಿಯಾಗಿರದು. ಮೂರು ನಾಲ್ಕು ದಿನಗಳಲ್ಲಿ ಉದ್ರೇಕವು ತಗ್ಗಿ ಹೋದಂತೆ ಕಂಡು ಬಂದಿತಾದರೂ ನಾರಿಯ ಹೃದಯದಿಂದ ಈ ರೀತಿಯಾದ ಚಿಂತನೆಯು ಹೆಸರಿಲ್ಲದೆ ಹೋಗದಲ್ಲವೆ ? ಆಡಿಗಡಿಗೆ ಆ ಯುವಕನ ಭಾವಚಿತ್ರವು ಅವಳ ಹೃತ್ಪಟದಲ್ಲಿ ಮೆರೆಯುತ್ತಲಿದ್ದಿತು. ಮನೆಯಲ್ಲಿ ಅವಳೊಬ್ಬಳೇ ! ಜನಾರ್ಧನನ ಹೊರತು ಅವಳನ್ನು ಮಾತನಾಡಿಸುವರೇ ಇಲ್ಲ. ಯೌವನಪ್ರಾರಂಭದಲ್ಲಿ ಅವನ ಆಕೃತಿಯೇ ಅಡಿಗಡಿಗೆ ಅವಳ ಕಣ್ಣಿದಿರಿಗೆ ಗೋಚರವಾಗುತ್ತಿದ್ದಿತು.

ಕಲ್ಪನಾ ಶಕ್ತಿಯು ವಂಚಿಸುವ ಸ್ವಭಾವವುಳ್ಳದು. ಸರಳ ಬಾಲೆಯು ತಂದೆಯ ಬಳಿಯಲ್ಲಿ ಆರಾಮದಲ್ಲಿ ವಿಹರಿಸುತ್ತಿದ್ದರೂ ಕಲ್ಪನೆಯು ಅವಳ ಹೃದಯದಲ್ಲಿ ಕುದಿಯುತ್ತಿದ್ದಿತು. ಆ ತರುಣವೀರನು ಯುದ್ಧಾಂಗಣದಲ್ಲಿಯೇ ವಿಹರಿಸುತ್ತ ಮೃಗಗಳನ್ನು ಹಿಡಿದುಕೊಳ್ಳುತ್ತಿರುವಂತೆಯೂ ಶತ್ರುಗಳನ್ನು ನಾಶಮಾಡುತ್ತಿರುವಂತೆಯೂ ಕೀರ್ತಿ ಪ್ರತಿಷ್ಠೆಗಳನ್ನು ಸಂಪಾದಿಸುತ್ತಿರುವಂತೆಯೂ ಸರಳಬಾಲೆಗೆ ತೋರುತ್ತಿದ್ದಿತು. ಸರಳಬಾಲೆಯ ವಿಷಯವಾಗಿ ರಘುನಾಥನು ಎಂದಾದರೂ ಯೋಚಿಸುತ್ತಿರುವನೆ ? ಪುರುಷನ ಚಿತ್ತವು ಸರ್ವದಾ ಕಾರ್ಯಾಸಕ್ತವಾಗಿರುವುದು ಜೀವಿತವು ಆಶಾಪೂರ್ಣವು. ಕೋರಿಕೆಯು ಸಫಲವಾಗದಿದ್ದರೆ,-ಪುರುಷನು ಯಾವಾಗಲೂ ಯಾವುದೋ ಒಂದು ಕೆಲಸದಲ್ಲಿ ನಿರತನಾಗಿರುವನು. ಅಂತಹ ಮನುಷ್ಯನ

ಹೃದಯವು ಒಂದೇ ವೃತ್ತಿಯಿಂದ ನಿಶ್ಚಲವಾಗಿರುವುದೇ ಹೇಗೆ ? ಹಾಗಾದ ಆ ಮಾಯಾವಿನಿಯಾದ ಆಶಾದೇವಿಯು ಸರಳೆಯ ಕಿವಿಯಲ್ಲಿ ಆ ಪುರುಷನು ನಿನ್ನ ವಿಷಯವನ್ನು ಅಡಿಗಡಿಗೆ ಚಿಂತಿಸುತ್ತಿರುವನು.'' ಎಂದು ಹೇಳುತ್ತಿರುವುದು. ಪುನಃ ಚಿಂತಾದೇವಿಯು ಆವರಿಸಿಕೊಂಡಾಗ,-ಆ ವೀರನು ಈಗಲೂ ತೋರಣದುರ್ಗದ ವೃತ್ತಾಂತವನ್ನು ಸ್ಮರಿಸುತ್ತಿರುವನೆ ? ಈ ವಯಸ್ಸಿನಲ್ಲಿ ಮತ್ತು ಈ ದಿನಗಳಲ್ಲಿ ಅವನ ಮನಸ್ಸು ಚಂಚಲವಾಗದಿರುವುದೆ ? ಅಯ್ಯೋ ನದೀತರಂಗವು ಸುಳಿದಾಡುತ್ತಿರುವುದು. ಆನಂದದಿಂದ ಕುಸುಮವು ನಾಟ್ಯವಾಡುತ್ತಿರುವುದು. ಆದರೆ ಆಶೆಯು ಮಾತ್ರ ನನ್ನ ಕಿವಿಯಲ್ಲಿ ' ಅವನು ಎಂದಾದರೂ ಒಂದು ದಿನ ತೋರಣದುರ್ಗಕ್ಕೆ ಮತ್ತೆ ಬರುವನು.' ಎಂದು ಹೇಳುತ್ತಲಿರುವುದು. ಇದರಿಂದಲೇ ನಾನಾತನ ದರ್ಶನದಲ್ಲಿ ನಿರಾಶಗಳಾಗದೆ ಇರುವೆನು.' ಎಂದು ಚಿಂತಿಸುತ್ತಿದ್ದಳು.

ಆಕಾಶದಲ್ಲಿ ಪ್ರಕಾಶಿಸುವ ಚಂದ್ರನನ್ನು ನೋಡಿದಕೂಡಲೇ ಅವಳ ಅಂತರಂಗದಲ್ಲಿ ಕಲ್ಪನೆಯು ಹೆಚ್ಚುವುದು. ಬಿಳಿಯ ಕುದುರೆಯನ್ನು ಹತ್ತಿ ಒಬ್ಬನು ಪರ್ವತ ಮಾರ್ಗದಲ್ಲಿ ಬರುತ್ತಿರುವಂತೆಯೂ ಗೊಂಚಲುಗೊಂಚಲಾಗಿ ತಲೆಯ ಕೂದಲು ಅವನ ಮುಖವನ್ನು ಸ್ವಲ್ಪ ಮುಚ್ಚಿರುವಂತೆಯೂ ಅವನ ಶಿರಸ್ಸು ಸುವರ್ಣನಿರ್ಮಿತ ಕಿರೀಟದಿಂದ ಒಪ್ಪುತ್ತಿರುವಂತೆಯೂ ಭಾವಿಸುತ್ತಿದ್ದಳು. ಅಷ್ಟರಲ್ಲಿ ಆತನು ದುರ್ಗದೊಳಕ್ಕೆ ಬಂದು ತಾನಿದ್ದ ಮನೆಯಲ್ಲಿ ಊಟಕ್ಕೆ ಕುಳಿತುಕೊಂಡಂತೆಯೂ ತಾನು ಅವನಿಗೆ ಬಡಿಸುತ್ತಿದ್ದಂತೆಯೂ ಬಳಿಕ ತಾನು ಅವನ ಪಾರ್ಶ್ವದಲ್ಲಿ ನಾಚಿಕೆಯಿಂದ ನಿಂತಿದ್ದಂತೆಯೂ ಅವನು ತನ್ನೊಡನೆ ಯುದ್ಧವೃತ್ತಾಂತವನ್ನು ಹೇಳುತ್ತಿದ್ದಂತೆಯೂ ಹೊಳೆಯಿತು. ಕಲ್ಪನೆಗೆ ಮೊದಲಾಯಿತೆಂದರೆ ಅದಕ್ಕೆ ಪಾರವೇ ಇರುವುದಿಲ್ಲ. ಒಂದಾದಮೇಲೊಂದರಂತೆ ಮೇಲೆ ಮೇಲೆ-ತರಂಗತರಂಗವಾಗಿ ಹೊಳೆಯುತ್ತಲೇ ಇರುವುದು. ಹಾಗೆಯೇ ಸರಳೆಯ ಭಾವನಾರಾಜ್ಯದಲ್ಲಿಯೂ ಮತ್ತೊಮ್ಮೆ ಈ ರೀತಿಯಾಗಿ ಭಾಸವಾಯಿತು -ಯುದ್ಧವು ಕಳೆದುಹೋಯಿತು. ಆ ವೀರನು ಸನ್ಮಾನಹೊಂದಿದನು. ದೊಡ್ಡ ಬಿರುದುಗಳನ್ನು ಸಂಪಾದಿಸಿದನು. ಆದರೂ ತನ್ನನ್ನು ಮರೆತುಬಿಡಲಿಲ್ಲ. ಜನಾರ್ಧನನು ಅವನಿಗೆ ಮದುವೆ ಮಾಡಿಕೊಡಲು ಅವನು ಅಂಗೀಕರಿಸಿದನು. ಮನೆಯು ಜನಸಂದಣಿಯಿಂದ ಕೂಡಿದ್ದಿತು. ನಾಲ್ಕುದಿಕ್ಕುಗಳಲ್ಲಿಯೂ ದೀಪಗಳು ಬೆಳಗುತ್ತಿದ್ದುವು. ವಿಧವಿಧ ವಾದ್ಯಗಳು ಮೊಳಗುತ್ತಿದ್ದುವು. ಗಾನವು ಮನೋಹರವಾಗಿದ್ದಿತು. ಇನ್ನೂ ಏನೇನೋ ಶುಭಕಾರ್ಯಕಲಾಪಗಳು ನಡೆಯುತ್ತಲಿದ್ದುವು.

ಆಗ ಇವಳು ಅವಕುಂಠನದೊಡನೆ ರಘುನಾಥನ ಪಕ್ಕದಲ್ಲಿ ಕುಳಿತಿದ್ದಳು. ರಘುನಾಥನು ಇವಳ ಕೈ ಹಿಡಿದಿದ್ದುದರಿಂದ ಮನಸಾಪರಿಸಿದ್ದ ಜೀವಿತೇಶ್ವರನು ಲಭಿಸಿದನೆಂದು ಆನಂದಸಾಗರದಲ್ಲಿ ಮುಳುಗೇಳುತ್ತಿದ್ದಳು.'' ಇದಾದಮೇಲೆ ಮತ್ತೊಂದು ಭಾವನೆ. "ರಘುನಾಥನು ಕೀರ್ತಿಯನ್ನೂ ಸಂಪಾದಿಸಲಿಲ್ಲ; ಬಿರುದುಗಳನ್ನೂ ಪಡೆಯಲಿಲ್ಲ. ಅವನು ದರಿದ್ರನೇ ಹೊರತು ಐಶ್ವರ್ಯವಂತನಲ್ಲ. ಅವನೂ ಸರಳೆಯನ್ನು ಮದುವೆಯಾದನು. ಪರ್ವತ ಪಾದದಲ್ಲಿ ಯಾವ ಹಳ್ಳಿಯು ಕಾಣಲ್ಪಡುತ್ತಿರುವುದೋ, ಅಲ್ಲಿ ಶಾಂತವಾಗಿ ನದಿಯತೀರಪ್ರದೇಶದಲ್ಲಿರುವ ಅನೇಕ ಕುಟೀರಗಳಲ್ಲಿ ಒಂದು ಕುಟೀರವು ಸರಳಬಾಲೆಯದು. ಸಾಯಂಕಾಲದ ಹೊತ್ತಿನಲ್ಲಿ ಸರಳೆಯು ಸ್ವಹಸ್ತದಿಂದ ಅಡಿಗೆಮಾಡಿ ಕುಟೀರದ ಇದಿರಿಗೆ ಕುಳಿತಿದ್ದು ದೂರದಲ್ಲಿರುವ ಹೊಲಗದ್ದೆಗಳ ಕಡೆ ನೋಡುತ್ತಿದ್ದಳು. ಹಗಲೆಲ್ಲ ಕಷ್ಟಪಟ್ಟು ಆಯಾಸಹೊಂದಿದ ಅಜಾನುಬಾಹುವು ಆ ದಿಕ್ಕಿನಿಂದ ಕುಟೀರಕ್ಕೆ ಅಭಿಮುಖನಾಗಿ ಬರುತಿದ್ದನು. ಅವನನ್ನು ನೋಡಿ ಸರಳೆಯ ಮೈಯುಬ್ಬಿತು. ಆ ಪುರುಷನು ಸಮೀಪಕ್ಕೆ ಬಂದು ಒಂದು ಹಾರವನ್ನು ತೆಗೆದು ಅವಳ ಕೊರಳಿಗೆ ಹಾಕಿದನು. ಅದರಿಂದ ಆನಂದಾತಿಶಯಹೊಂದಿದ ಅವಳ ಹೃದಯವು ಅಧೀರವಾಯಿತು. ಶರೀರವು ರೋಮಾಂಚಿತವಾಯಿತು.''

ಈ ಪ್ರಕಾರವಾಗಿ ದಿನವು ಒಂದೊಂದು ಬಗೆಯಾದ ಭಾವನೆಗಳಿಂದ ಸುಖದುಃಖಾನುಭವ ಮಾಡುತ್ತಿದ್ದಂತೆಯೇ ತಿಂಗಳಮೇಲೆ ತಿಂಗಳುಗಳಾಗಿ ವರ್ಷವೂ ಕಳೆದು ಹೋಯಿತು. ಸರಳೆಯ ಕಲ್ಪನಾಪ್ರವಾಹವು ಅಡ್ಡಿಯಿಲ್ಲದೆ ಪ್ರವಹಿಸುತ್ತಲೇ ಇದ್ದಿತು. ರಘುನಾಥನ ಆಕಾರವು ಅವಳ ಹೃತ್ಪಟದಲ್ಲಿ ದೃಢತರವಾಗಿ ಚಿತ್ರಿತವಾಯಿತು. ಇಷ್ಟಾದರೂ ಫಲವೇನು ? ಎಂದರೆ, ಕೇವಲ ನಿರರ್ಥಕವಲ್ಲವೆಂದೂ ಫಲಿಸುವ ಕಾಲವೂ ಬರುವುದೆಂದೂ ಆಶೆಯು ಹೇಳುತ್ತಿದ್ದಿತು.

ಒಂದು ದಿನ ಸಾಯಂಕಾಲ ಅವಳು ಎಂದಿನಂತೆ ಹೂದೋಟದಲ್ಲಿ ವಿಹರಿಸುತ್ತ ನಡುನಡುವೆ ತನ್ನ ರತ್ನ ಹಾರವನ್ನು ನೋಡಿಕೊಳ್ಳುತ್ತ ಏನೋ ಚಿಂತಿಸುತ್ತಿದ್ದಳು. ಅವಳ ಯೌವನವು ಅಭಿವೃದ್ಧಿ ಸ್ಥಿತಿಯಲ್ಲಿದ್ದಿತು. ಈಗ ಅವಳಲ್ಲಿ ಕೆಲಕೆಲವು ಬದಲಾವಣೆಗಳು ಕಾಣುತ್ತಲಿವೆ. ಆಶೆಯ ಪ್ರಭಾವದಿಂದ ಅವಳ ಮುಖಮಂಡಲವು ವಿಶೇಷ ಕಾಂತಿಯುಕ್ತವಾಗಿರುವುದು. ಲಾವಣ್ಯವು ಹೆಚ್ಚುತ್ತಲಿರುವುದು. ರೂಪವತಿಯೂ ಯುವತಿಯೂ ಚಿಂತಾಶೀಲೆಯೂ ಆದ ಸರಳಬಾಲೆಯು–ಈಗ ಬಾಲೆಯಲ್ಲ–

ತಾರುಣ್ಯದಲ್ಲಿ ಪದಾರ್ಪಣಮಾಡಿರುವಳು-ಹೂಗಳನ್ನು ಬಿಡಿಸುತ್ತಲಿದ್ದ ಸಮಯದಲ್ಲಿ, ಒಬ್ಬ ರಾಜಪುತ್ರತರುಣನು ಮಂದಿರದ ಇದಿರಿಗೆ ಕುದುರೆಯಿಂದ ಇಳಿದನು. ಹೂಗಳನ್ನು ಬಿಡಿಸುತ್ತಿದ್ದಂತೆಯೇ ಗಿಡದ ಮರೆಯಲ್ಲಿ ಆತನನ್ನು ಕಂಡು ನಡುಗಿದಳು ; ಕಣ್ಣುಗಳಲ್ಲಿ ಆನಂದಬಾಷ್ಪವು ಹರಿದು ಹೋಯಿತು ಅಧೀರಳಾಗಿ ಕಣ್ಮುಚ್ಚಿದಳು. ರಾಜಪುತ್ರನಿಗೆ ಮತ್ತೆ ಸರಳೆಯ ದರ್ಶನವು ಉಪವನದಲ್ಲಿಯೇ ಸಂಭವವಾಯಿತು. ಯಾವ ದಿನ ಸಂಧ್ಯಾಸಮಯದಲ್ಲಿ ಅವಳನ್ನು ನೋಡಿ ಮೋಹಿತನಾದನೊ, ಪ್ರಾತಸ್ಸಮಯದಲ್ಲಿ ಆ ಪವಿತ್ರವಾದ ಕಂಠದಲ್ಲಿ ಮುಕ್ತಾಹಾರವನ್ನು ಹಾಕಿದನೋ, ಯುದ್ಧಗಳಲ್ಲಿಯೂ ಮನೆಗಳಲ್ಲಿಯೂ ಯಾರ ವಿಷಯಕವಾದ ಚಿಂತೆಯು ತಲೆದೋರುತ್ತಲಿದ್ದಿತೋ, ಸ್ವಪ್ನಗಳಲ್ಲಿ ಲಜ್ಜಾರಹಿತನಾದ ಯಾವ ಮೂರ್ತಿಯು ಕಣ್ಣಿದಿರಿಗೆ ಬರುತ್ತಲಿದ್ದಿತೋ ಅಂತಹ ಮೂರ್ತಿಯನ್ನು ರಘುನಾಥನು ಕಂಡನು. ಕಂಡವನು ಮಾತನಾಡಲಾರದೆ, ಸ್ತಂಭೀಭೂತನಾಗಿ ನಿಂತನು. “ಸುಧಾಕರ ! ಅವರಿಬ್ಬರಮೇಲೆ ಅಮೃತವನ್ನು ವರ್ಷಿಸು. ನಿಶಾಚರನಾದ ನೀನು ಅವರನ್ನು ನೋಡು. ಇಂತಹ ದೃಶ್ಯವನ್ನು ಪ್ರಪಂಚದ ಇನ್ನೊಂದು ಸ್ಥಳದಲ್ಲಿ ಕಾಣಲಿಲ್ಲ ! ಮನಸ್ಸು ನೂತನ ಸಮಾಗಮದಿಂದ ಭೂಲೋಕವನ್ನು ಸ್ವರ್ಗಲೋಕಕ್ಕಿಂತ ಹೆಚ್ಚಾಗಿಮಾಡುತ್ತಿರುವುದು. ಆದುದರಿಂದ ನೀನು ಅವರನ್ನು ನೋಡುವವನಾಗು.” ಸ್ವಲ್ಪ ಹೊತ್ತಾದಮೇಲೆ ಸರಳಬಾಲೆಯು ಮನೆಗೆ ಹೋಗಿ ತಂದೆಗೆ ರಘುನಾಥನ ಆಗಮನ ವಾರ್ತೆಯನ್ನು ತಿಳಿಸಿದಳು ಆತನು ಶಿವಾಜಿಯು ದೂತನನ್ನು ಆದರದಿಂದ ಬರಮಾಡಿಕೊಂಡು ಕುಶಲಪ್ರಶ್ನೆ ಮಾಡಿದನು

ಸಾಯಂಕಾಲ ರಘುನಾಥನು ಜನಾರ್ದನನ ಇದಿರಿಗೆ ಕುಳಿತು ಮಾತನಾಡುತ್ತಾ ಹೀಗೆಂದನು—“ಷಯಿಸ್ತಾಖಾನನು ಪರಾಜಿತನಾಗಿ ಡಿಲ್ಲೀನಗರಕ್ಕೆ ಓಡಿಹೋದನು. ಪ್ರಭುಗಳು ರಾಜರೆಂಬ ಬಿರುದನ್ನು ಹೊಂದಿ ದೇಶಪರಿಪಾಲನೆಯ ವಿಷಯಗಳಲ್ಲಿ ಕಟ್ಟಳೆಗಳನ್ನು ಮಾಡುತ್ತಿರುವರು. ಡಿಲ್ಲೀಬಾದಶಹನು ರಾಜರನ್ನು ಜಯಿಸುವುದಕ್ಕೆ ಅಂಬರ ದೇಶಾಧೀಶನೂ ಮಹಾಪರಾಕ್ರಮಶಾಲಿಯೂ ಆದ ರಾಜಾಜಯಸಿಂಹನನ್ನು ಕಳುಹಿರುವನು ಮಹಾರಾಷ್ಟ್ರ ಪ್ರಭುಗಳು ಚಿಂತಾಮಗ್ನರಾಗಿರುವರು. ಈಗ ಜಯಸಿಂಹನ ಸಂಗಡ ಸಂಧಿಮಾಡಿಕೊಳ್ಳುವ ಯೋಚನೆಯಲ್ಲಿರು

ವನು. ಈ ಕಾರ್ಯವು ನಡೆಯಬೇಕಾದರೆ ಅಂಬಗ ಸಂಸ್ಥಾನದವರೇ ಸಹಾಯಕರು ಶಾಸ್ತ್ರಜ್ಞರಾದ ತಾವು ಮುಖ್ಯವಾಗಿ ಬರಬೇಕು. ನಾನು ನಿಮ್ಮನ್ನು ಕರೆದುಕೊಂಡುಹೋಗಲು ಬಂದೆನು. ಎರಡು ಮೂರು ದಿನಗಳಲ್ಲಿ ತಾವು ರಾಜಗಡ ದುರ್ಗವನ್ನು ಸೇರುವುದು ಮೇಲೆಂದು ಸ್ವಾಮಿಯವರು ಅಪ್ಪಣೆ ಕೊಟ್ಟಿರುವರು.''

ಸರಳೆಯು ಮನೆಯಲ್ಲಿ ಅಡುಗೆ ಮಾಡುತ್ತಿದ್ದಳು. ಈ ಮಾತುಗಳು ಅವಳಿಗೆ ಕೇಳಿಸಿತು. ಜನಾರ್ಧನನು ರಾಜಧಾನಿಗೆ ಹೋಗುವವನೇ ? ರಾಜಾಜ್ಞಾನುಸಾರ ರಘುನಾಥನು ಕರೆದುಕೊಂಡು ಹೋಗಲಿಕ್ಕೆ ಬಂದನೆ ? ಎಂದು ಯೋಚಿಸುತ್ತಿದ್ದಂತೆಯೇ ಅವಳ ಕೈಯಲ್ಲಿದ್ದ ನೀರಿನ ಪಾತ್ರೆಯು ಕೆಳಗೆ ಬಿದ್ದಿತು.

ಈ ಸಮಯದಲ್ಲಿಯೇ ರಘುನಾಥನು ಜನಾರ್ಧನನ ಸಂಗಡ ದೇಶವೃತ್ತಾಂತಗಳನ್ನೂ ತನ್ನ ಕುಲಗೋತ್ರಗಳನ್ನೂ ಹೇಳಿದನು ಜನಾರ್ಧನನು ರಘುನಾಥನು ದೊಡ್ಡವಂಶದವನೆಂದು ತಿಳಿದು ಅವನ ಸೌಂದರ್ಯ, ಶೌರ್ಯ, ವಿನಯಾದಿಗಳಿಗೆ ಸಂತೋಷಪಟ್ಟು ಅವನನ್ನು 'ವತ್ಸಾ' ಎಂದು ಸಂಭೋಧಿಸುತ್ತ ಬಂದನು. ಅಷ್ಟರಲ್ಲಿ ಭೋಜನ ಸಮಯವಾಯಿತು. ವೃದ್ಧನು ಎದ್ದು ರಾಜಪುತ್ರನನ್ನು ಆಲಿಂಗಿಸಿ, 'ವತ್ಸಾ ! ರಘುನಾಥ ! ಇನ್ನು ಭೋಜನಕ್ಕೆ ಏಳು ಈ ದಿನ ನಿನ್ನ ವೃತ್ತಾಂತವನ್ನು ಕೇಳಿ ಸಂತುಷ್ಟನಾದೆನು. ನಿನ್ನ ವಂಶ ನ್ನು ನಾನು ತಿಳಿದಿರಲಿಲ್ಲ. ನಿನ್ನ ಗುಣವು ವಂಶಗೌರವಕ್ಕೆ ತಕ್ಕಂತೆ ಇದೆ. ಸರಳಬಾಲೆಯನ್ನು ಪುತ್ರಿಯಾಗಿ ಸ್ವೀಕರಿಸಿದ್ದೆನು. ನಿನ್ನನ್ನು ಇಂದು ಪುತ್ರನನ್ನಾಗಿ ಪರಿಗ್ರಹಿಸಿರುವೆನು. ಭಗವದನುಗ್ರಹವಿದ್ದರೆ ಯುದ್ಧವು ಮುಗಿದಮೇಲೆ ಸರಳಕುಮಾರಿಯನ್ನು ನಿನಗೆ ಕೊಟ್ಟು ಮದುವೆ ಮಾಡಿ ನಿಶ್ಚಿಂತೆಯಾಗಿ ಕಾಲಕಳೆಯುವೆನು. ಜಗದೀಶನು ನಿನಗೂ ಸರಳಕುಮಾರಿಗೂ ಸುಖವನ್ನು ಕೊಡಲಿ !'' ಎಂದು ಹೇಳಿದನು.

ಈ ಮಾತುಗಳನ್ನು ಕೇಳುತ್ತಿದ್ದಂತೆಯೇ ರಘುನಾಥನ ಕಣ್ಣುಗಳಲ್ಲಿ ಆನಂದ ಬಾಷ್ಪವು ಸುರಿದಿತು. ಸಂತೋಷದಿಂದ ಪುಳುಕಿತಗಾತ್ರನಾಗಿ ರಘುನಾಥನು ಜನಾರ್ಧನನ ಕಾಲುಗಳ ಮೇಲೆಬಿದ್ದು "ತಾತಾ ! ಈ ದರಿದ್ರ ಸೈನಿಕನಿಗೆ ನಿಮ್ಮ ಕೋರಿಕೆಯು ಸಫಲವಾಗುವಂತೆ ಆಶೀರ್ವದಿಸಿರಿ, ರಘುನಾಥನು ಹವಾಲ್ದಾರನು. ಅವನಿಗೆ ಊರಹೆಸರಿಲ್ಲ, ಹಣವಿಲ್ಲ, ಅಧಿಕಾರವಿಲ್ಲ, ಆದರೆ ಜಗದೀಶ್ವರನ ಅನುಗ್ರಹದಿಂದಲೂ

ತಮ್ಮ ಆಶೀರ್ವಾದದಿಂದಲೂ ರಘುನಾಥನು ಆ ಅಮೂಲ್ಯ ರತ್ನವನ್ನು ಪರಿಗ್ರಹಿಸಲು ಅರ್ಹನಾಗಬೇಕೆಂದು ಪ್ರಯತ್ನಿಸುತ್ತಿರುವನು.'' ಎಂದು ಹೇಳಿದನು. ಸಂತೋಷವಾದ ಆ ಮಾತುಗಳು ಸರಳೆಯ ಕಿವಿಗೆ ಬಿದ್ದುವು. ಗಾಳಿಯಿಂದ ಅಲ್ಲಾಡಿಸಲ್ಪಟ್ಟ ಎಲೆಯಂತೆ ಅವಳು ನಡುಗಹತ್ತಿದಳು.

ಆ ದಿನ ರಘುನಾಥನು ಹೊಟ್ಟೆತುಂಬ ಅನ್ನವನ್ನು ತಿನ್ನಲಿಲ್ಲ. ಸರಳೆಯೂ ಸರಿಯಾಗಿ ಬಡಿಸದೆ ಹೋದಳು.

ಪ್ರಯಾಣಸನ್ನಾಹವು ಪೂರ್ಣವಾಗಲು ಐದು ದಿನಗಳಾದುವು. ರಘುನಾಥನು ಜನಾರ್ಧನನ ಮನೆಯಲ್ಲಿಯೇ ಇದ್ದನು. ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಹೂದೋಟದಲ್ಲಿ ಸರಳೆಯು ಅವನನ್ನು ನೋಡುತ್ತಲಿದ್ದಳು. ಅವಳ ಕೋಮಲ ಹಸ್ತದಿಂದ ಬಡಿಸಿದ ಆಹಾರವನ್ನು ಅವನು ಸಂತೋಷದಿಂದ ಊಟಮಾಡುತ್ತಿದ್ದನು. ಆ ಐದಾರು ದಿನಗಳಲ್ಲಿ ಒಂದು ಸಾರಿಯಾದರೂ ಸಾಹಸಮಾಡಿ ಅವಳೊಡನೆ ಮಾತನಾಡಲಿಲ್ಲ. ಅವಳನ್ನು ನೋಡುತ್ತಲೇ ಅವನ ಗುಂಡಿಗೆಯು ತಟತಟನೆ ಬಡಿದುಕೊಳ್ಳುತ್ತಿದ್ದಿತು. ಸರಳೆಯು ಅವನನ್ನು ನೋಡುತ್ತಲೇ ಮೇಲಿನ ಮುಸುಕನ್ನು ಮುಂದಕ್ಕೆ ಎಳೆದುಕೊಂಡು ಹೊರಟು ಹೋಗುತ್ತಿರುವಳು.

ತೋರಣದುರ್ಗದಿಂದ ರಾಜಗಢದುರ್ಗಕ್ಕೆ ಪ್ರಯಾಣಮಾಡುತ್ತಿದ್ದ ಸರಳೆಯ ಮೇನಾದ ಹಿಂದೆ ರಘುನಾಥನು ಕುದುರೆಯನ್ನೇರಿ ಬರುತ್ತಿದ್ದನು. ದುರ್ಗಮಾರ್ಗದಲ್ಲಿಯಾಗಲಿ, ಗಿಡಗಳಿಲ್ಲದ ಮೈದಾನದಲ್ಲಿಯಾಗಲಿ, ತನ್ನ ಆಯಾಸವನ್ನು ತೋರ್ಪಡಿಸಲಿಲ್ಲ. ರಾತ್ರಿಯಲ್ಲಿ ಸರಳೆಯು ನಿದ್ರಿಸುವ ಮನೆಯ ಪಕ್ಕದಲ್ಲಿಯೇ ಖಡ್ಗಹಸ್ತನಾಗಿ ಕಾವಲಿರುತ್ತಿದ್ದನು. ಸ್ತ್ರೀಯಾದವಳು ಈ ಸಂಗತಿಯನ್ನು ಗ್ರಹಿಸದಿರಳು. ಪುರುಷನ ಪರಿಚಯ, ಆಗ್ರಹ, ಜಾಗ್ರತೆ—ಮೊದಲಾದುವು ಹೆಂಗಸರ ದೃಷ್ಟಿಗೆ ಮರೆಯಾಗಿರವು. ಸರಳೆಯು ಶಿಬಿರದಲ್ಲಿದ್ದು ಈ ವಿಷಯವನ್ನು ತಿಳಿಯುತ್ತಿದ್ದಳು. ಆಗ ಅವಳ ಕಣ್ಣುಗಳು ಆನಂದಬಾಷ್ಪದಿಂದ ತುಂಬಿಹೋಗುತ್ತಲಿದ್ದುವು.

ಸರಳೆಯು ಆ ಯೋಧನಿಗೆ ಭೋಜನಕ್ಕಿಡುವ ಸಮಯದಲ್ಲಿ ಮೌನಾವಲಂಬಿಯಾದ ಅವನನ್ನು ನೋಡಿ ಮುಖವನ್ನು ಬಗ್ಗಿಸುತ್ತಿದ್ದಳು. ಪದಾರ್ಥಗಳನ್ನು ಹೆಚ್ಚಾಗಿ ಬಡಿಸದೆ ಹೋದಳು. ಪ್ರಯಾಣಮಾಡುತ್ತಿರುವಾಗ ತನ್ನ ಹಿಂದೆಯೇ ಬರುತ್ತಲಿದ್ದ ಆತನನ್ನು ತದೇಕ ದೃಷ್ಟಿಯಿಂದ ನೋಡುತ್ತಲಿದ್ದಳು.

ಈ ರೀತಿಯಾಗಿ ಪ್ರಯಾಣಮಾಡುತ್ತ ಅವರು ಒಂದು ದಿನ ಸಾಯಂಕಾಲ ರಾಜಗಡ ದುರ್ಗವನ್ನು ಸಮೀಪಿಸಿದರು. ಜನಾರ್ಧನನು ಪರ್ವತದ ಬುಡದಲ್ಲಿರುವ ಒಂದು ಗ್ರಾಮದಲ್ಲಿಳಿದು 'ಅನುಜ್ಞೆಯಾದರೆ ದುರ್ಗದೊಳಗೆ ಪ್ರವೇಶಿಸುವೆವು' ಎಂದು ಮಹಾರಾಷ್ಟ್ರಾಧೀಶನಿಗೆ ಹೇಳಿಕಳುಹಿದನು.

ಆ ದಿನ ರಾತ್ರಿ ಊಟಕ್ಕೆ ಸಿದ್ಧಪಡಿಸಲು ಸ್ವಲ್ಪ ಹೊತ್ತಾಯಿತು. ಭೋಜನಾನಂತರ ರಘುನಾಥನು ಎಂದಿನಂತೆ ಮನೆಯಿಂದ ಹೊರಹೊರಡದೆ ಏನೋ ಕೆಲಸವಿರುವವನಂತೆ ಪಾಕಶಾಲೆಯಲ್ಲಿ ಅತ್ತಿತ್ತ ತಿರುಗುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಸರಳಬಾಲೆಯ ಸಮೀಪಕ್ಕೆ ಹೋಗಿ—'ದೇವಿ! ಇನ್ನು ನನಗೆ ಅಪ್ಪಣೆಯನ್ನು ಕೊಡಬೇಕು' ಎಂದು ಕೇಳಿದನು.

ಬಾಯಾರಿದವನಿಗೆ ಅಮೃತವರ್ಷಧಾರೆಯಂತೆ ರಘುನಾಥನು ಆಡಿದ ಮಾತುಗಳು ಸರಳಬಾಲೆಗೆ ಅಮೃತಪ್ರಾಯವಾದುವು. ಲಜ್ಜೆಯಿಂದ ಅವಳು ಎದ್ದು ನಿಂತುಕೊಂಡಳು. ರಘುನಾಥನು ಪುನಃ ಅವಳೊಡನೆ ಮತ್ತೆ—'ದೇವಿ! ಅಪ್ಪಣೆಕೊಡಬೇಕು. ನೀವು ನಾಳೆ ರಾಜನ ಅರಮನೆಗೆ ಹೋಗುವಿರಿ. ಈ ದರಿದ್ರಸೈನಿಕನೂ ಮರಳಿ ತನ್ನ ಕೆಲಸಕ್ಕೆ ಹೋಗುವನು' ಎಂದು ವ್ಯಾಕುಲಿತನಾಗಿ ಹೇಳಿದನು.

ಈ ವೇಳೆಯಲ್ಲಿ ಅವಳು ನಾಚಿಕೆಯನ್ನು ಬಿಟ್ಟು ಕಣ್ಣೀರನ್ನು ಒರಸಿಕೊಂಡು ನಾರೀಜನರಂಜಿತವಾದ ಮಮತೆಯಿಂದ—'ತಾವು ನಮಗಾಗಿ ಪಟ್ಟ ಪ್ರಯಾಸಕ್ಕೆ ಪ್ರತಿಫಲವಾಗಿ ಭಗವಂತನು ತಮಗೆ ಯುದ್ಧದಲ್ಲಿ ಜಯವನ್ನುಂಟುಮಾಡಿ, ತಮ್ಮ ಸಂಕಲ್ಪವನ್ನು ಸಿದ್ಧಿಹೊಂದಿಸಲೆಂದು ಕೋರುವೆನು. ತಮ್ಮ ಉಪಕಾರಕ್ಕೆ ನಾವೇನೂ ಪ್ರತ್ಯುಪಕಾರ ಮಾಡಲಾರೆವು' ಎಂದು ಹೇಳಿದಳು.

“ಪ್ರಭುಗಳ ಅಪ್ಪಣೆಯ ಪ್ರಕಾರ ನಿಮ್ಮನ್ನು ರಾಜಗಡದುರ್ಗಕ್ಕೆ ಸುರಕ್ಷಿತವಾಗಿ ಕರೆದುಕೊಂಡು ಬಂದೆನು. ಇದೇ ನನ್ನ ಪರಮಭಾಗ್ಯವು. ಇದರಲ್ಲಿ ನನ್ನ ಹೆಚ್ಚುಗೆಯೇನೂ ಇಲ್ಲ. ಆದರೂ ಈ ದರಿದ್ರಸೈನಿಕನ ಪರಿಚರ್ಯದಿಂದ ನೀವು ಸಂತೋಷಪಟ್ಟರೆ ಅದೇ ನನಗೆ ಭಾಗ್ಯ. ಈ ದೀನನನ್ನು ಮರೆತು ಹೋಗಬೇಡಿರಿ.” ಎಂದು ರಘುನಾಥನು ವಿನಯದಿಂದ ಹೇಳಿದನು. ಸರಳೆಯು ಅವನ ಆಶೆಯನ್ನು ಗ್ರಹಿಸಿ ಮುಖವನ್ನು ಬಗ್ಗಿಸಿದಳು. ಆಗ ರಘುನಾಥನು ಸಾಹಸದಿಂದ ಹೀಗೆಂದನು—

"ಈ ಒಡಸೈನಿಕನು ದೊಡ್ಡ ಅಕೆಯಿಟ್ಟುಕೊಂಡಿದ್ದರೆ ಕ್ಷಮಿಸಬೇಕು. ನಿಮ್ಮ ತಂದೆಯವರು ನನ್ನನ್ನು ಕೃಪಾದೃಷ್ಟಿಯಿಂದ ನೋಡಿರುವರು. ನೀವು ನನ್ನಲ್ಲಿ ಪ್ರಸನ್ನರಾಗಿರುವಂತೆ ನಂಬಿರುವೆನು. ನನ್ನ ಪ್ರಯತ್ನವು ಫಲಕಾರಿಯಾದರೆ ನನ್ನ ಮನಸ್ಸಿನಲ್ಲಿರುವುದನ್ನು ಯಾವುದಾದರೂ ಒಂದು ದಿನ ತಿಳಿಸುವೆನು. ಅವರೆಗೆ ಈ ದೀನನನ್ನು ಮರೆಯದೆ ತಮ್ಮ ಸ್ಮರಣೆಗೆ ಆಡಿಗಡಿಗೆ ತರುವಿರೆಂದು ಆಶಿಸುವೆನು."

ವಿನೀತಭಾವದಿಂದ ಸರಳೆಯ ಅನುಮತಿಯನ್ನು ಹೊಂದಿ ರಘುನಾಥನು ಆ ಸ್ಥಳವನ್ನು ಬಿಟ್ಟು ನಡೆದನು. ಸರಳೆಯು ಅವನು ನಡೆದ ದಿಕ್ಕನ್ನೇ ನೋಡುತ್ತಿದ್ದಳು. ಅರ್ಧರಾತ್ರಿಯಲ್ಲಿ ನಿಟ್ಟುಸಿರಿಟ್ಟು "ಸೈನಿಕ ಶ್ರೇಷ್ಠನೇ! ನಿರಂತರವೂ ನೀವು ಈ ದಾಸಿಯ ಹೃದಯದಲ್ಲಿ ಮೆರೆಯುತ್ತೀರಿ—ಭಗವಂತನೇ ಸಾಕ್ಷಿ." ಎಂದು ಹೇಳಿಕೊಂಡಳು.

---

## ಒಂಭತ್ತನೆಯ ಪ್ರಕರಣ.

---

### (ರಾಜಾ-ಜಯಸಿಂಹ.)

ಷಯಿಸ್ತಾಖಾನ, ಜಸವಂತಸಿಂಗ ಇವರಿಬ್ಬರೂ ಅಸಮರ್ಥರೆಂದು ತಿಳಿದು ಔರಂಗಜೇಬನು ಅವರನ್ನು ಡಿಲ್ಲಿಗೆ ಕರೆಯಿಸಿದನು. ಅನಂತರ ಜಸವಂತಸಿಂಹನನ್ನೂ ಸುಲ್ತಾನ ಮೋಜೇಂನನ್ನೂ ದಕ್ಷಿಣದೇಶಕ್ಕೆ ಕಳುಹಿದ ವಿಷಯವು ಈ ಮೊದಲೇ ತಿಳಿಯಿಸಲ್ಪಟ್ಟಿರುವುದಷ್ಟೆ? ಅವರಿಂದಲೂ ಆ ಕೆಲಸವು ನೆರವೇರದೆಹೋಗಲು, ಬಾದಶಹನು ಅವರಿಬ್ಬರನ್ನೂ ಒರಮಾಡಿಕೊಂಡು ಜೇರೆಕಡೆಗೆ ಕಳುಹಿ, ಸುಪ್ರಸಿದ್ಧನೂ ಅಂಬರದೇಶಾಧೀಶನೂ ಆದ ಜಯಸಿಂಹನನ್ನೂ ದಿಲೇರಖಾನನನ್ನೂ ದಕ್ಷಿಣದೇಶಕ್ಕೆ ಕಳುಹಿದನು. ಇವರು ೧೬೬೫ನೆಯ ಇಸವಿಯಲ್ಲಿ ಚೈತ್ರಮಾಸದಲ್ಲ ಪೂನಾನಗರವನ್ನು ಸೇರಿದರು. ಷಯಿಸ್ತಾಖಾನನಂತೆ ಸರುತಲ್ಪಸಿಯಾಗಿರದೆ ಜಯಸಿಂಹನು, ದಿಲೇರಖಾನನನ್ನು ಪುರಂದರ ದುರ್ಗವನ್ನು ಮುತ್ತಿಗೆ ಹಾಕುವಂತೆ ಆಜ್ಞಾಪಿಸಿ ಕಳು

ಹಿಸಿ, ಸಿಂಹಗಡದುರ್ಗವನ್ನು ಆಕ್ರಮಿಸಲು ತನ್ನ ಸೈನಿಕರಿಗೆ ಹೇಳಿ, ತಾನು ರಾಜಗಡದಮೇಲಕ್ಕೆ ಮಿಕ್ಕ ಸೇನೆಯೊಡನೆ ಹೊರಟನು.

ಶಿವಾಜಿಯು ಹಿಂದೂ ಸೈನಿಕರೊಡನೆ ಯುದ್ಧಮಾಡನು; ಅಲ್ಲದೆ ಜಯಸಿಂಹನ ಕೀರ್ತಿ, ಪ್ರತಾಪ, ಸೂಕ್ಷ್ಮಬುದ್ಧಿಗಳನ್ನೂ ಅವನಲ್ಲಿದ್ದ ಅಪರಿಮಿತ ಸೇನೆಗಳನ್ನೂ ತಿಳಿದವನಾಗಿಯೂ ಇದ್ದನು. ಜಯಸಿಂಹನಂತೆ ಬುದ್ಧಿವಂತನೂ ದೂರದರ್ಶಿಯೂ ನ್ಯಾಯವಿಚಕ್ಷಣನೂ ಪರಾಕ್ರಮಶಾಲಿಯೂ ಆದವನು ಭರತಖಂಡದಲ್ಲೇ ಇಲ್ಲವೆಂದು ಸಮಕಾಲೀನನಾದ ಫ್ರೆಂಚ್‌ಯಾತ್ರಿಕ ಬರ್ನಿಯರ್ ಎಂಬವನು ಬರೆದಿರುವನು. ಶಿವಾಜಿಯ ಪ್ರಯತ್ನಗಳು ಸಫಲವಾಗಲಿಲ್ಲ. ಈತನು ಮಾತುಮಾತಿಗೂ ಸಂಧಿಪ್ರಸ್ತಾಪವನ್ನು ಮಾಡಿಸುತ್ತಿದ್ದರೂ ಜಯಸಿಂಹನು ಕುಶಾಗ್ರ ಬುದ್ಧಿಯವನಾದ ಶಿವಾಜಿಯನ್ನು ನಂಬಲಿಲ್ಲ. ಕಡೆಗೆ ಮಹಾರಾಷ್ಟ್ರಪ್ರಭುವಿನ ಮಂತ್ರಿಯಾದ ರಘುನಾಥಪಂತ ನ್ಯಾಯಶಾಸ್ತ್ರಿಯು, ದೂತನಾಗಿ ಹೋಗಿ,—'ಶಿವಾಜಿಯು ಮೋಸದಮಾತುಗಳನ್ನು ಆಡುವದಿಲ್ಲವೆಂದೂ, ಕ್ಷತ್ರಿಯನಾದಾತನು ಕ್ಷತ್ರಿಯರಿಗೆ ಉಚಿತವಾದ ಗೌರವವನ್ನು ತಿಳಿದಿರುವನೆಂದೂ ಜಯಸಿಂಹನಿಗೆ ಚೆನ್ನಾಗಿ ಹೇಳಿದನು. ಶಾಸ್ತ್ರಕೋವಿದನಾದ ವಿಪ್ರನಮಾತುಗಳನ್ನು ಕೇಳದೆ ಜಯಸಿಂಹನು ಆತನ ಕೈ ಹಿಡಿದುಕೊಂಡು,—

"ದ್ವಿಜಾಗ್ರಣಿ! ನಿಮ್ಮ ಮಾತುಗಳಿಗೆ ಸಂತೋಷಪಟ್ಟೆನು. ದಿಲ್ಲೀಶ್ವರನು ನಿಮ್ಮ ರಾಜರನ್ನು ಮನ್ನಿಸುವನು. ಅದಕ್ಕೆ ನನ್ನ ಮಾತನ್ನು ಸಾಕ್ಷಿಯಾಗಿ ಮಾಡಿಕೊಳ್ಳಿರಿ. ರಜಪೂತರು ಎಂದಿಗೂ ಸುಳ್ಳಾಡರು. ಈ ಮಾತನ್ನು ನಿಮ್ಮ ರಾಜನಿಗೆ ನಿವೇದಿಸಿ." ಎಂದನು.

ಇದಾದ ಕೆಲವು ದಿನಗಳ ಒಳಿತ ಜಯಸಿಂಹನು ತನ್ನ ಸಭಾಕಾರ್ಯವನ್ನು ಮುಗಿಸಿ, 'ಏಕಾಂತದಲ್ಲಿ ಒಬ್ಬನೇ ಕುಳಿತಿದ್ದನು. ಒಬ್ಬ ಸೇವಕನು ಬಂದು, "ಮಹಾರಾಜರಿಗೆ ಜಯವಾಗಲಿ! ಶಿವಾಜಿಪ್ರಭುಗಳು ತಮ್ಮ ದರ್ಶನವನ್ನಪೇಕ್ಷಿಸಿ ಗುಡಾರದ ಹೊರಗೆ ನಿಂತಿರುವರು" ಎಂದು ಬಿನ್ನವಿಸಿದನು.

ಸಭಾಸದರು ವಿಸ್ಮಿತರಾದರು. ಜಯಸಿಂಹನು ಶಿವಾಜಿಯನ್ನು ಮರ್ಯಾದೆಯಿಂದ ಕರೆದುಕೊಂಡು ಬರುವುದಕ್ಕಾಗಿ ತಾನೇ ಹೊರಗೆಬಂದು ಆತನನ್ನು ಗೌರವ

ದಿಂದ ಒಳಗೆ ಕರೆದುಕೊಂಡು ಹೋಗಿ ತನ್ನ ಪೀಠದ ಬಲಗಡೆ ಕುಳ್ಳಿರಿಸಿದನು. ಮಹಾರಾಷ್ಟ್ರಪ್ರಭುವು ಈ ಆದರದಿಂದ ಬಹು ಸಂತೋಷಪಟ್ಟನು ಬಳಿಕ ಜಯಸಿಂಹನು,—"ರಾಜಾ! ತಾವು ನನ್ನ ಶಿಬಿರಕ್ಕೆ ದಯೆಮಾಡಿ ನನ್ನನ್ನು ಕೃತಾರ್ಥರನ್ನಾಗಿ ಮಾಡಿದಿರಿ. ಇದನ್ನು ತಮ್ಮ ಮನೆಯೆಂದೇ ತಿಳಿಯಬೇಕು."

ಶಿವಾಜಿ—ರಾಜಾ! ಈ ದಾಸನು ತಮ್ಮ ಅಪ್ಪಣೆಗೆ ವಿರೋಧವಾಗಿ ಎಂದಾದರೂ ನಡೆದಿರುವನೆ? ರಘುನಾಥಪಂತ ನ್ಯಾಯಶಾಸ್ತ್ರಿಯ ಮೂಲಕ ಈ ದಾಸನಿಗೆ ಬರುವಂತೆ ಅಪ್ಪಣೆಕೊಟ್ಟಿರಿ. ಆದುದರಿಂದ ದಾಸನು ಬಂದಿರುವನು. ತಮ್ಮ ಉದಾರವಾದ ಆಚರಣೆಯಿಂದ ನಾನು ತುಂಬ ಸನ್ಮಾನಿತನಾದೆನು.

ಜಯ—ಅಹುದು, ರಘುನಾಥಪಂತರ ಸಂಗತಿಯು ಜ್ಞಾಪಕದಲ್ಲಿರುವುದೆ! ರಾಜಾ! ನಾನು ಹೇಳಿದರೀತಿಯಾಗಿ ಮಾಡುವೆನು ಡಿಲ್ಲೀಶ್ವರನು ನಿಮ್ಮನ್ನು ಗೌರವಿಸುವನು. ಈ ವಿಷಯದಲ್ಲಿ ನಾನು ವಾಗ್ದಾನಮಾಡುವೆನು. ರಾಜಪುತ್ರನ ಮಾತು ಎಂದಿಗೂ ಸುಳ್ಳಾಗದು.

ಹೀಗೆ ಸಂಭಾಷಿಸಿ ಸಭೆಯನ್ನು ಮುಗಿಸಿದನು. ಅಲ್ಲಿ ಜಯಸಿಂಹ, ಶಿವಾಜಿ ಇವರಿಬ್ಬರ ಹೊರತು ಮತ್ತಾರೂ ಇರಲಿಲ್ಲ. ಆ ಸ್ಥಳದಲ್ಲಿ ಶಿವಾಜಿಯು ತನ್ನ ಆನಂದದ ಚಿಹ್ನೆಯನ್ನು ಬಿಟ್ಟು ಗಲ್ಲದಮೇಲೆ ಕೈಯಿರಿಸಿಕೊಂಡು ಯೋಚಿಸಲಾರಂಭಿಸಿದನು. ಆತನ ಕಣ್ಣುಗಳಲ್ಲಿ ಸುರಿಯುತ್ತಲಿದ್ದ ನೀರನ್ನು ನೋಡಿ ಜಯಸಿಂಹನು ಹೇಳಿದನು:—"ರಾಜಾ! ತಾವಾಗಿಯೇ ಬಂದು ಸಿಕ್ಕಿಬಿದ್ದೆವೆಂದು ಖೇದಪಡಬೇಕಾದ ಅಗತ್ಯವಿಲ್ಲ. ನೀವು ನಂಬಿ ನನ್ನ ಹತ್ತಿರಕ್ಕೆ ಬಂದಿರುವಿರಿ. ರಾಜಪುತ್ರನು ತನ್ನನ್ನು ನಂಬಿದವರ ಮೇಲೆ ಎಂದಿಗೂ ಕೈಮಾಡನು. ಈಗಲೇ ಅಶ್ವಶಾಲೆಯಿಂದ ಒಂದು ಕುದುರೆಯನ್ನು ತರಿಸಿಕೊಂಡು ಹೊರಟುಹೋಗಬಹುದು. ನನ್ನ ಆಜ್ಞಾನುಸಾರ ರಾಜಪುತ್ರರು ಯಾರೂ ನಿಮ್ಮ ಸುದ್ದಿಗೆ ಬಾರರು. ನೀವು ಬಂದಂತೆಯೇ ಸುರಕ್ಷಿತವಾಗಿ ಹಿಂತಿರುಗಿ ಹೋಗಿರಿ. ಯುದ್ಧದಲ್ಲಿ ಜಯಹೊಂದಿದರೆ ಒಳ್ಳೆಯದೆ ಇಲ್ಲದಿದ್ದರೂ ವಿಚಾರವಿಲ್ಲ. ಆದರೂ ಕ್ಷತ್ರಿಯನು ಧರ್ಮವನ್ನು ಮಾತ್ರ ಬಿಡುವವನಲ್ಲ.

ಶಿವಾಜಿ—ಮಹಾರಾಜಾ! ಭವಾದೃಶರಾದ ಮಹಾಪುರುಷರ ಸಮಕ್ಷಮದಲ್ಲಿ ಪರಾಜಯವನ್ನು ಹೊಂದಿದರೆ ನನಗೆ ಖೇದವಿಲ್ಲ; ಬಾಲ್ಯದಿಂದಲೂ ಯಾವ

ದನ್ನು ಕುರಿತು ಚಿಂತಿಸುತ್ತಿದ್ದೇನೋ, ಯಾವುದಕ್ಕಾಗಿ ಶ್ರಮಪಡುತ್ತಿದ್ದೆನೋ ಅಂತಹ ಉದ್ಯಮವು ಇಂದಿನಿಂದ ಭಂಗಹೊಂದುವದೆಂಬ ಚಿಂತೆಯು ನನ್ನ ಹೃದಯವನ್ನು ಭೇದಿಸುತ್ತಿರುವದು. ಆದರೂ ಈ ವಿಷಯದಲ್ಲಿ ಮನಸ್ಸನ್ನು ಕಲ್ಲಾಗಿ ಮಾಡಿ ಕೊಂಡು ತಮ್ಮ ಸನ್ನಿಧಾನಕ್ಕೆ ಬಂದೆನು.

ಜಯ—ಹಾಗಾದರೆ ಮತ್ತೆ ಏತಕ್ಕೆ ಚಿಂತಿಸುವಿರಿ ?

ಶಿವಾಜಿ—ಬಾಲ್ಯದಿಂದಲೂ ತಮ್ಮ ಯಶೋಗೀತಗಳನ್ನು ಹಾಡುವುದು ನನಗೆ ಸಂತೋಷವು. ಗೀತೆಯ ಅರ್ಥವು ಇಂದು ನನಗೆ ಸ್ಪಷ್ಟವಾಗಿ ಬೋಧೆಯಾಯಿತು ಲೋಕದಲ್ಲಿ ಸತ್ಯವೂ ಧರ್ಮವೂ ಮಹತ್ವವಿದ್ದರೆ ಅವು ರಾಜಪುತ್ರರಲ್ಲಿಯೇ ಇವೆ. ಅಂತಹ ರಾಜಪುತ್ರರ ರಾಜನು ಯವನರ ಅಧಿಕಾರಕ್ಕೆ ಒಳಗಾಗಿರುವನೆ ? ಜಯಸಿಂಹ ಮಹಾರಾಜರು ಮ್ಲೇಂಛ ಚಕ್ರವರ್ತಿಯ ಸೇನಾಪತಿಗಳೇ !

ಜಯ—ಕ್ಷತ್ರಿಯಪ್ರವರ ! ಅದೇತಮ್ಮ ಪ್ರಕೃತದ ಖೇದಕ್ಕೆ ಕಾರಣವೇನು? ರಾಜಪುತ್ರರು ಸಹಜವಾಗಿಯೂ ಮುಸಲ್ಮಾನರಿಗೆ ಒಳಗಾಗಲಿಲ್ಲ. ಸಾಧ್ಯವಾಗುವ ವರೆಗೂ ದಿಲ್ಲಿಯವರಕೂಡ ಹೋರಾಡಿ ವಿಧಿವಿಲಾಸದಿಂದ ಪರಾಜಿತರಾದರು. ಪ್ರಾತಃಸ್ಮರಣೀಯನೂ ವೀರಾಗ್ರಗಣ್ಯನೂ ಆದ ಮಹಾರಾಣಾ ಪ್ರತಾಪಸಿಂಹನು ಅಸಾಧ್ಯ ಪ್ರಯತ್ನಗಳನ್ನು ಮಾಡಿದ್ದನು. ಆದರೆ ಆತನ ಸಂತತಿಯವರುಕೂಡ ದಿಲ್ಲಿಗೆ ಕಪ್ಪವನ್ನು ಕಟ್ಟುತ್ತಿರುವರು. ಈ ಸಂಗತಿಗಳು ಮಹಾಶಯರಾದ ನಿಮಗೂ ವಿದಿತ ವೇದೇ ನಂಬುವೆನು.

ಶಿವಾಜಿ—ಅಹುದು. ಆ ಮಾತು ಹಾಗಿರಲಿ. ಇಂದಿನವರೆಗೂ ಪರಮ ಶತ್ರುಗಳಾದ ಅವರ ಕಾರ್ಯಸಾಧನೆಯಲ್ಲಿ ನಿಮಗೆ ಇಷ್ಟು ಮುತವರ್ಜಿಯೇಕೆ ?

ಜಯ—ಎಂದು ದಿಲ್ಲೀಶ್ವರನ ಸೇನಾಪತ್ಯವನ್ನು ವಹಿಸಿಕೊಂಡೆನೋ ಆಗಲೇ ಅವನ ಕೆಲಸಗಳನ್ನು ಸರಿಪಡಿಸುವೆನೆಂದು ವಾಗ್ದಾನಮಾಡಿದಂತೆ ಅಲ್ಲವೆ ! ವಾಗ್ದಾನ ಮಾಡಿದಂತೆ ನಾನು ನಡೆಯತಕ್ಕವನು.

ಶಿವಾಜಿ—ಎಲ್ಲಾ ವೇಳೆಗಳಲ್ಲಿಯೂ ಎಲ್ಲಾ ವಿಷಯಗಳಲ್ಲಿಯೂ ಸತ್ಯವು ಪಾಲ ನೀಯವೆ ? ನಮ್ಮ ದೇಶಕ್ಕೆ ಪರಮ ಶತ್ರುಗಳೂ ನಮ್ಮ ಧರ್ಮಕ್ಕೆ ಪರಮದ್ರೋ ಹಿಗಳೂ ಆದ ಅವರಲ್ಲಿ ಸಮಯನಿರೀಕ್ಷಣವೇ ?

ಜಯ—ತಾವೆ ಕ್ಷತ್ರಿಯರಾಗಿದ್ದು ಕೂಡ ಹೀಗೆನ್ನುತ್ತಿರುವಿರಿ ? ರಾಜಪುತ್ರರ ಚರಿತ್ರೆಯನ್ನು ಕೇಳಿರಿ. ನೂರಾರು ವರುಷಗಳು ಮುಸಲ್ಮಾನರ ಸಂಗಡ ಯುದ್ಧಮಾಡಿದರು. ಅಡಿಗಡಿಗೆ ಜಯಹೊಂದುತ್ತಿದ್ದರು. ಆದರೆ ಜಯಗಳಲ್ಲಿಯೂ ಪರಾಜಯಗಳಲ್ಲಿಯೂ ಸಂಪತ್ತುಗಳಲ್ಲಿಯೂ ವಿಪತ್ತುಗಳಲ್ಲಿಯೂ ಸರ್ವದಾ ಸತ್ಯವನ್ನು ಅನುಷ್ಠಿಸುತ್ತಿದ್ದರು. ಈಗ ನಮಗೆ ಆ ಸ್ವಾತಂತ್ರ್ಯಗೌರವವು ತಪ್ಪಿದೆ. ಆದರೆ ಸತ್ಯಪಾಲನೆಯ ಗೌರವವು ನಿಂತುರುವುದು. ಸ್ವದೇಶದಲ್ಲಿಯೂ ವಿದೇಶದಲ್ಲಿಯೂ ಮಿತ್ರರಮಧ್ಯದಲ್ಲಿಯೂ ಶತ್ರುಗಳ ಮಧ್ಯದಲ್ಲಿಯೂ ರಾಜಪುತ್ರನೆಂದರೆ ಅತ್ಯಂತ ಸನ್ಮಾನವು. ರಾಜಾ-ತೋಡರ ಮಲ್ಲನು ವಂಗದೇಶವನ್ನು ಜಯಿಸಿದನು. ಮಾನಸಿಂಹನು ಕಾಬೂಲದಿಂದ ಒರಿಸ್ಸಾದವರೆಗೂ ಡಿಲ್ಲೀಶ್ವರನ ವಿಜಯಧ್ವಜವನ್ನು ನೆಟ್ಟನು. ಯಾರೂ ವಿಶ್ವಾಸಘಾತಕರಾಗಿರಲಿಲ್ಲ. ಮೊಗಲಚಕ್ರವರ್ತಿಯು ಸಮಕ್ಷದಲ್ಲಿ ಹೇಳಿದಂತೆ ನಡೆಯುವುದು ತಪ್ಪೆಂದು ಯಾರೂ ನಂಬಿರಲಿಲ್ಲ. ಮಹಾರಾಷ್ಟ್ರಪ್ರಭು ! ರಾಜಪುತ್ರರ ಮಾತೇ ಸಂಧಿಪತ್ರವು. ಅನೇಕ ಸಂಧಿಪತ್ರಗಳು ಸುಳ್ಳಾದುವು. ಆದರೆ ರಾಜಪುತ್ರನು ಆಡಿದಮಾತನ್ನು ಎಂದಿಗೂ ಅತಿಕ್ರಮಿಸನು.

ಶಿವಾಜಿ—ಜಸವಂತಸಿಂಹಮಹಾರಾಜರೂ ರಾಜಪುತ್ರರಲ್ಲಿ ಒಬ್ಬ ಹೆಸರಾದವರಲ್ಲವೆ ? ಅವರು ಮುಸಲ್ಮಾನರ ಪಕ್ಷವನ್ನು ಬಿಟ್ಟು ನಮಗೆ ಸಹಾಯಕರಾಗಲಿಲ್ಲವೆ?

ಜಯ—ಆತನು ರಾಜಪುತ್ರನು, ವೀರಶ್ರೇಷ್ಠನು ;—ಧರ್ಮಪರಾಯಣನು—ಸಂದೇಹವಿಲ್ಲ. ಆತನ ದೇಶದಲ್ಲಿ ವಿಶೇಷಭಾಗ ಸಮಭೂಮಿ. ಸೈನಿಕರು ಕಂಗೆಟ್ಟವರಲ್ಲ ; ಸಾವಿಗೆ ಅಂಜುವವರಲ್ಲ. ಎಲ್ಲವೂ ಅನುಕೂಲವಾಗಿದೆ. ಆದರೆ ಆತನು ತನ್ನ ಸೈನ್ಯದಿಂದ ದೇಶದ ಸ್ವಾತಂತ್ರ್ಯವನ್ನು ರಕ್ಷಿಸಿದರೆ ನಾನಾತನನ್ನು ಪ್ರಶಂಸಿಸುವೆನು. ವಿಜಯಿಯಾಗಿ ಡಿಲ್ಲೀಶನನ್ನು ಓಡಿಸಿ ಡಿಲ್ಲಿಯ ಸಿಂಹಾಸನವನ್ನು ಹತ್ತಿದರೆ, ಚಕ್ರವರ್ತಿಯೆಂದು ಸನ್ಮಾನಿಸುವೆನು.—ಅಥವಾ—ಸ್ವದೇಶಸಂರಕ್ಷಣೆಯ ಪ್ರಯತ್ನದಲ್ಲಿ ಮೃತನಾದರೂ ಮಹಾನುಭಾವನೆಂದು ಪೂಜಿಸುವೆನು. ಯಾವದಿನ ಆತನು ಡಿಲ್ಲೀಶನ ಸೇನಾಪತಿಯಾದನೋ ಆ ದಿನವೇ ಮುಸಲ್ಮಾನರ ಸೇವಕನಾದನು. ವ್ರತವನ್ನು ಹಿಡಿದು, ಅದನ್ನು ಭಂಗಪಡಿಸುವುದು ಕ್ಷತ್ರಿಯರಿಗೆ ತಕ್ಕುದಲ್ಲ. ಜಸವಂತಸಿಂಹನು ತನ್ನ ಯಶೋರಾಶಿಯಲ್ಲಿ ಕಳಂಕವನ್ನು ತಂದುಕೊಳ್ಳನು. ಸೇವಾ

10

ನದೀತೀರದಲ್ಲಿ ಔರಂಗಜೇಬನಿಂದ ಓಡಿಸಲ್ಪಟ್ಟುದು ಮೊದಲು ಅತನು ಚಕ್ರವರ್ತಿಯಲ್ಲಿ ದ್ವೇಷವನ್ನು ಸಾಧಿಸುತ್ತಿರುವನು ; ಆದರೂ ಅನರ್ಹವಾದ ಕಾರ್ಯವನ್ನು ಮಾಡನು.

ಜಯಸಿಂಹನು ಜಸವಂತಸಿಂಹನಂತಲ್ಲವೆಂದು ಗ್ರಹಿಸಿ ಶಿವಾಜಿಯು ಹೀಗೆಂದನು — "ಹಿಂದೂಧರ್ಮಸಂರಕ್ಷಣೆಮಾಡುವವರಿಗೆ ಸಹಾಯವಮಾಡುವುದು ನಿಂದ್ಯವೇ ಭ್ರಾತೃಭಾವದಿಂದ ಸಹವಾಠಿಯಾದ ಹಿಂದುವಿಗೆ ಸಹಾಯಮಾಡುವುದು ಅಸಾಧ್ಯವೆ?

ಜಯ — ನಾನು ಆರೀತಿ ಹೇಳಲಿಲ್ಲ. ಯಾವ ಕಾರಣದಿಂದ ಜಸವಂತಸಿಂಹನು ಔರಂಗಜೇಬನ ಪಕ್ಷವನ್ನು ಬಿಟ್ಟು ಜನಗಳು ನೋಡುತ್ತಿರಲು—ಭಗವಂತನು ನೋಡುತ್ತಿರಲು ನಿಮ್ಮ ಪಕ್ಷವನ್ನು ಸೇರಿರುವನು. ನೀವು ಮಾಡುತ್ತಿರುವ ಪ್ರಯತ್ನವನ್ನು ಅವನೇಕೆ ಮಾಡಬಾರದು ? ಚಕ್ರವರ್ತಿಯ ಸೇವಕನಾದರೂ ತದ್ವಿರುದ್ಧವಾಗಿ ಪ್ರವರ್ತಿಸುತ್ತಿದ್ದುದರಿಂದ ಅವನು ಕಪಟಿಯಾಗಲಿಲ್ಲವೆ ? ಕಪಟತನವು ಕ್ಷತ್ರಿಯರಿಗೆ ಉಚಿತವೆ ?

ಶಿವಾಜಿ — ಬಹಿರಂಗವಾಗಿ ಅವರು ನಮ್ಮ ಪಕ್ಷವನ್ನು ಸೇರಿದರೆ ಡಿಲ್ಲೀಶ್ವರನು ಇನ್ನೊಂದು ಸೇನೆಯನ್ನು ನಿಯಮಿಸುವನು. ದೈವವಶದಿಂದ ನಾವೆಲ್ಲರೂ ಪರಾಜಿತರೂ ನಿಹತರೂ ಆಗಬಹುದು !

ಜಯ — ಯುದ್ಧದಲ್ಲಿ ಮೃತನಾಗುವುದು ಕ್ಷತ್ರಿಯನಿಗೆ ಪರಮ ಸೌಭಾಗ್ಯವು. ಕಪಟವರ್ತನದಿಂದ ಬದುಕಿದ್ದರೂ ಸತ್ತಂತೆಯೇ !

ಕೋಪದಿಂದ ಕೆಂಪೇರಿದ ಮುಖವನ್ನೆತ್ತಿ ಶಿವಾಜಿಯು ಹೀಗೆಂದನು — "ಮಹಾರಾಜಾ ! ಮಹಾರಾಷ್ಟ್ರರುಕೂಡ ಮರಣಕ್ಕೆ ಹೆದರುವರಲ್ಲ. ಸತ್ತುಹೋದರೆ ನನ್ನ ಉದ್ದೇಶವು ಕೊನೆಸಾಗುವುದರಿಂದ ಈ ಪ್ರಾಣವನ್ನು ಭವಾನೀದೇವಿಯ ಸಮಕ್ಷದಲ್ಲಿ ಬಿಡುವೆನು ; ಇಲ್ಲವೆ—ನಿಮ್ಮ ಕತ್ತಿಯಿಂದ ಕತ್ತರಿಸಿಹಾಕಿಬಿಡಿರಿ.—ಆನಂದದಿಂದ ಪ್ರಾಣಬಿಡುವೆನು. ಬಾಲ್ಯದಿಂದಲೂ ಯಾವುದಕ್ಕಾಗಿ ಅನೇಕ ಯುದ್ಧಗಳನ್ನು ಮಾಡುತಿದ್ದೆನೋ ಯಾವುದು ನಿರಂತರವೂ ನನ್ನ ಮನಸ್ಸಿನಲ್ಲಿ ಪ್ರತಿಫಲಿಸುತ್ತಿರುವುದೋ ಅಂಥ ಹಿಂದೂಸಮಾಜದ ಉದ್ಧರಣದ ಅಭಿಲಾಷೆಯನ್ನು ಬಿಡಬೇಕೆಂದರೆ ಇಂದು ನನ್ನ ಹೃದಯವು ಕ್ಷತವಿಕ್ಷತವಾಗಿ ಹೋಗುತ್ತಿದೆ. ಆದರೂ ಯುದ್ಧಕ್ಷೇತ್ರದಲ್ಲಿ ಪ್ರಾಣಗಳು ಉಳಿದರೆ ನನ್ನ ಮಹತ್ಕಾರ್ಯವು ನೆರವೇರು

ವುದೋ ?—(ಹೀಗೆ ಹೇಳಿ ಸ್ವಲ್ಪಹೊತ್ತು ಸುಮ್ಮನಿದ್ದು ಮತ್ತೆ ಮೊದಲಿನಂತೆ ದೃಢವಾಗಿ ಹೇಳಿದನು.)—"ಮಹಾರಾಜಾ ! ನಿಮ್ಮನ್ನು ತಂದೆಯಂತೆ ನೋಡುತ್ತಿರುವೆನು. ನಿಮ್ಮಂತಹ ಧೀರರನ್ನೂ ಧರ್ಮಜ್ಞರನ್ನೂ ಯೋಧರನ್ನೂ ನಾನು ಎಂದಿಗೂ ನೋಡಲಿಲ್ಲ. ನಾನು ನಿಮ್ಮ ಪುತ್ರನಂತೆ ಒಂಟಿಯಾದವನು ನಿಮ್ಮಲ್ಲಿ ಒಂದು ಸಂಗತಿಯನ್ನು ಕೇಳುವೆನು. ತಾವು ಪಿತೃಸದೃಶರಾಗಿದ್ದು, ನನಗೆ ಹಿತವನ್ನು ಹೇಳಬೇಕು. ಬಾಲ್ಯದಲ್ಲಿ ನಾನು ಕೊಂಕಣಪ್ರದೇಶದ ಬೆಟ್ಟಗಳಲ್ಲಿಯೂ ಅಡವಿಗಳಲ್ಲಿಯೂ ಸಂಚರಿಸುತ್ತಿರುವಾಗ ಒಂದು ಸ್ವಪ್ನವನ್ನು ಕಂಡೆನು. ಭವಾನೀದೇವಿಯು ಪ್ರತ್ಯಕ್ಷಳಾಗಿ ಸ್ವಾತಂತ್ರ್ಯವನ್ನು ನೆಲೆಗೊಳಿಸಬೇಕೆಂದು ಮುಸಲ್ಮಾನರನ್ನು ಸಂಹರಿಸಬೇಕೆಂದೂ ನನಗೆ ಅಪ್ಪಣೆಕೊಟ್ಟು ಅಂತರ್ಧಾನಳಾದಳು. ಆ ಉತ್ಸಾಹದಲ್ಲಿ ಶರೀರವನ್ನು ಮತ್ತು ಖಡ್ಗವನ್ನು ಕೈಯಲ್ಲಿ ಧರಿಸಿ ವೀರಶ್ರೇಷ್ಠರನ್ನು ಓಡಿಸಿ, ಅನೇಕದುರ್ಗಗಳನ್ನು ಹಿಡಿದುಕೊಳ್ಳಲಾರಂಭಿಸಿದೆನು. ಕ್ರಮವಾಗಿ ರಾಜ್ಯವನ್ನು ವಿಸ್ತರಿಸಿ, ದೇವಾಲಯಗಳನ್ನು ಸ್ಥಾಪಿಸಿ, ಸ್ವಾತಂತ್ರ್ಯವನ್ನು ನಿರ್ವಹಿಸುತ್ತಿರುವೆನು. ಕ್ಷತ್ರಿಯ ಪುಂಗವ ! ಈ ನನ್ನ ಉದ್ದೇಶವು ನಿಂದ್ಯವೇ ? ಅಥವಾ ಒಳ್ಳೆಯದೆ ?—ಮಗನಿಗೆ ಹಿತವನ್ನು ಬೋಧಿಸಿರಿ.

ದೂರದರ್ಶಿಯೂ ಧರ್ಮಪರಾಯಣನೂ ಆದ ಜಯಸಿಂಹನು ಸ್ವಲ್ಪಹೊತ್ತು ಸುಮ್ಮನಿದ್ದು ತರುವಾಯ ಗಂಭೀರವಾಕ್ಯಗಳಿಂದ "ಶಿವಾಜೀರಾಜಾ ! ನಿಮ್ಮ ಉದ್ದೇಶಕ್ಕಿಂತಲೂ ಶ್ಲಾಘನೀಯವಾದುದು ಮತ್ತೊಂದಿಲ್ಲ. ನಿಮ್ಮ ಮಹೋದ್ದೇಶವನ್ನು ಎಲ್ಲಾ ಕಡೆಯಲ್ಲಿಯೂ ಪ್ರಶಂಸಿಸುತ್ತಿರುವೆನು. ನಿಮ್ಮನ್ನು ಉದಾಹರಣೆಯಾಗಿ ತೋರಿಸಿ, ನನ್ನ ಕುಮಾರನಾದ ರಾಮಸಿಂಹನನ್ನು ಶಿಕ್ಷಿಸುತ್ತಿದ್ದೆನು. ಹೇಗೆ ಯೋಚಿಸಿದರೂ ಮೊಗಲ್ ಸಾಮ್ರಾಜ್ಯವು ನಿಲ್ಲದಂತೆ ತೋರುತ್ತಿದೆ. ಪಾಪದಿಂದ ಪರಿಪೂರ್ಣವಾಗಿಯೂ ವಿಲಾಸಮಗ್ನವಾಗಿಯೂ ಹಿಂದುಗಳಲ್ಲಿ ಮಾಡಿದ ಅಕ್ರಮ ಕಾರ್ಯಗಳಿಂದ ಶಾಪಗ್ರಸ್ತವಾಗಿಯೂ ಪತನೋನ್ಮುಖದಂತೆನಿಂತಿದೆ. ಶೀಘ್ರವಾಗಿಯೋ ಸ್ವಲ್ಪತಡವಾಗಿಯೋ ಈ ರಾಜ್ಯವು ರೂಪಾಂತರವನ್ನು ಹೊಂದುವುದು, ಅನಂತರ ಹಿಂದುಗಳ ಗೌರವವು ಹೆಚ್ಚುಗುವುದು. ಮಹಾರಾಷ್ಟ್ರ ಜೀವನವು ಅಂಕುರಿಸಿ ಪ್ರಬಲಿಸಿ ಅದರ ಯೌವನೋತ್ಸಾಹವು ಭರತಖಂಡದಲ್ಲಿ ವ್ಯಾಪಿಸುತ್ತಿದೆ ನಿಮಗೆ ಭವಾನೀದೇವಿಯು ಕಲ್ಯಾಣವನ್ನುಂಟುಮಾಡಲಿ.

ಜಯಸಿಂಹನ ವಾಕ್ಯದಿಂದ ಶಿವಾಜಿಗೆ ಆನಂದದಿಂದ ಶರೀರವು ರೋಮಾಂಚಿತವಾಗಲು ಉಲ್ಲಾಸದಿಂದ—"ಮಹಾರಾಜಾ ! ಹಾಗಾದರೆ ಪತನೋನ್ಮುಖವಾದ ಮೊಗಲ್‌ಸಾಮ್ರಾಜ್ಯಪ್ರಾಸಾದಕ್ಕೆ ಭವಾದೃಶರಾದ ಮಹಾನುಭಾವರು ಸ್ಥಂಭಸ್ವರೂಪರಾಗಿರುವರೇಕೆ ?

ಜಯ—ಸತ್ಯಪರಿಪಾಲನೆಯು ಕ್ಷತ್ರಿಯರ ಧರ್ಮವು. ಆಡಿದ ಮಾತಿಗೆ ತಪ್ಪುವನಲ್ಲ. ಪತನೋನ್ಮುಖಮಂದಿರದೊಡನೆ ಬೀಳುವೆನು.

ಶಿವಾಜಿ—ಒಳ್ಳೆಯದು. ಸತ್ಯವನ್ನೇ ಪರಿಪಾಲಿಸಿರಿ. ಕಪಟಿಯಾದ ಚಕ್ರವರ್ತಿಯಲ್ಲಿಕೂಡ ನಿಮ್ಮ ಧರ್ಮಾಚರಣೆಗೆ ಲೋಕವು ನಿಮ್ಮನ್ನು ಪ್ರಶಂಸಿಸುವುದು. ನಾನು ಮಾತ್ರ ಅವನ ವಿಷಯದಲ್ಲಿ ನ್ಯಾಯಮಾರ್ಗದಿಂದ ಪ್ರವರ್ತಿಸೆನು.

ಜಯ—ಕ್ಷತ್ರಿಯನೇ ! ಕಪಟವರ್ತನವು ವೀರರಿಗೆ ಎಂದಿಗೂ ಸರಿಯಲ್ಲ. ಮತ್ತು ಮಹತ್ತಾದ ಕಾರ್ಯಕ್ಕೆ ತೊಡಗಿದಾಗ ಅದು ನಿಂದ್ಯವಾಗದು. ಮಹಾರಾಷ್ಟ್ರರ ಅಭಿವೃದ್ಧಿಗೆ ಈಗ ಸ್ವಲ್ಪ ತೊಂದರೆ. ಅವರ ಪರಾಕ್ರಮವು ಕ್ರಮೇಣ ಹೆಚ್ಚುವುದು. ಒಂದುದಿನ ಅವರು ಭರತಖಂಡಕ್ಕೆ ಪ್ರಭುಗಳಾಗಬಹುದು. ಆದರೆ, ಈಗ ನೀವು ಕಲಿಸುವ ಶಿಕ್ಷೆಯನ್ನು ಅವರು ಎಂದಿಗೂ ಮರೆತುಹೋಗುವುದಿಲ್ಲ ನನ್ನ ಮಾತುಗಳನ್ನು ತಪ್ಪುಗಳಾಗಿ ಭಾವಿಸಬೇಡಿರಿ. ಈಗ ನೀವು ಅವರಿಗೆ ಸಹಾಯ ಮಾಡುತ್ತಿರುವಿರಿ. ನಾಳೆ ಅವರು ದೇಶಗಳನ್ನು ಲೂಟಿಮಾಡುವರು. ಇನ್ನೂ ಅವರು ಬಹಿರಂಗವಾಗಿ ಯುದ್ಧಮಾಡರು. ಕೆಲವುಕಾಲದೊಳಗೆ ಹಿಂದೂದೇಶವನ್ನು ಆಳುವರೆನ್ನಿಸುವವರಿಗೆ ನೀವೇ ಪ್ರಥಮ ಗುರುಗಳು. ನೀವು ಕಠಿಣಶಿಕ್ಷೆಯನ್ನು ಕೊಟ್ಟರೆ ಅದರ ಫಲವು ಬಹುಕಾಲ ನಿಂತಿರುವುದು. ದೂರದರ್ಶಿಯಾದ ಈ ವೃದ್ಧನ ಮಾತುಗಳನ್ನು ಕೇಳಿ ಮಹಾರಾಷ್ಟ್ರರಿಗೆ ಇದಿರಾಗಿನಿಂತು ಯುದ್ಧಮಾಡುವುದನ್ನು ಕಲಿಸಿರಿ. ಮಾಯಾವೇಷಗಳು ಬೇಡವೆಂದು ಕಟ್ಟುಮಾಡಿರಿ. ನೀವು ಹಿಂದುಗಳಲ್ಲಿ ಶಿರೋಮಣಿಗಳು ! ನಿಮ್ಮ ಮಹೋದ್ದೇಶವನ್ನು ಅನೇಕಸಾರಿ ಪ್ರಶಂಸಿಸುತ್ತಿರುವೆನು. ಆದರೆ ನೀವು ನಿಮ್ಮ ಶಿಷ್ಯರಿಗೆ ಉತ್ತಮಶಿಕ್ಷೆಯನ್ನು ಕೊಡದಿದ್ದರೆ, ಕೊಡುವವರು ಮತ್ತಾರು ? ನೀವು ಮಾಡುವ ಪ್ರತಿಯೊಂದು ಕೆಲಸದ ಫಲವು ಬಹುಕಾಲ ನಿಂತಿರುವುದು. ಅನೇಕ ದೇಶಗಳಲ್ಲಿ ವ್ಯಾಪಿಸುವುದು."

ಶಿವಾಜಿ—(ಆಶ್ಚರ್ಯದಿಂದ) ತಾವು ನನಗೆ ಪರಮಗುರುಗಳು ! ತಮ್ಮ ಉಪದೇಶವನ್ನು ನಾನು ಶಿರಸಾವಹಿಸುತ್ತೇನೆ ; ಚಕ್ರವರ್ತಿಯ ಆಧಿಕ್ಯವನ್ನು ಅಂಗೀಕರಿಸಿದೆನು ; ಹಿತೋಪದೇಶವನ್ನು ಪಡೆಯಲು ಉತ್ಸುಕನಾಗಿರುವೆನು.

ಜಯ—ಜಯಾಪಜಯಗಳು ಸ್ಥಿರವಲ್ಲ. ಇಂದು ನಿಮಗೆ ಜಯವುಂಟಾದರೆ ನಾಳೆ ನಮಗೆ ಜಯವುಂಟಾಗಬಹುದು. ನೀವು ಚಕ್ರವರ್ತಿಯ ಆಧಿಕ್ಯವನ್ನು ಅಂಗೀಕರಿಸಿದಿರಿ ಘಟನಾಕ್ರಮದಿಂದ ನಾಳೆ ನಮಗೆ ಪುನಃ ಸ್ವಾತಂತ್ರ್ಯವು ಲಭಿಸದೆ ಹೋಗಬಹುದು.

ಶಿವಾಜಿ—ಜಗದೀಶನು ಯಾವರೀತಿಯಾದರೂ ಅನುಗ್ರಹಿಸಲಿ ಆದರೆ, ತಾವು ಅವನ ಸೇನಾಪತಿಯಾಗಿರುವಾಗ ನನ್ನ ಆಶೆಯು ಕೇವಲ ವ್ಯರ್ಥವಾದುದು ಹಿಂದೂ ಸೇನಾಪತಿಯ ಸಂಗಡ ಯುದ್ಧವನ್ನು ಭವಾನೀದೇವಿಯು ನಿಷೇಧಿಸಿರುವಳು.

ಜಯ—(ಮಂದಹಾಸದಿಂದ) ದೇಹವು ಕ್ಷಣಭಂಗುರವಾದುದು ; ಜಡಶರೀರವು ಇನ್ನು ಬಹುದಿನಗಳು ನಿಲ್ಲದು ಆದರೂ ಇದ್ದಷ್ಟು ದಿನವೂ ಸತ್ಯವನ್ನು ಅತಿಕ್ರಮಿಸದು.

ಶಿವಾಜಿ—ತಮ್ಮನ್ನು ಭಗವಂತನು ಚಿರಾಯುವನ್ನಾಗಿ ಮಾಡಿರಲಿ.

ಜಯ—ರಾಜಾ ! ಇನ್ನು ನಾನು ಅಪ್ಪಣೆಯನ್ನು ತೆಗೆದುಕೊಳ್ಳುವೆನು. ಮೊದಲು ನಾನು ಷಹಜಹಾನನ ಕೈಕೆಳಗೆ ಇದ್ದೆನು. ಈಗ ಔರಂಗಜೇಬನನ್ನು ಸೇವಿಸುತ್ತಿರುವೆನು. ಜೀವಿಸಿರುವವರೆಗೂ ಈ ವೃದ್ಧನು ಡಿಲ್ಲಿಗೆ ವಿರುದ್ಧವಾಗಿ ಪ್ರವರ್ತಿಸನು. ಆದರೆ, ಕ್ಷತ್ರಿಯಪುಂಗವ ! ನೀವಿನ್ನು ನಿಶ್ಚಿಂತೆಯಿಂದಿರಬೇಕು. ಮಹಾರಾಷ್ಟ್ರರು ಅಭ್ಯುದಯವನ್ನು ಹೊಂದುವರು. ಮೊಗಲ್‌ಸಾಮ್ರಾಜ್ಯವು ಇನ್ನು ನಿಲ್ಲಲಾರದು. ಜಾಗ್ರತೆಯಲ್ಲಿಯೇ ಹಿಂದುಗಳ ಪರಾಕ್ರಮವೂ ನಿಮ್ಮ ಪ್ರಖ್ಯಾತಿಯೂ ದೇಶದೇಶಗಳಲ್ಲಿ ವ್ಯಾಪಿಸಬಲ್ಲುದು.

ಶಿವಾಜಿಯು ಆನಂದಬಾಷ್ಪಕುಲಿತಲೋಚನನಾಗಿ ಜಯಸಿಂಹನನ್ನು ಆಲಿಂಗಿಸಿಕೊಂಡು—"ಧರ್ಮಾತ್ಮಾ ! ನಿಮ್ಮ ಮಾತುಗಳೇ ನಿಜ ! ನಿಮ್ಮೊಡನೆ ಯುದ್ಧ ಮಾಡಲಾರೆನು. ಆದರೆ, ಘಟನಾಕ್ರಮದಿಂದ ಮರಳಿ ಸ್ವಾತಂತ್ರ್ಯವು ಸಿಕ್ಕಿದರೆ, ಕ್ಷತ್ರಿಯಪುಂಗವಾ ! ಆಗ ಒಂದುದಿನ ತಮ್ಮ ದರ್ಶನಲಾಭವನ್ನು ಪಡೆಯುವೆನು ;

ಮತ್ತೆ ಪಿತೃಸದೃಶರ ಹಿತೋಪದೇಶವನ್ನು ಹೊಂದುವೆನು." ಎಂದು ಹೇಳಿ ಶಿವಾಜಿಯು ಹೊರಟುಹೋದನು.

---

## ಹತ್ತನೆಯ ಪ್ರಕರಣ.

---

### (ದುರ್ಗದ ವಿಜಯ.)

ಕ್ಷಿಪ್ರದಲ್ಲಿಯೇ ಸಂಧಿಯು ಸ್ಥಾಪಿಸಲ್ಪಟ್ಟಿತು. ಶಿವಾಜಿಯು ಮೊಗಲಾಯರಿಂದ ಜಯಿಸಿದ ಆಯಾ ದುರ್ಗಗಳನ್ನು ಅವರವರಿಗೆ ಕೊಟ್ಟುಬಿಟ್ಟನು. ನಾಮಾವಶಿಷ್ಟವಾಗಿರುವ ಅಹಮ್ಮದ್‌ನಗರದ ರಾಜ್ಯದಲ್ಲಿ ತನ್ನ ಸ್ವಾಧೀನದಲ್ಲಿರುವ ಮೂವತ್ತೆರಡು ದುರ್ಗಗಳಲ್ಲಿ ಚಕ್ರವರ್ತಿಗೆ ಇಪ್ಪತ್ತು ದುರ್ಗಗಳನ್ನು ಬಿಟ್ಟುಕೊಟ್ಟನು. ಮಿಕ್ಕ ಹನ್ನೆರಡು ದುರ್ಗಗಳನ್ನು ಜಹಗೀರಾಗಿ ಶಿವಾಜಿಯು ಅನುಭವಿಸುತ್ತಿದ್ದನು. ಔರಂಗಜೇಬನು, ಶಿವಾಜಿಗೆ ಬಿಜಾಪುರದಲ್ಲಿರುವ ಕೆಲವು ಪ್ರದೇಶಗಳನ್ನು ಕೊಟ್ಟು ಎಂಟು ವರ್ಷ ವಯಸ್ಸುಳ್ಳ ಶಂಭುಜಿಯೆಂಬ ಹೆಸರುಳ್ಳ ಶಿವಾಜಿಯ ಮಗನನ್ನು ಪಾಂಚಹಜಾರಿ ಮುನ್ಸಬದಾರನನ್ನಾಗಿ ಮಾಡಿದನು.

ಶಿವಾಜಿಯೊಡನೆ ಯುದ್ಧವು ಮುಗಿದ ತರುವಾಯ ಜಯಸಿಂಹನು ಬಿಜಾಪುರ ರಾಜ್ಯವನ್ನು ಚಕ್ರವರ್ತಿಯ ಸ್ವಾಧೀನಕ್ಕೆ ತೆಗೆದುಕೊಳ್ಳಲು ಪ್ರಯತ್ನ ಮಾಡಿದನು. ಬಿಜಾಪುರದಲ್ಲಿ ತನ್ನ ತಂದೆಯಾದ ಷಾಹಜಿಯು ಏರ್ಪಡಿಸಿದ ಸಂಧಿಯನ್ನು ಶಿವಾಜಿಯು ಉಲ್ಲಂಘಿಸಲಿಲ್ಲ. ಆದರೆ ಬಿಜಾಪುರದ ಸುಲ್ತಾನನು ಸಂಧಿಯನ್ನು ಅತಿಕ್ರಮಿಸಿ ಶಿವಾಜಿಯು ತೊಂದರೆಯಲ್ಲಿರುವಾಗ ಆತನ ರಾಜ್ಯವನ್ನು ಆಕ್ರಮಿಸಬೇಕೆಂದು ಯೋಚಿಸಿದನು. ಆದುದರಿಂದ ಈಗ ಶಿವಾಜಿಯು ಜಯಸಿಂಹನ ಪಕ್ಷವನ್ನು ಸೇರಿ ಸುಲ್ತಾನನಾದ ಅಲಿ ಅದಿಲ್‌ಷಹನ ಸಂಗಡ ಯುದ್ಧವನ್ನು ಪ್ರಾರಂಭಿಸಿದನು. ಸ್ವಲ್ಪ ಕಾಲದಲ್ಲಿಯೇ ಮಾವಳರ ಸೈನ್ಯಗಳು ಶತ್ರುಗಳನ್ನು ಜಯಿಸಿ ಅನೇಕ ದುರ್ಗಗಳನ್ನು ವಶಪಡಿಸಿಕೊಂಡವು.

ಪರಸ್ಪರ ಮೈತ್ರಿಯು ಹೆಚ್ಚಿದಂತೆಲ್ಲ ಶಿವಾಜಿ ಮತ್ತು ಜಯಸಿಂಹರ ವಿಶ್ವಾಸವು ಅಭಿವೃದ್ಧಿ ಹೊಂದುತ್ತ ಬಂದಿತು. ಇಬ್ಬರೂ ಒಂದು ಪ್ರದೇಶದಲ್ಲಿರುತ್ತ ಕಲೆತು ಯುದ್ಧ ಮಾಡುತ್ತಲಿದ್ದರು.

ಅಡಿಗಡಿಗೆ ರಘುನಾಥನು ಜನಾರ್ದನನ ಮನೆಗೆ ಹೋಗಿ ಬರುತ್ತಿದ್ದನು. ಜನಾರ್ದನನೂ ರಘುನಾಥನಲ್ಲಿ ಪುತ್ರವಾತ್ಸಲ್ಯವನ್ನಿರಿಸಿದ್ದನು. ಇವನು ಬರುವುದು ತಡವಾದರೆ ಜನಾರ್ದನನೇ ಹೇಳಿಕಳುಹುತ್ತಿದ್ದುದರಿಂದ ಆತನು ಬ್ರಾಹ್ಮಣನ ಬಳಿಗೆ ಬಂದು ನಾನಾವಿಧ ಪ್ರಸಂಗಗಳನ್ನು ಮಾಡುತ್ತಿದ್ದನು. ಒಂದೊಂದು ವೇಳೆ ರಾತ್ರಿ ಬಹಳ ಹೊತ್ತಿನವರೆಗೂ ಅಲ್ಲಿಯೇ ಕುಳಿತಿದ್ದು ಯುದ್ಧದ ವಿಷಯಗಳನ್ನು ವರ್ಣಿಸುತ್ತಿರುವನು. ಪಕ್ಕದ ಕಿರುಮನೆಯಲ್ಲಿ ಕುಳಿತಿದ್ದ ಸರಳೆಯು ಅವನ ಮಾತುಗಳನ್ನು ಲಾಲಿಸಿ ಕೇಳುತ್ತ, ಅವನಿಗೆ ಯಾವ ವಿಧವಾದ ಅಪಾಯವೂ ಬಾರದಿರಲೆಂದು ಭಗವಂತನನ್ನು ಬೇಡುತ್ತಿದ್ದಳು. ಅನಂತರ ಊಟಕ್ಕೆ ಎದ್ದು ರಘುನಾಥನು ಊಟ ಮಾಡುವವರೆಗೂ ಸರಳಬಾಲೆಯು ಅವನನ್ನೇ ದೃಷ್ಟಿಸಿ ನೋಡುತ್ತಿದ್ದಳು. ಎಷ್ಟು ನೋಡಿದರೂ ಅವಳಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ಭೋಜನಾನಂತರದಲ್ಲಿ ಆತನು ಮೃದುಸ್ವರದಿಂದ ಯಾವುದೋ ಒಂದೆರಡು ಮಾತುಗಳನ್ನಾಡಿ ಮನೆಗೆ ಹೊರಡುವಾಗಲೂ ಪ್ರತ್ಯುತ್ತರವೀಯಲಾರದೆ ಹೋಗುವಳು ; ಆನಂದಬಾಷ್ಪವು ತುಂಬಿ ಮಾತನಾಡಲು ತೊಂದರೆಪಡುತ್ತಿದ್ದಳು. ಅನಂತರ ದೂತಿಕಾ ಮುಖದಿಂದ ಅವನಿಗೆ ಸಮಾಧಾನವನ್ನು ಹೇಳಿಕಳುಹುತ್ತಿದ್ದಳು.

ಅದಕೆ ಸಮಾಧಾನವು ಆವಶ್ಯಕವೆ ? ಸರಳೆಯು ಕಣ್ಣಿನ ಧೋರಣೆಯನ್ನು ರಘುನಾಥನು ಬಲ್ಲನು ; ರಘುನಾಥನ ದೃಷ್ಟಿಯ ಸರಣಿಯು ಸರಳಬಾಲೆಗೆ ಗೊತ್ತು. ಇಬ್ಬರ ಚಿತ್ತಗಳೂ ಪ್ರಥಮ ಪ್ರಣಯಸಂಬಂಧದವು ; ಆದುದರಿಂದ ಇಬ್ಬರೂ ಅನಿರ್ವಚನೀಯವಾದ ಸಮ್ಮೋದದಲ್ಲಿ ಕೇಲಾಡುತ್ತಿದ್ದರು.

ಸ್ವಲ್ಪಕಾಲದೊಳಗಾಗಿ ಬಿಜಾಪುರದ ಅಧೀನತೆಗೊಳಪಟ್ಟ ಅನೇಕ ದುರ್ಗಗಳನ್ನು ಜಯಿಸಿ ಶಿವಾಜಿಪ್ರಭುವು ಕೊನೆಗೆ ಒಂದು ದುರ್ಗಮವಾದ ದುರ್ಗವನ್ನು ಹಿಡಿದುಕೊಳ್ಳಲು ಸಂಕಲ್ಪಿಸಿದನು. ತಾನು ಯಾವ ದುರ್ಗವನ್ನು ಆಕ್ರಮಿಸಿಕೊಳ್ಳುವನೋ ಆ ವಿಷಯವನ್ನು ಯಾರಸಂಗಡಲೂ ಹೇಳುತ್ತಿರಲಿಲ್ಲ. ಆತನ ಸೈನಿಕರಾ

ರಿಗೂ ಆ ವಿಷಯವು ತಿಳಿಯುತ್ತಿರಲಿಲ್ಲ. ಹಗಲು ಹೊತ್ತಿನಲ್ಲಿ ಆ ದುರ್ಗಕ್ಕೆ ೫-೬ ಹರದಾರಿ ದೂರದಲ್ಲಿ ಜಯಸಿಂಹನ ಬಿಡಾರದ ಸಮೀಪದಲ್ಲಿಯೇ ಶಿವಾಜಿಯ ಗುಡಾರವು ನಿರ್ಮಿಸಲ್ಪಟ್ಟಿದ್ದಿತು. ಸಾಯಂಕಾಲದಲ್ಲಿ ಸಾವಿರಮಂದಿ ಮಹಾರಾಷ್ಟ್ರರೂ ಮಾವಳರೂ ಯುದ್ಧಕ್ಕೆ ಸನ್ನದ್ಧರಾಗಿರಬೇಕೆಂದು ಆಜ್ಞಾಪಿಸಿ ಒಂದು ಜಾವದ ಹೊತ್ತು ಕಳೆದಮೇಲೆ ರುದ್ರಮಂಡಲಕ್ಕೆ ಹೋಗೋಣನೆಂದು ಹೇಳಿ ಶಿವಾಜಿಯು ನಿಶ್ಶಬ್ದವಾಗಿ ಅವರೊಡನೆ ಚೈತ್ರಯಾತ್ರೆಗೆ ಹೊರಟನು.

ಎರಡು ಜಾವದ ಹೊತ್ತಿಗೆ ಆತನು ರುದ್ರಮಂಡಲವನ್ನು ಸೇರಿದನು. ಆ ದುರ್ಗವು ಒಂದು ಉತ್ತುಂಗಶೃಂಗದಮೇಲೆ ಕಟ್ಟಲ್ಪಟ್ಟಿದ್ದಿತು. ಆಗ ಯುದ್ಧಸಮಯವಾದುದರಿಂದ ದುರ್ಗಕ್ಕೆ ಹೋಗುವ ದಾರಿಯು ಮುಚ್ಚಲ್ಪಟ್ಟಿದ್ದಿತು. ಉಳಿದ ಕಡೆಗಳಲ್ಲಿ ದುರ್ಗಕ್ಕೆ ಹತ್ತುವುದು ಕಷ್ಟ. ಆದರೆ ಗಿಡಗಳಿಂದಲೂ ಕಲ್ಲುಬಂಡೆಗಳಿಂದಲೂ ತುಂಬಿದ್ದ ಒಂದು ದಾರಿಯನ್ನು ತೋರಿಸಿ ಅದರಲ್ಲಿ ಇಳಿದು ದುರ್ಗವನ್ನು ಹತ್ತಬೇಕೆಂದು ಶಿವಾಜಿಯು ಸೈನಿಕರಿಗೆ ಆಜ್ಞಾಪಿಸಿದನು. ಪದಾತಿಗಳು ಬಿಡಾರಗಳ ಕೆಳಗೆ ಗಿಡದ ಕೊಂಬೆಗಳನ್ನು ಹಿಡಿದುಕೊಂಡು ಮೇಲಕ್ಕೆಹೋಗುತ್ತ ಕೆಲವು ಸ್ಥಳಗಳಲ್ಲಿ ನಿಲ್ಲುತ್ತ ಕೆಲವು ಪ್ರದೇಶಗಳಲ್ಲಿ ಕುಳಿತುಕೊಳ್ಳುತ್ತ, ಕೆಲವುಕಡೆ ದುಮುಕುತ್ತ, ನಾನಾವಿಧವಾಗಿ ಗಮ್ಯಸ್ಥಾನವನ್ನು ಸಮೀಪಿಸುತಿದ್ದರು. ಮಹಾರಾಷ್ಟ್ರರನ್ನು ಬಿಟ್ಟರೆ, ಆ ರೀತಿಯಾಗಿ ಪರ್ವತವನ್ನು ಹತ್ತಬಲ್ಲವರು ಇರಲಿಲ್ಲ. ಹೀಗೆ ಅರ್ಧದಾರಿ ಹತ್ತಿದ ಬಳಿಕ ಪ್ರಾಕಾರದಮೇಲೆ ಉರಿಯುತ್ತಿದ್ದ ದೀವಟಿಗೆಗಳ ಕಾಂತಿಯು ಹಠಾತ್ತಾಗಿ ದೃಕ್ಪಥವಾಯಿತು. ಶಿವಾಜಿಯು ಚಿಂತಾಮಗ್ನನಾದನು. ಆತನ ಒಳುಪಿಕೆಯು ಶತ್ರುಗಳಿಗೆ ತಿಳಿದಿರಬಹುದು ಇಲ್ಲದಿದ್ದರೆ ಪ್ರಾಕಾರದಲ್ಲಿ ಬೆಳಕಿಗೆ ಕಾರಣವೇನು ? ಶಿವಾಜಿಯು ತನ್ನ ಸೇವಕರಿಗೆ ಮತ್ತಷ್ಟು ಜಾಗರೂಕತೆಯಿಂದ ಹೋಗುವಂತೆ ಅಪ್ಪಣೆ ಮಾಡಿದನು. ಅವರು ಗಿಡಗಳ ಮೂದೆಗಳಲ್ಲಿಯೂ ಬಂಡೆಗಳ ಹಿಂದೆಯೂ ನಡೆಯುತ್ತ ಮೆಲ್ಲಮೆಲ್ಲನೆ ಹತ್ತುತ್ತ ನಿಶ್ಶಬ್ದವಾಗಿ ದುರ್ಗದ ಪ್ರಾಕಾರವನ್ನು ಸಮೀಪಿಸುತ್ತಿದ್ದರು. ಸ್ವಲ್ಪ ಹೊತ್ತಿಗೆ ಅವರು ಒಂದು ಸಮಪ್ರದೇಶಕ್ಕೆ ಬಂದು ಸೇರಿದರು. ಮೇಲಿಂದ ಬೆಳಕು ಕೆಳಕ್ಕೆ ಚೆನ್ನಾಗಿ ವ್ಯಾಪಿಸಿತು. ಇನ್ನು ಮುಂದೆ ಹೋದರೆ, ಮೇಲಿರುವವರು ಕೆಳಗಿರುವವರನ್ನು ನೋಡಬಹುದು. ಶಿವಾಜಿಯು ಕಂಬದಂತೆ ನಿಂತು ಅಲ್ಲಿ ಇಲ್ಲಿ ನೋಡತೊಡಗಿದನು. ಎಂಥಕತ್ತು ಗಜಗಳ

ದೂರದವರೆಗೆ ಯಾವ ಮರವೂ ಇರಲಿಲ್ಲ. ಸುತ್ತಲೂ ಕೋಟೆಯ ಗೋಡೆ. ಈ ಪ್ರದೇಶವನ್ನು ದಾಟುವುದು ಹೇಗೆ? ಪಕ್ಕಗಳಲ್ಲಿ ದಾರಿಯಿಲ್ಲ. ಕೆಳಗೆ ನೋಡಿದರೆ ಬಹು ದೂರ ಬಂದಿರುವುದಾಗಿದೆ, ಕೆಳಗಿಳಿದು ಪುನಃ ಇನ್ನೊಂದು ಭಾಗದಿಂದ ದುರ್ಗವನ್ನು ಸೇರುವುದಕ್ಕೆ ಮೊದಲೇ ಸೂರ್ಯೋದಯವಾಗುವುದು ಶಿವಾಜಿಯು ಒಂದು ಕ್ಷಣ ಏನನ್ನೋ ಯೋಚಿಸಿದನು. ಬಳಿಕ ತಾನಾಜಿಯು ಹೊರಟುಹೋದನು. ಶಿವಾಜಿಯು ಅವನ ಆಗಮನವನ್ನು ಇದಿರುನೋಡುತ್ತಿದ್ದನು. ಸೇವಕರೆಲ್ಲರೂ ಪ್ರಭುವಿನ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದರು.

ಸ್ವಲ್ಪ ಹೊತ್ತಿನಮೇಲೆ ತಾನಾಜಿಯು ಮತ್ತೆ ಬಂದು ಮೃದುಸ್ವರದಿಂದ ಶಿವಾಜಿಯ ಸಂಗಡ ಏನನ್ನೋ ಹೇಳಿದನು. ಸ್ವಲ್ಪ ಯೋಚಿಸಿ-"ಆ ದಾರಿಯೇ ? ಆಗಲಿ, ಉಪಾಯಾಂತರವಿಲ್ಲ" ಎಂದು ಶಿವಾಜಿಯು ಹೇಳಿದನು.

ಮಳೆಯ ನೀರು ಕೆಳಗೆ ಬಿದ್ದು ಒಂದು ಪ್ರದೇಶವು ಹಳ್ಳವಾಗಿದ್ದಿತು. ಆ ಹಳ್ಳವು ಚಿಕ್ಕ ನದಿಯಂತೆ ಹರಿಯುತ್ತಿದ್ದಿತು ಸೈನಿಕರು ಅದರಲ್ಲಿ ಬಗ್ಗಿ ನಡೆದುಕೊಂಡುಹೋಗುತ್ತಿದ್ದರು. ಎರಡು ಪಕ್ಕಗಳು ಎತ್ತರವಾಗಿದ್ದುದರಿಂದ ದುರ್ಗದ ನಿವಾಸಿಗಳು ಶತ್ರುಗಳನ್ನು ನೋಡಲು ಅವಕಾಶವಿರದು. ಆದುದರಿಂದ ಸೈನಿಕರೆಲ್ಲರೂ ನಿಶ್ಶಬ್ದವಾಗಿ ಆ ಪ್ರವಾಹದ ನಡುವೆ ನಡೆದು ಶೀಘ್ರವಾಗಿ ವೃಕ್ಷಶ್ರೇಣಿಯಲ್ಲಿ ಪ್ರವೇಶಿಸಿದರು. ಶಿವಾಜಿಯು ತನ್ನ ಅಂತರಂಗದಲ್ಲಿ ಭವಾನೀದೇವಿಯನ್ನು ಸ್ತುತಿಸುತ್ತಿದ್ದನು.

ಆತನ ಪಕ್ಕದಲ್ಲಿ ಒಬ್ಬ ಸೈನಿಕನು ಹಠಾತ್ತಾಗಿ ನೆಲದಮೇಲೆ ಬಿದ್ದು ಒರಗಿದನು. ನೋಡಲು ಅವನ ವಕ್ಷಸ್ಥಳದಲ್ಲಿ ಬಾಣವು ನೆಟ್ಟುಕೊಂಡಿದ್ದಿತು. ಆಗ ಪುಂಖಾನುಪುಂಖವಾಗಿ ಶರವರ್ಷವು ಸುರಿಯಲಾರಂಭಿಸಿತು ದುರ್ಗದ ಸುತ್ತಲೂ ಇದ್ದ ರಕ್ಷಕಭಟರು ಶಿವಾಜಿಯ ಸೇನೆಯನ್ನು ನೋಡುತ್ತಿದ್ದುದರಿಂದ ನಾಲ್ಕು ದಿಕ್ಕುಗಳಿಂದಲೂ ಬಾಣಗಳನ್ನು ಬಿಡುತ್ತಿದ್ದರು.

ಮಹಾರಾಷ್ಟ್ರದ ಪತಾಕೆಯು ವೃಕ್ಷಗಳ ನಡುವೆ ಪ್ರವೇಶಿಸಿತು. ಬಾಣವು ಕಡಿಮೆಯಾಗುತ್ತ ಬಂದಿತು ವೈರಿಗಳು ಜಾಗರೂಕರಾಗಿರುವರೆಂದು ಶಿವಾಜಿಗೆ ಗೊತ್ತಾಯಿತು. ಗೋಡೆಯ ಸುತ್ತಲೂ ದೀಪಗಳು ಉರಿಯುತ್ತಿದ್ದುವು. ರಕ್ಷಕ

ಭಟರು ಅಲ್ಲಲ್ಲಿ ತಿರುಗಾಡುತ್ತಿದ್ದರು. ಆ ಸಮಯದಲ್ಲಿ ಮಹಾರಾಷ್ಟ್ರರು ಗೋಡೆಗೆ ಎಂಟು ಅಡಿಗಳ ದೂರದಲ್ಲಿದ್ದರು. ದುರ್ಗದೊಳಗೆ ಪ್ರವೇಶಿಸಿದರೆ ಯುದ್ಧ ಮಾಡದ ಹೊರತು ಮತ್ತೊಂದು ಉಪಾಯವಿಲ್ಲವೆಂದು ಶಿವಾಜಿಯು ನಿರ್ಧರಿಸಿದನು.

ಆಗ ತಾನಾಜಿಯು ಶಿವಾಜಿಯನ್ನು ನೋಡಿ,-''ರಾಜಾ! ಇಳಿದು ಹೋಗುವುದಕ್ಕೆ ಇನ್ನೂ ಕಾಲವಿರುತ್ತದೆ. ಈ ದಿನ ನಮ್ಮ ಕೆಲಸವಾಗದಿದ್ದರೆ ನಾಳೆಯಾದರೂ ಈ ದುರ್ಗವು ನಮಗೆ ಸ್ವಾಧೀನವಾಗುವುದು ಈ ದಿನದ ಪ್ರಯತ್ನವು ನಮಗೆ ನಷ್ಟಕ್ಕೆ ಕಾರಣವಾಗಬಹುದು.'' ಎಂದು ಹೇಳಿದನು.

ಶಿವಾಜಿಯು ಗಂಭೀರವಾಕ್ಯದಿಂದ 'ಏನು! ಜಯಸಿಂಹನ ಬಳಿಯಲ್ಲಿ ಮಾಡಿದ ವಾಗ್ದಾನವನ್ನು ನಡೆಯಿಸಬೇಡವೆ? ರುದ್ರ ಮಂಡಲವನ್ನು ಜಯಿಸಬೇಕು, ಇಲ್ಲದಿದ್ದರೆ ಯುದ್ಧದಲ್ಲಿ ಮೃತನಾಗಬೇಕು.' ಎಂದನು

ಸಾಲುಮರಗಳ ಹಿಂದೆ ಬಿದ್ದು ಹೋಗುತ್ತ ದುರ್ಗದಲ್ಲಿದ್ದವರನ್ನು ಮೋಸಪಡಿಸುವುದಕ್ಕಾಗಿ ಇನ್ನೊಂದು ಪಾರ್ಶ್ವಕ್ಕೆ ನೂರು ಮಂದಿ ಸೈನಿಕರನ್ನು ಕಳುಹಿಸಿ, ಶಿವಾಜಿಯು ಫಲಿತಾಂಶವನ್ನು ನಿರೀಕ್ಷಿಸುತ್ತಿದ್ದನು ಕೂಡಲೇ ಎರಡನೆಯ ಸಾರಿ ಬಂದೂಕುಗಳ ಶಬ್ದವು ಕೇಳಿಸಿತು. ದುರ್ಗವು ಆಕ್ರಮಿಸಲ್ಪಟ್ಟಿತೆಂದು ತಿಳಿದು, ಗೋಡೆಯ ಮೇಲಿದ್ದ ರಕ್ಷಕಭಟರೂ ದುರ್ಗದಲ್ಲಿದ್ದ ಸೈನಿಕರೂ ಆ ಸ್ಥಳಕ್ಕೆ ಬಂದರು. ಅಷ್ಟರಲ್ಲಿ ಕತ್ತಿಗಳ ಹೊಡೆದಾಟಕ್ಕೆ ಪ್ರಾರಂಭವಾಯಿತು. ಆಗ ಶಿವಾಜಿಯು ತನ್ನ ಸೈನಿಕರನ್ನು ಕುರಿತು,— "ಸುಭಟರೇ! ಅನೇಕ ಯುದ್ಧಗಳಲ್ಲಿ ನಿಮ್ಮ ನಿಮ್ಮ ಪರಾಕ್ರಮವನ್ನು ಪ್ರಕಟಿಸಿ, ಶಿವಾಜಿಯು ಗೌರವವನ್ನು ಕಾಪಾಡಿದಿರಿ; ಈ ದಿನವೂ ಅದೇ ರೀತಿಯಾಗಿ ಪ್ರವರ್ತಿಸಬೇಕು. 'ತಾನಾಜೀ! ನಿಮ್ಮ ಸೌಹಾರ್ದ್ರವನ್ನು ಇಂದು ತೋರ್ಪಡಿಸಬೇಕು.' ಎಂದು ಉತ್ಸಾಹದಿಂದಾಡಿದನು.

ಪ್ರಭುವಾಕ್ಯದಿಂದ ಎಲ್ಲರೂ ಉತ್ಸಾಹಶಾಲಿಗಳಾಗಿ ನಿಶ್ಶಬ್ದವಾಗಿ ಭಿತ್ತಿಯನ್ನು ಸಮೀಪಿಸುತ್ತಿದ್ದರು. ಗಿಡದ ಮರೆಯಲ್ಲಿ ಶಬ್ದವನ್ನು ಕೇಳಿ, ಒಬ್ಬ ರಕ್ಷಕಭಟನು ಅದೇನಿರಬಹುದೆಂದು ನೋಡಲು ಗೋಡೆಯ ಮೇಲೆ ಸ್ವಲ್ಪ ಮುಂದಕ್ಕೆ ಬಂದನು. ಕೂಡಲೆ, ಒಬ್ಬ ಮಾವಳ ಸೈನಿಕನು ಅವನನ್ನು ಬಂದೂಕಿನಿಂದ ಹೊಡೆಯಲು, ಗೋಡೆಯ ಮೇಲಿನಿಂದ ಆ ನಿರ್ಭಾಗ್ಯನು ದೊಪ್ಪನೆ ಕೆಳಕ್ಕೆ ಬಿದ್ದನು

ಆ ಶಬ್ದವನ್ನು ಕೇಳಿ ಒಬ್ಬೊಬ್ಬರಾಗಿ ಮುನ್ನೂರು ಮಂದಿ ಮುಸಲ್ಮಾನರು ಗುಂಪಾಗಿ ಬಂದರು. ಶಿವಾಜಿಯು ಕೋಪದಿಂದ ಹಲ್ಲನ್ನು ಕಡಿಯುತ್ತ ಇನ್ನೂ ಅಡಗಿರುವುದು ನಿಷ್ಫಲವೆಂದು ಭಾವಿಸಿ, ತನ್ನ ಸೈನಿಕರನ್ನು ಮುಂದಕ್ಕೆ ನಡೆಯಿಸತೊಡಗಿದನು. ಆಗ "ಹರಹರ ಮಹಾದೇವ" ಎಂಬ ಮಹಾರಾಷ್ಟ್ರರ ಯುದ್ಧನಾದವು ಗಗನವನ್ನು ಮುಟ್ಟಿದ್ದಿತು. ಒಂದು ಸೈನ್ಯವು ಕೋಟೆಯ ಗೋಡೆಯನ್ನು ದಾಟುವುದಕ್ಕೆ ಓಡಿಹೋಯಿತು. ಮಿಕ್ಕ ಬಲವು ವೃಕ್ಷಗಳ ಹಿಂದೆನಿಂತಿದ್ದು ಮುಸಲ್ಮಾನರ ಮೇಲೆ ವಿರಾಮವಿಲ್ಲದಂತೆ ಬಾಣಗಳನ್ನು ಬಿಡುತ್ತಿದ್ದಿತು

ಗೋಡೆಯ ಮೇಲಿದ್ದ ಮುಸಲ್ಮಾನರು ಕತ್ತಿ—ಈಟಿಗಳಿಂದ ಹಿಂದುಗಳನ್ನು ಹಿಂಸಿಸತೊಡಗಿದರು. ಮಹಾರಾಷ್ಟ್ರರು ಆ ಶರಗಳಿಂದ ಮುಸಲ್ಮಾನರನ್ನು ವಧಿಸತೊಡಗಿದರು ಯುದ್ಧರಂಗವು ಹೆಣದ ಬೇಟೆಯಾಯಿತು. ರಕ್ತವು ಪ್ರವಾಹದಂತೆ ಹರಿಯಿತು. ಅಫಘನ್ನರೂ ಕೈಲಾಗದವರಲ್ಲ. ಆದರೂ ನಾನಾ ಕಡೆಗಳಿಂದ ಬರುತ್ತಿದ್ದ ಶರಪರಂಪರೆಗಳಿಂದ ಅವರ ಬಲವು ಕ್ರಮವಾಗಿ ಕಡಮೆಯಾಗುತ್ತ ಬಂದಿತು.

ಈ ರೀತಿ ಯುದ್ಧವು ನಡೆಯುತ್ತಿರಲು ಆಕಸ್ಮಿಕವಾಗಿ 'ಶಿವಾಜಿಗೆ ಜಯ' ಎಂಬ ಸಿಂಹನಾದವು ಗಗನವನ್ನು ಮುಟ್ಟಿತು. ಕ್ಷಣಕಾಲ ಎಲ್ಲರೂ ಆ ಕಡೆ ನೋಡಿದರು. ಅಡ್ಡವಾಗಿ ಭೇದಿಸಿಕೊಂಡು ರಕ್ತದಿಂದ ಮೆರೆಯುತ್ತಲಿದ್ದ ಕತ್ತಿಯನ್ನು ಹಿಡಿದು ರಾಜಪುತ್ರನೊಬ್ಬನು ರುದ್ರಮಂಡಲ ದುರ್ಗದ ಪ್ರಾಕಾರದ ಮೇಲೆ ಧುಮುಕಿ, ಪಠಾಣರ ಪತಾಕೆಯನ್ನು ಕಾಲಿನಿಂದ ಒದೆದು, ಕೆಳಗೆ ತಳ್ಳಿ, ಆ ರಕ್ಷಕ ಭಟನನ್ನು ಖಡ್ಗದಿಂದ ಕತ್ತರಿಸಿ, ಗಂಭೀರಸ್ವರದಿಂದ "ಶಿವಾಜಿಮಹಾರಾಜನಿಗೆ ಜಯ" ಎಂದು ಗಟ್ಟಿಯಾಗಿ ಕೂಗಿಹೇಳಿದನು. (ಈತನೇ ರಘುನಾಥಸಿಂಹನು)

ಹಿಂದುಗಳು ಮುಸಲ್ಮಾನರ ಸಂಗಡ ನಿಮಿಷಮಾತ್ರ ಯುದ್ಧವನ್ನು ನಿಲ್ಲಿಸಿ, ಅತ್ಯಾಶ್ಚರ್ಯದಿಂದ ನಕ್ಷತ್ರಕಾಂತಿಯಿಂದ ಸ್ವಲ್ಪಮಟ್ಟಿಗೆ ಕಾಣಿಸುತಿದ್ದ ಆಜಾನುಬಾಹುವನ್ನು ನೋಡಿದರು. ಆತನ ಸೌಕುಮಾರ್ಯ ಸೌಂದರ್ಯಗಳಿಗೆ ತಕ್ಕಂತೆ ಸ್ವಾಭಾವಿಕವಾದ ಕ್ಷಾತ್ರತೇಜವು ಉಕ್ಕುವಂತೆ ತೋರುತ್ತಿದ್ದು, ರಕ್ತದಿಂದ ನೆನೆಯಲ್ಪಟ್ಟ ಹಸ್ತಗಳೂ ಬಾಹುಗಳೂ ಮತ್ತಷ್ಟು ಹೊಳೆಯುವಂತೆ ಮಾಡಿದ್ದುವು ಶತ್ರುಗಳನ್ನು ವಧಿಸಿ, ಜಯವನ್ನು ಸಂಪಾದಿಸಿದ ಆತನ ಖಡ್ಗವು ಚಲಿಸುತ್ತಿದ್ದಿತು. ಕಣ್ಣುಗಳ ಮೇಲೆ ಕೂದಲುಗಳ ಕುಚ್ಚುಗಳು ವಾಲುತ್ತಿದ್ದವು. ಹಡಗಿನ ಇದಿರಿಗೆ ಅಲೆಗಳ

ರೀತಿಯಾಗಿ ಆ ವೀರನ ಇದಿರಿಗೆ ಶತ್ರುಸಮೂಹವು ನಿಲ್ಲದೆ ಎರಡು ಭಾಗವಾಗಿ ಓಡಿಹೋದುವು. ರಣಾಧಿದೇವತೆಯು ದೊಡ್ಡದಾದ ಖಡ್ಗವನ್ನು ಹಿಡಿದು ಆಕಾಶದಿಂದ ರುದ್ರಮಂಡಲದುರ್ಗ ಪ್ರಾಕಾರದ ಮೇಲೆ ಮೂರ್ತೀಭವಿಸಿದಂತೆ ಕ್ಷಣಕಾಲ ನೋಡುವವರಿಗೆ ಕಾಣಿಸಿತು. ಎಲ್ಲರೂ ತದೇಕದೃಷ್ಟಿಯಿಂದ ಸುಮ್ಮನೆ ನಿಂತು ನೋಡುತ್ತಿದ್ದರು. ತಮ್ಮ ಗೋಡೆಯ ಮೇಲೆ ಶತ್ರುವು ಹತ್ತಿದನೆಂದು ತಿಳಿದುಕೊಂಡು ಮುಸಲ್ಮಾನರು ನಾಲ್ಕು ದಿಕ್ಕುಗಳಿಂದಲೂ ಓಡಿಬಂದು ರಘುನಾಥನನ್ನು ಮುತ್ತಿದರು. ಕತ್ತಿಯನ್ನೂ ಭರ್ಜಿಯನ್ನೂ ಉಪಯೋಗಿಸುವುದರಲ್ಲಿ ರಘುನಾಥನು ಅದ್ವಿತೀಯನು. ಆದರೆ, ಬಹುಮಂದಿಯ ಇದಿರಾಗಿ ಒಬ್ಬನೇ ನಿಂತು ಹೋರಾಡುವುದು ಕಷ್ಟ. ಆತನ ಜೀವನವು ಸಂಶಯಗ್ರಸ್ತವಾಗಿದ್ದಿತು.

ಆಗ ಮಾವಳರು ರಘುನಾಥನ ವೀರವಿಹಾರವನ್ನು ನೋಡಿ ಉತ್ಸಾಹವಂತರಾಗಿ ಅವನಿಗೆ ಸಹಾಯಕ್ಕಾಗಿ ಗೋಡೆಯ ಹತ್ತಿರಕ್ಕೆ ಓಡಿದರು. ದುಮುಕುವುದರಲ್ಲಿಯೂ ಹಾರುವುದರಲ್ಲಿಯೂ ಇಳಿಯುವುದರಲ್ಲಿಯೂ ಪ್ರವೀಣರಾದ ಮಾವಳರು ಜಂಗನೆ ಆ ಗೋಡೆಯ ಮೇಲೆ ಹಾರಿ ಕಾರ್ಮುಗಿಲಿನಂತೆ ರಘುನಾಥನ ಸುತ್ತ ಮುತ್ತಿದ್ದ ಆಫಘನ್ನರ ಮೇಲೆ ಹೆಬ್ಬುಲಿಗಳಂತೆ ಬಿದ್ದರು. ಮಹಾರಾಷ್ಟ್ರರು ಲೆಕ್ಕಕ್ಕೆ ಹೆಚ್ಚಾಗಿದ್ದುದರಿಂದ ಮುಸಲ್ಮಾನರನ್ನು ನುಜ್ಜುಗುಜ್ಜಾಗಿ ಮಾಡಿ ಪ್ರಚಂಡ ಸಿಂಹನಾದ ಮಾಡಿದರು.

ಅಷ್ಟುಹೊತ್ತಿಗೆ ಶಿವಾಜಿ ತಾನಾಜಿಯರಿಬ್ಬರೂ ಗೋಡೆಯಮೇಲಿನಿಂದ ದುರ್ಗದೊಳಕ್ಕೆ ಧುಮುಕಿದರು. ಯುದ್ಧಮಾಡುವುದು ಸರಿಯಲ್ಲವೇ. ಮಹಾರಾಷ್ಟ್ರರು ತಮ್ಮ ಪ್ರಭುವನ್ನು ಅನುಸರಿಸಿದರು.

ಶಿವಾಜಿಯು ಕೂಡಲೇ ಕಿಲ್ಲೇದಾರನ ಅರಮನೆಯನ್ನು ಸಮೀಪಿಸಿದನು. ಅದು ದುರ್ಭೇದ್ಯವಾದುದು. ಕಾವಲಿನವರನ್ನು ಕೊಂದು ಮಹಾರಾಷ್ಟ್ರರು ಅರಮನೆಯನ್ನು ಮುತ್ತಿದರು. ಕಿಲ್ಲೇದಾರನನ್ನು ಕರಿತು ಶಿವಾಜಿಯು, 'ಬಾಗಿಲನ್ನು ತೆಗೆ, ಇಲ್ಲದಿದ್ದರೆ ಮನೆಯನ್ನು ಸುಡಿಸುವೆನು.' ಎಂದನು. ಅದಕ್ಕೆ "ಕಾಫರನಿಗೆ ಮಾತ್ರ ಬಾಗಿಲನ್ನು ತೆರೆಯೆನು; ಬೆಂಕಿಯಿಂದಲಾದರೂ ಸುಡಿಸುವೆನು." ಎಂದು ಕಿಲ್ಲೇದಾರನು ಧೈರ್ಯವಾಗಿ ಉತ್ತರಕೊಟ್ಟನು.

ತತ್‌ಕ್ಷಣವೇ ಮಹಾರಾಷ್ಟ್ರರು ಪಂಜುಗಳನ್ನು ತಂದು ಮಂದಿರಕ್ಕೆ ಬೆಂಕಿ ಹಚ್ಚಿಸಿದರು. ಮೇಲಿಂದ ಕಿಲ್ಲೇದಾರನೂ ಅವನ ಹಿಂಬಾಲಕರೂ ಬಾಣಗಳನ್ನು ಬಿಡತೊಡಗಿದರು. ಕೆಲವರು ಹಿಂದೂಗಳೂ ಮೃತಪಟ್ಟರು. ಕಡೆಗೆ ಎಲ್ಲಾ ಕಡೆಯಲ್ಲಿಯೂ ಉರಿಯು ಸುತ್ತಿಕೊಂಡಿತು. ಮೊತ್ತಮೊದಲು ಬಾಗಿಲುಗಳೂ ಕಿಟಿಕಿಗಳೂ ಉರಿದು ಹೋದುವು. ಕ್ರಮವಾಗಿ ಆ ಉನ್ನತವಾದ ಅರಮನೆಯು ಉರಿಯ ಜ್ವಾಲೆಯಿಂದ ಸುಟ್ಟುಹೋಯಿತು. ಆ ಬೆಳಕು ಬಹುದೂರ ವ್ಯಾಪಿಸಿದ್ದುದರಿಂದ ಮುಸಲ್ಮಾನರ ದುರ್ಗವನ್ನು ಹಿಂದುಗಳು ಸುಟ್ಟುಹಾಕುತ್ತಿರುವರೆಂದು ಪ್ರಜೆಗಳು ಭಾವಿಸಿದರು.

ಸಾಧ್ಯವಾಗುವವರೆಗೂ ಕಿಲ್ಲೇದಾರ,-ರಹಿಮುತ್‌ಖಾನನು ಉರಿಯನ್ನಾರಿಸಲು ಪ್ರಯತ್ನಪಟ್ಟನು. ಸಾಧ್ಯವಾಗಲಿಲ್ಲ. ಉರಿಯು ಹೆಚ್ಚಾಗಲು ಸಪರಿವಾರನಾಗಿ ಕೆಳಕ್ಕೆ ಧುಮಿಕಿ ಆಯುಧದಿಂದ ಶತ್ರುಗಳನ್ನು ಸಂಹರಿಸುತ್ತ ಬಂದನು. ಆದರೆ ಹೀಗೆ ಎಷ್ಟು ಹೊತ್ತು ನಡೆದೀತು ? ಮಹಾರಾಷ್ಟ್ರರು ಅವನ ಪರಿವಾರದವರನ್ನು ಸಂಹರಿಸಿ, ಅವನ ಮೈಮೇಲೆ ಬಲವಾದ ಗಾಯಗಳನ್ನುಂಟುಮಾಡಿದರು. ಆದರೂ ಅವನು ಹಿಂದೆಗೆಯದೆ ಭಯಂಕರನಾಗಿ ವೈರಿಗಳ ಸಂಗಡ ಕಾದಾಡುತ್ತಿದ್ದನು. ಮಹಾರಾಷ್ಟ್ರರು ಅವನ ಸುತ್ತಲೂ ಮುತ್ತಿಕೊಂಡರು. ನಾಲ್ಕು ದಿಕ್ಕುಗಳಲ್ಲಿಯೂ ಖಡ್ಗಗಳು ಮೇಲಕ್ಕೆದ್ದುವು. ರಹಿಮುತ್‌ಖಾನನು ಜೀವಿಸುವನೆಂಬ ಆಶೆಯು ಹೋಯಿತು. ಆ ಸಮಯದಲ್ಲಿ ಗಟ್ಟಿಯಾದ ಸ್ವರದಿಂದ ' ಕಿಲ್ಲೇದಾರನನ್ನು ಬಂಧಿಸಿರಿ, ಪ್ರಾಣವನ್ನು ಮಾತ್ರ ತೆಗೆಯಬೇಡಿರಿ.' ಎಂದು ಶಿವಾಜಿಯ ಆಜ್ಞೆಯಾದುದರಿಂದ ಅವರು ಅವನನ್ನು ಕೊಲ್ಲದೆ ಅವನ ಕೈಯಿಂದ ಕತ್ತಿಯನ್ನು ಕಿತ್ತುಕೊಂಡು ಕೈಗಳನ್ನು ಬಿಗಿದು ಕಟ್ಟಿದರು.

ಮಹಾರಾಷ್ಟ್ರರು ಉರಿಯನ್ನಾರಿಸುತ್ತಿರಲು ದುರ್ಗದ ಪೂರ್ವದಿಕ್ಕಿನಲ್ಲಿ ಐದುನೂರು ಮಂದಿ ಮುಸಲ್ಮಾನ ಸೈನಿಕರು ಬೆಟ್ಟವನ್ನು ಹತ್ತುತ್ತಿದ್ದರು. ವೈರಿಗಳನ್ನು ಭ್ರಮೆಪಡಿಸುವುದಕ್ಕೆ ಶಿವಾಜಿಯು ಮುಂದಾಗಿ ನೂರು ಮಂದಿ ಪದಾತಿಗಳನ್ನು ಎರಡನೆಯ ಕಡೆಗೆ ಕಳುಹಿಸಲು ಅಫಘನ್ನರು ಐದೂರುಮಂದಿಯೂ ಆ ದಿಕ್ಕಿಗೆ ಓಡಿಹೋದರು. ಆ ನೂರು ಮಂದಿಯೂ ಗಿಡಗಳ ಮರೆಯಲ್ಲಿ ಸ್ವಲ್ಪ ಅಡಗಿಕೊಂಡಿದ್ದು ಕ್ರಮಕ್ರಮವಾಗಿ ಪಲಾಯನಮಾಡತೊಡಗಿದರು. ಮುಸಲ್ಮಾನರು ಮೋಸಹೋಗಿ,

ಅವರನ್ನು ಹಿಂಬಾಲಿಸುತ್ತ ಬಂದರು ಶಿವಾಜಿಯು ದುರ್ಗವನ್ನು ಪ್ರವೇಶಿಸಿದನೆಂದು ಅವರು ತಿಳಿಯಲಾರದೆ ಹೋದರು ; ಆದರೆ ಸ್ವಲ್ಪಹೊತ್ತಿನಮೇಲೆ ಅರಮನೆಯು ಉರಿಯನ್ನು ಕಂಡು ತಮ್ಮ ಭ್ರಮೆಯನ್ನು ತಿಳಿದವರಾಗಿ ಕೂಡಲೇ ದುರ್ಗದೊಳಗೆ ಹೋಗಿ, ಶತ್ರುಗಳನ್ನು ನಾಶಮಾಡಲು ಪ್ರಯತ್ನಪಟ್ಟರು. ಅಷ್ಟರಲ್ಲಿ ಶಿವಾಜಿಯು ಸ್ವಲ್ಪ ಸಂಖ್ಯೆಯಾಗಿದ್ದ ಶತ್ರುಗಳನ್ನು ನಾಶಮಾಡಿ ದುರ್ಗವನ್ನು ಸ್ವಾಧೀನಪಡಿಸಿಕೊಂಡಿದ್ದನು. ಆದರೆ ಈಗ ಒಟ್ಟಾಗಿ ಬರುತ್ತಿದ್ದ ಐದುನೂರು ಮಂದಿ ಸೈನಿಕರನ್ನು ನೋಡಿ ಚಿಂತಾಮಗ್ನನಾದನು.

ಅರಮನೆಯು ಅಸಾಧ್ಯವಾದುದೆಂದು ಈವರೆಗೆ ಹೇಳಿರುವೆವು. ಅದರ ಸುತ್ತಲಿರುವ ಕಲ್ಲಿನ ಗೋಡೆಯು ಬೆಂಕಿಯಿಂದ ನಷ್ಟವಾಗಲಿಲ್ಲ. ಅದರ ಮರೆಯಿಂದ ಇತರರೊಡನೆ ಯುದ್ಧಮಾಡುವುದು ಸುಲಭ. ಶಿವಾಜಿಯು ಇನ್ನೂರು ಮಂದಿ ಸೈನಿಕರನ್ನು ಅಲ್ಲಿ ನಿಲ್ಲಿಸಿ ಉಳಿದ ಪ್ರದೇಶಗಳಲ್ಲಿ ಸಾಕಾದಷ್ಟು ಮಂದಿಯನ್ನು ಇರಿಸಿ, ಪ್ರಾಕಾರದ ಮೇಲೆ ಕವಚಧಾರಿಗಳನ್ನು ಸೇರಿಸಿದನು. ಕೆಲವು ಸ್ಥಳಗಳಲ್ಲಿ ಕಲ್ಲುಗಳನ್ನು ತೆಗೆಯಿಸಿ ಅವುಗಳನ್ನು ಮತ್ತೊಂದೆಡೆಯಲ್ಲಿ ಗುಡ್ಡೆಗಳಾಗಿ ಸೇರಿಸಿದನು. ಹತ್ತು ನಿಮಿಷಗಳಲ್ಲಿ ಎಲ್ಲವೂ ಸಿದ್ಧವಾಯಿತು.

ಶಿವಾಜಿ—(ಮಂದಹಾಸದಿಂದ) ತಾನಾಜೀ ! ಶತ್ರುಗಳು ಇಲ್ಲಿಗೆ ಬಂದರೆ ಚೆನ್ನಾಗಿ ಅಲ್ಲಿನಿಂದ ಏಟುಗಳನ್ನು ತಿನ್ನಬಹುದು. ಇನ್ನೂ ಅವರು ಪರ್ವತವನ್ನು ಹತ್ತುತ್ತಿರುವರು. ಇದೇ ಅವರ ಮೇಲೆ ಬೀಳುದಕ್ಕೆ ತಕ್ಕ ಸಮಯ. ನೀನು ಈ ಭಟರಿಗೆ ಅಧಿಪತಿಯಾಗಿರು. ನಾನು ಮತ್ತೊಂದು ಸಾರಿ ಸಾಹಸಪಡುವೆನು.

ತಾನಾಜಿ—ನಾನು ಇಲ್ಲಿರೆನು. ಸ್ವಾಮಿಯವರೇ ಇರಬೇಕು. ಅಲ್ಲಿ ಬರುತ್ತಿರುವವರನ್ನು ಓಡಿಸುವುದಕ್ಕೆ ನಿಮ್ಮ ಸೇವಕನು ಸಮರ್ಥನಲ್ಲವೆ ?

ಶಿವಾಜಿ—(ಕಿರುನಗೆಯಿಂದ) ತಾನಾಜೀ ! ನೀನು ಹೇಳುವುದು ಯುಕ್ತವಾಗಿದೆ. ನೀನು ಹೇಳುವಂತೆಯೇ ನಾನು ಇಲ್ಲಿರುವುದು ಮೇಲು. ಇನ್ನೂರುಮಂದಿ ಸೈನಿಕರ ಸಹಾಯದಿಂದ ಕತ್ತಲೆಯಲ್ಲಿ ಹಠಾತ್ತಾಗಿ ಮುಸಲ್ಮಾನರ ಮೇಲೆ ಬೀಳುವ ಹವಾಲ್ದಾರನು ಯಾರೂ ಇಲ್ಲವೆ ?

ಶಿವಾಜಿಯ ಮಾತನ್ನು ಕೇಳಿದ ಕೂಡಲೇ ಹತ್ತುಮಂದಿ ಹವಾಲ್ದಾರರು ಮುಂದಕ್ಕೆ ಬಂದರು. ರಘುನಾಥನು ಅವರ ಹಿಂದೆ ಇದ್ದನು. ಅವನು ಏನೂ ಮಾತನಾಡಲಿಲ್ಲ. ಕೆಳಗೆ ನೋಡುತ್ತಿದ್ದನು.

ಶಿವಾಜಿಯು ಅವರೆಲ್ಲರನ್ನೂ ನೋಡಿದನು. ಕಡೆಗೆ ಅವನ ದೃಷ್ಟಿಯು ರಘುನಾಥನಿದ್ದಕಡೆಗೆ ಬಿದ್ದಿತು. ಅವನನ್ನು ನೋಡಿ, "ಹವಾಲ್ದಾರನೇ! ಇವರಲ್ಲಿ ನೀನು ಚಿಕ್ಕವನು. ಆದರೂ ಸಾಹಸಿಗರನು. ನೀನೇ ದುರ್ಗವಿಜಯವನ್ನು ಪ್ರಾರಂಭಿಸಿದೆ. ಆದುದರಿಂದ ನೀನೇ ಅದನ್ನು ಸಂಪೂರ್ಣಮಾಡು." ಎಂದು ಅನುಗ್ರಹಿಸಿದನು.

ನಿಶ್ಶಬ್ದವಾಗಿ ರಘುನಾಥನು ತಲೆಯನ್ನು ಬಗ್ಗಿಸಿ ಗೊತ್ತಾಗಿದ್ದ ಸೈನ್ಯದ ಸಂಗಡ ಹೊರಟುಹೋದನು. ಆಗ ಶಿವಾಜಿಯು ತಾನಾಜಿಯ ಸಂಗಡ ಹೀಗೆಂದನು: 'ಈ ಹವಾಲ್ದಾರನು ರಾಜಪುತ್ರನು. ಇವನನ್ನು ನೋಡಿದರೆ ಕುಲೀನನೆಂದು ತೋರುವುದು. ತಾನು ಮಾತ್ರ ತನ್ನ ವಂಶವನ್ನು ಕುರಿತು ಎಂದಿಗೂ ಹೇಳನು. ತನ್ನ ಸಾಹಸಕ್ಕೆ ಗರ್ವಪಡನು ಒಂದುದಿನ ಪೂನಾನಗರದಲ್ಲಿ ನನ್ನ ಪ್ರಾಣವನ್ನು ಸಂರಕ್ಷಿಸಿರುವನು. ಇಂದಿನ ವಿಜಯದಲ್ಲಿ ಅಗ್ರೇಸರನಾಗಿರುವನು. ಈವರೆಗೂ ರಘುನಾಥನಿಗೆ ಬಹುಮಾನಕೊಡಲಿಲ್ಲ. ನಾಳಿನದಿನದ ಸಭೆಯನ್ನು ಸೇರಿಸಿ ಜಯಸಿಂಹನ ಸಮ್ಮುಖದಲ್ಲಿ ರಾಜಪುತ್ರನಿಗೆ ಬಹುಮಾನವನ್ನು ಕೊಡುವೆನು." ಎಂದು ಹೇಳಿದನು.

ರಘುನಾಥನು ತನ್ನ ಕಾರ್ಯವನ್ನು ನೆರವೇರಿಸಿದನು. ಆಫ್ಘನ್ನರು ಪರ್ವತವನ್ನು ಹತ್ತುವ ಸಮಯದಲ್ಲಿ ಹಿಂದುಗಳು 'ಹರಹರ ಮಹದೇವ.' ಎಂದು ಕೂಗುತ್ತ ಅವರ ಮೇಲೆ ಬಿದ್ದರು. ಬಹಳ ಹೊತ್ತು ಹೋರಾಟ ನಡೆಯಲಿಲ್ಲ. ಪಂಜಿನ ಬೆಳಕಿನಲ್ಲಿ ಗೋಡೆಯ ಮೇಲೆ ಅನೇಕ ಹಿಂದುಗಳು ಕಾಣಲ್ಪಡುತ್ತಿದ್ದುದರಿಂದ ದುರ್ಗವನ್ನು ಮುತ್ತುವುದು ಕಷ್ಟವೆಂದು ತಿಳಿದುಕೊಂಡು ಮುಸಲ್ಮಾನರು ಪುನಃ ಬೆಟ್ಟವನ್ನು ಇಳಿಯುತ್ತಿದ್ದರು. ಆಗ ಮಾವಳರು ಅವರ ಬೆನ್ನಟ್ಟಿಬಂದು ಅನೇಕರನ್ನು ಸಂಹರಿಸಿದರು. ರಘುನಾಥನು ತನ್ನ ಕಡೆಯವರನ್ನು ಕುರಿತು ಕೂಗಿ ಹೇಳಿದನು —'ಪಲಾಯನ ಮಾಡುವವರು ಓಡಿಹೋಗಲಿ; ಅವರನ್ನು ಕೊಲ್ಲಬೇಡಿರಿ. ಇದು ಮಹಾರಾಜರ ಅಪ್ಪಣೆ.'

ಯುದ್ಧವು ಸಮಾಪ್ತವಾಯಿತು. ಅಫ್ಘನ್ನರು ಪರಾಜಿತರಾಗಿ ಓಡಿಹೋದರು. ಒಳಿಕ ರಘುನಾಥನು ದುರ್ಗದ ಪ್ರಾಕಾರದ ಮೇಲೆ ಅಲ್ಲಲ್ಲಿ ಸೈನಿಕರನ್ನು ಕಾವಲಾಗಿರಿಸಿ ಆಯುಧ ಸಮೇತರಾಗಿರುವಂತೆ ಕೆಲವರನ್ನು ನಿಯಮಿಸಿ ಪ್ರತಿಯೊಂದು ಕಡೆಯಲ್ಲಿಯೂ ಜಾಗರೂಕರಾಗಿ ನೋಡಿಕೊಳ್ಳುವಂತೆ ಅಪ್ಪಣೆಮಾಡಿದನು. ಕರ್ತವ್ಯವು ಮುಗಿದನಂತರ ಅವನು ಶಿವಾಜಿಯ ಬಳಿಗೆ ಹೋಗಿ ತಲೆಬಾಗಿ ಸಮಾಚಾರವೆಲ್ಲವನ್ನೂ ಪ್ರಭುವಿಗೆ ನಿವೇದಿಸಿದನು ಪ್ರಾತಃಕಾಲದ ಹೊತ್ತಿಗೆ ದುರ್ಗವು ನಿಶ್ಶಬ್ದವಾಗಿದ್ದಿತು. ಯುದ್ಧಸಂಬಂಧವಾದ ಭೀಷಣಾರವವು ಎಲ್ಲೆಲ್ಲಿಯೂ ಕೇಳಿಬರುವಂತೆ ಇದ್ದಿತು.

---

## ಹನ್ನೊಂದನೆಯ ಪ್ರಕರಣ.

---

### (ಬಹುಮಾನ.)

ಮರುದಿನ ಸಾಯಂಕಾಲದಲ್ಲಿ ದುರ್ಗವು ಶೋಭಾಯಮಾನವಾಗಿದ್ದಿತು. ಬೆಳ್ಳಿಯತಗಡನ್ನು ಹೊದಿಸಿದ ನಾಲ್ಕು ಕಂಬಗಳಮೇಲೆ ರಕ್ತವರ್ಣದ ಹೊದಿಕೆಯು ಪ್ರಕಾಶಿಸುತ್ತಿದ್ದಿತು. ಅದರ ಕೆಳಗೆ ಅಲಂಕೃತವಾದ ಪೀಠದಮೇಲೆ ಜಯಸಿಂಹನೂ ಶಿವಾಜಿಯೂ ಕುಳಿತಿದ್ದರು. ಬಂದೂಕುಗಳನ್ನು ಕೈಯಲ್ಲಿ ಹಿಡಿದುಕೊಂಡು ಸೈನಿಕರು ಸಾಲಾಗಿ ನಿಂತಿದ್ದರು. ಅಲಂಘೀರ್ ಬಾದಶಹನಿಗೂ ಶಿವಾಜಿರಾಜನಿಗೂ ಜಯವಾಗಲಿ." ಎಂದು ಜನರು ಕೂಗುತ್ತಿದ್ದರು.

ಜಯಸಿಂಹನು ಕಿರುನಗೆಯಿಂದ ಶಿವಾಜಿಯನ್ನು ಕುರಿತು "ರಾಜಾ ! ನೀವು ಚಕ್ರವರ್ತಿಯ ಪಕ್ಷವನ್ನು ವಹಿಸಿದುದರಿಂದ ಅವರಿಗೆ ಬಲಗೈ ಸ್ವರೂಪವಾಗಿರುವಿರಿ. ತಮ್ಮ ಉಪಕಾರವನ್ನು ಬಾದಶಹನು ಮರೆಯನು. ತಮ್ಮ ಸಕಲ ಪ್ರಯತ್ನಕ್ಕೂ ಜಯವೇ ಉಂಟಾಗುತ್ತಿರುವುದು.'' ಎಂದು ಹೇಳಿದನು.

ಶಿವಾಜಿ— ಜಯಸಿಂಹನು ಹಾಜರಿದ್ದ ಕಡೆಯಲ್ಲೆಲ್ಲಾ ಸರ್ವದಾ ಜಯವೇ!

ಜಯ—ನೀವು ಈ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳುವಿರೆಂದು ನಾನು ಎಣಿಸಿರಲಿಲ್ಲ. ಇನ್ನು ನಾವು ಬೇಗ ಬಿಜಾಪುರವನ್ನು ಸ್ವಾಧೀನಪಡಿಸಿಕೊಳ್ಳಬಹು ಗೆಂದು ಕಾಣುತ್ತದೆ.

ಶಿವಾಜಿ—ಮಹಾರಾಜಾ ! ದುರ್ಗಗಳನ್ನು ಮುತ್ತಿಗೆ ಹಾಕಿ ಹಿಡಿದುಕೊ ಳ್ಳುವುದರಲ್ಲಿ ನನಗೆ ಬಾಲ್ಯದಿಂದಲೂ ಅಭ್ಯಾಸವುಂಟು ಆದರೆ ಈ ದುರ್ಗವು ನಾವು ಭಾವಿಸಿದಷ್ಟು ಸುಲಭವಾಗಿ ಸಿಕ್ಕಿದುದಲ್ಲ. ಮುಸಲ್ಮಾನರು ನಿದ್ರೆಯಲ್ಲಿರುವರೆಂದು ತಿಳಿದಿದ್ದೆನು. ಆದರೆ ಅವರು ಎಚ್ಚರವಾಗಿದ್ದುದಲ್ಲದೆ ಯುದ್ಧ ಸನ್ನದ್ಧರಾಗಿಯೂ ಇದ್ದರು. ಇದಕ್ಕೆ ಮೊದಲು ಎಂದೂ ಇಷ್ಟುಸೈನ್ಯ ನಷ್ಟವಾಗಲಿಲ್ಲ.

ಜಯ—ರಾತ್ರಿಯೇ ಶತ್ರುಗಳು ಬಂದು ಮೇಲೆಬೀಳುವುದಕ್ಕೆ ತಕ್ಕಸಮಯ ವೆಂದು ಅವರು ಜಾಗರೂಕರಾಗಿರಬಹುದು.

ಶಿವಾಜಿ—ನಿಜ, ಆದರೆ ಎಷ್ಟೋ ದುರ್ಗಗಳನ್ನು ಜಯಿಸಿದೆನು. ಶತ್ರುಗಳು ಇಷ್ಟರಮಟ್ಟಿಗೆ ಯುದ್ಧ ಸನ್ನದ್ಧರಾಗಿದ್ದುದನ್ನು ನಾನು ಎಲ್ಲಿಯೂ ನೋಡಲಿಲ್ಲ.

ಜಯ—ಅವರು ಎಚ್ಚರವಾಗಿದ್ದರೂ ಇಲ್ಲದಿದ್ದರೂ ಶಿವಾಜಿಯವರ ಸಾಹ ಸವು ಎಂದಿಗೂ ಲೋಪವಾಗದು

ಶಿವಾಜಿ—"ಮಹಾರಾಜರ ಅನುಗ್ರಹದಿಂದ ದುರ್ಗವು ಕೈವಶವಾದುದು ನಿಜವೇ ! ಆದರೆ ರಾತ್ರಿಯಲ್ಲಿ ನಮಗೆ ತುಂಬಾ ನಷ್ಟವುಂಟಾಯಿತು ಅಲ್ಲಿ ಸತ್ತ ಸೈನಿಕರು ನನಗೆ ತುಂಬ ವಿಶ್ವಾಸಪಾತ್ರರು. ಅಂಥವರು ನನಗೆ ಸಿಕ್ಕುವರೆ ?"

ಹೀಗೆ ಹೇಳಿ ಶಿವಾಜಿಯು ಸ್ವಲ್ಪಹೊತ್ತು ಚಿಂತಾಕುಲನಾದನು ಸ್ವಲ್ಪ ಹೊತ್ತಿನ ಮೇಲೆ, ಬಂದಿಗಳನ್ನು ಕರೆದುಕೊಂಡು ಬರಬೇಕೆಂದು ಅಪ್ಪಣೆ ಮಾಡಿದನು.

ರಹಿಮತ್‌ಖಾನನ ಅಧೀನದಲ್ಲಿ ಒಂದು ಸಾವಿರಮಂದಿ ಸೈನಿಕರು ಆ ದುರ್ಗ ವನ್ನು ಕಾಪಾಡುತ್ತಿದ್ದರು. ನಿನ್ನೆ ನಡೆದ ಯುದ್ಧದಲ್ಲಿ ಅವರಲ್ಲಿ ಇನ್ನೂರುಮಂದಿ ಮಾತ್ರ ಸೆರೆಹಿಡಿಯಲ್ಪಟ್ಟರು; ಕೆಲವರು ಹತರಾದರು; ಮತ್ತೆ ಕೆಲವರು ಓಡಿಹೋದರು. ಉಳಿದವರು ಬಿಗಿಯಾಗಿ ಕಟ್ಟಿದ್ದ ಕೈಗಳಿಂದ ಸಭಾಮಂದಿರವನ್ನು ಪ್ರವೇಶಿಸಿದರು. ಅವರನ್ನು ನೋಡಿ ಶಿವಾಜಿಯು ಹೀಗೆಂದನು —ಎಲ್ಲರ ಕಟ್ಟುಗಳನ್ನೂ ಬಿಚ್ಚಿರಿ.

‘ಅಫ್ಘನವೀರರೇ ! ನಿಮ್ಮ ಪೌರುಷಗಳನ್ನು ನೀವು ತೋರಿಸಿದಿರಿ. ಅದಕ್ಕೆ ನಾನು ಎಷ್ಟೋ ಸಂತೋಷಪಟ್ಟೆನು. ಈಗ ನೀವು ಬಿಡುಗಡೆಹೊಂದುವಿರಿ. ಇಷ್ಟವಿದ್ದರೆ ದಿಲ್ಲಿಯ ಸೈನ್ಯಕ್ಕೆ ಸೇರಿರಿ; ಇಲ್ಲದಿದ್ದರೆ ಬಿಜಾಪುರದ ಸುಲ್ತಾನರ ಬಳಿಗೇ ಹೋಗಿರಿ. ನಿಮ್ಮನ್ನು ಸ್ವಲ್ಪವೂ ಬಾಧೆಪಡಿಸದೆ ನಿಮ್ಮ ಇಚ್ಛೆಬಂದಲ್ಲಿಗೆ ಹೋಗಲು ಬಿಡುವಂತೆ ನಾನು ಕಟ್ಟುಮಾಡಿರುವೆನು.”

ಶಿವಾಜಿಯ ಮಾತಿಗೆ ಅವರೆಲ್ಲರೂ ಅತ್ಯಾನಂದಪಟ್ಟರು. ಯುದ್ಧವು ಮುಗಿದ ಮೇಲೆ ಶಿವಾಜಿಯು ತನಗೆ ಸಿಕ್ಕಿದ ಸೈನಿಕರಿಗೆ ಯಾವ ತೊಂದರೆಯೂ ಉಂಟಾಗದಂತೆ ನೋಡಿಕೊಳ್ಳುತ್ತಿದ್ದನು. ಹೀಗೆ ಮಾಡುವುದು ಅಪಾಯಕರವೆಂದು ಅವನ ಮಿತ್ರರು ಅವನಿಗೆ ಅಡಿಗಡಿಗೆ ಹೇಳುತ್ತಿದ್ದರು. ಅಫಘನ್ನರು ಶಿವಾಜಿಯು ತೋರಿಸಿದ ವಿಶ್ವಾಸಕ್ಕೆ ಸಂತೋಷಪಟ್ಟು ಅನೇಕರು ಬಾದಶಹನ ಸೈನ್ಯಕ್ಕೆ ತಿಂಗಳಗಟ್ಟಲೆ ಸಂಬಳಕ್ಕೆ ಸೇರಿಕೊಂಡರು.

ತರುವಾಯ ರಹಿಮತ್‌ಖಾನನು ಸಭೆಗೆ ಕರೆತರಲ್ಪಟ್ಟನು. ಅವನ ಕೈಗಳು ಬಿಗಿದುಕಟ್ಟಲ್ಪಟ್ಟಿದ್ದುವು. ಶರೀರದಲ್ಲಿ ಕತ್ತಿಯ ಏಟುಗಳು ಕಾಣಿಸುತ್ತಿದ್ದುವು. ಆ ವೀರನು ಸಭೆಯಲ್ಲಿ ದರ್ಪದಿಂದ ನಿಂತುಕೊಂಡು ಶಿವಾಜಿಯನ್ನು ನೋಡತೊಡಗಿದನು.

ಶಿವಾಜಿಯು ತಾನು ಕುಳಿತಿದ್ದ ಸ್ಥಳದಿಂದ ಎದ್ದು ತಾನೇ ಅವನ ಕಟ್ಟುಗಳನ್ನು ಬಿಚ್ಚಿ ಹೀಗೆಂದನು—ವೀರಾಗ್ರಣಿ ! ಯುದ್ಧ ನಿಯಮಾನುಸಾರವಾಗಿ ನಿಮ್ಮ ಕೈಗಳು ಹಗ್ಗಗಳಿಂದ ಕಟ್ಟಲ್ಪಟ್ಟಿವೆ. ಒಂದು ರಾತ್ರಿ ನೀವು ಸೆರೆಯಲ್ಲಿ ಇಡಲ್ಪಟ್ಟಿರಿ. ಇದಕ್ಕಾಗಿ ಕ್ಷಮಿಸಿರಿ. ಜಯಾಪಜಯಗಳು ಅದೃಷ್ಟದಂತೆ ! ಇನ್ನು ನೀವು ಸ್ವೇಚ್ಛಾವಂತರಾದಿರಿ. ನಿಮ್ಮಂತಹ ವೀರರೊಡನೆ ಹೋರಾಡಿ ನಾನೂ ಕೃತಕೃತ್ಯನೇ !

ಪ್ರಾಣದಂಡನೆಯನ್ನು ಇದಿರು ನೋಡುತ್ತಿದ್ದ ರಹಿಮತ್‌ಖಾನನು ಶಿವಾಜಿಯ ಮಾತುಗಳನ್ನು ಕೇಳಿ ಅದುವರೆಗೆ ಧೈರ್ಯವಾಗಿದ್ದವನು ತತ್‌ಕ್ಷಣವೇ ಅಧೈರ್ಯಕ್ಕೊಳಗಾದನು. ಯುದ್ಧದಲ್ಲಿ ಶತ್ರುಗಳಿಂದ ಜಯಿಸಲ್ಪಟ್ಟವನಾದರೂ ಸ್ವಲ್ಪವಾದರೂ ಚಲಿಸದ ಅವನ ಹೃದಯವು ಈಗ ಸಡಿಲವಾಯಿತು. ಕಣ್ಣುಗಳಿಂದ ನೀರು ಸುರಿಯಿತು. ರಹಿಮತ್‌ಖಾನನು ಪರಾಙ್ಮುಖನಾಗಿ ಕಣ್ಣೀರನ್ನು ಒರಸಿಕೊಂಡು

ಹೇಳಿದನು—"ಶಿವಾಜೀರಾಜಾ ! ನಿನ್ನಿನ ರಾತ್ರಿ ನಿಮ್ಮ ಬಾಹುಬಲದಿಂದ ಪರಾಜಿತ ನಾದೆನು, ನಿಜ. ಆದರೆ, ಹಿಂದುಗಳಿಗೂ ಮುಸಲ್ಮಾನರಿಗೂ ಯಾರು ಪ್ರಭುವೋ ಬಾದ ಶಹರಿಗೂ ಯಾರು ಬಾದಶಹರೋ ಅಂಥ ದೇವರೇ ನಿಮಗೆ ಸದ್ಬುದ್ಧಿಯನ್ನು ಕೊಟ್ಟಿ ರುವನು. ನಿಮ್ಮ ನೂತನ ಸಾಮ್ರಾಜ್ಯವು ಅಭಿವೃದ್ಧಿಯಾಗುವ ಪಕ್ಕೆ ಸಂದೇಹವಿಲ್ಲ"

ಜಯ—ಪಠಾಣ ಸೇನಾಪತಿ ! ನೀವು ಉಚ್ಚಪದವಿಗೆ ಯೋಗ್ಯರೆಂದು ನಿಮ್ಮ ಪ್ರವರ್ತನೆಯು ತೋರಿಸುತ್ತಲಿದೆ. ನಿಮ್ಮಂತಹ ಸೇನಾಪತಿಗಳು ಸಿಕ್ಕಿದರೆ ಡಿಲ್ಲೀಶನಿಗೆ ಇನ್ನೂ ಶ್ರೇಯಸ್ಸುಂಟಾಗುವುದರಲ್ಲಿ ಸಂದೇಹವಿಲ್ಲ. ನಿಮ್ಮಂತಹ ವೀರ ಶ್ರೇಷ್ಠರು ನಮ್ಮ ಸೈನ್ಯಕ್ಕೆ ಸೇರಲು ಸಮ್ಮತಿಸಿದರೆಂದು ಬಾದಶಹನಿಗೆ ಪತ್ರವನ್ನು ಬರೆಯಲೆ ?

ರಹಿಮತ್—ನಿಮ್ಮ ಮಾತಿನಿಂದ ನನಗೆ ಬಹು ಸಂತೋಷವಾಯಿತು. ಆದರೆ ನಾನು ನನ್ನ ಜೀವಿತದಲ್ಲಿ ಯಾರ ಕೆಲಸವನ್ನು ತೃಪ್ತಿಕರವಾಗಿ ಮಾಡುವೆನೆಂದು ಸಂಕ ಲ್ಪಿಸಿದೆನೋ ಆತನನ್ನು ಬಿಟ್ಟು ಮತ್ತೊಬ್ಬರ ಪಕ್ಷವನ್ನು ಸೇರಲಾರೆನು. ಪ್ರಾಣವಿ ರುವವರೆಗೂ ಬಿಜಾಪುರದ ಸ್ವಾತಂತ್ರ್ಯರಕ್ಷಣಕ್ಕಾಗಿ ನಿರ್ವಂಚನೆಯಿಂದ ಕೆಲಸ ಮಾಡುವೆನು.

ಶಿವಾಜಿ—ಹಾಗೆಯೇ ಮಾಡಿರಿ. ಈ ರಾತ್ರಿ ವಿಶ್ರಮಿಸಿಕೊಳ್ಳಿರಿ. ನಾಳಿನ ದಿನವೇ ನಿಮ್ಮನ್ನು ಬಿಜಾಪುರದ ವರೆಗೆ ಸುರಕ್ಷಿತವಾಗಿ ಕರೆದುಕೊಂಡುಹೋಗಿ ಬಿಟ್ಟು ಬರುವಂತೆ ನನ್ನ ಸೈನ್ಯಕ್ಕೆ ಕಟ್ಟುಮಾಡುವೆನು.

ರಹಿ—ಕ್ಷತ್ರಿಯಶ್ರೇಷ್ಠರೇ ! ನೀವು ನನ್ನಲ್ಲಿ ಅನುಗ್ರಹವನ್ನೂ ಗೌರವವನ್ನೂ ತೋರಿಸಿದಿರಿ. ನಾನು ನಿಮ್ಮ ಸನ್ನಿಧಿಯಲ್ಲಿ ಯಾವ ಸಂಗತಿಯನ್ನೂ ಮರೆಮಾಡೆನು. ನಿಮ್ಮ ಸೈನ್ಯವನ್ನು ಚೆನ್ನಾಗಿ ಪರಿಶೀಲಿಸಿರಿ. ಎಲ್ಲರೂ ಪ್ರಭುಭಕ್ತರಲ್ಲ. ನಿನ್ನಿನ ರಾತ್ರಿ ನೀವು ನಮ್ಮ ದುರ್ಗವನ್ನು ಆಕ್ರಮಿಸುವಿರೆಂದು ನನಗೆ ಮೊದಲೇ ಒಬ್ಬನು ವರ್ತಮಾನವನ್ನು ಕೊಟ್ಟನು. ಆ ಸಂಗತಿಯನ್ನು ತಿಳಿದು ನಾವು ಯುದ್ಧಸನ್ನಾಹ ಮಾಡಿಕೊಂಡೆವು. ಇದಕ್ಕೂ ಹೆಚ್ಚಾಗಿ ನಾನು ಹೇಳಲಾರೆನು. ಹೇಳಿದರೆ ಸಮ ಯವನ್ನು ಅತಿಕ್ರಮಿಸಿದವನಾಗುವೆನು." ಎಂದು ಸುಮ್ಮನಾದನು. ಶಿವಾಜಿಯ ಅಪ್ಪಣೆಯಂತೆ ರಹಿಮತ್‌ಖಾನನು ರಕ್ಷಕಭಟರೊಡನೆ ಮನೆಗೆ ಹೊರಟುಹೋದನು. ಶಿವಾಜಿಯ ಮುಖವು ಕೋಪದಿಂದ ಕೆಂಪೇರಿತು. ಕಣ್ಣುಗಳಿಂದ ಅಗ್ನಿಯ ಕಿಡಿಗ

ಉದುರುವಂತಾಯಿತು. ಶರೀರವು ನಡುಗಿತು. ಶಿವಾಜಿಯ ರೀತಿಯನ್ನು ನೋಡಿ, ಸೈನಿಕರು ಬೆಚ್ಚಿಬಿದ್ದರು.

ಜಯಸಿಂಹನು ಶಿವಾಜಿಯನ್ನು ಅನೇಕ ಸ್ವಾಂತವಚನಗಳಿಂದ ಸಮಾಧಾನಪಡಿಸಿ ಸೈನಿಕರನ್ನು ನೋಡಿ:—“ನಿಮಗೆ ದುರ್ಗವನ್ನು ಸ್ವಾಧೀನಮಾಡಿಕೊಳ್ಳಬೇಕೆಂಬ ವಿಷಯವು ಯಾವಾಗ ತಿಳಿಯಿತು?.” ಎಂದು ಕೇಳಿದನು.

ಸೈನಿಕರು—ಒಂದು ಜಾವದ ನಂತರ.

ಶಿವಾಜಿ—ಅದಕ್ಕೆ ಮೊದಲು ಯಾರಿಗಾದರೂ ಈ ವೃತ್ತಾಂತವು ತಿಳಿದಿದ್ದಿತೆ?

ಸೈನಿಕ—ಯಾವುದೋ ಒಂದು ದುರ್ಗವನ್ನು ಮುತ್ತಿಗೆ ಹಾಕಬೇಕಾಗಿರುವುದೆಂದು ಮಾತ್ರ ತಿಳಿದಿದ್ದಿತು, ಈ ದುರ್ಗವನ್ನೇ ಹಿಡಿದುಕೊಳ್ಳಬೇಕೆಂದು ನಮಗೆ ತಿಳಿದಿರಲಿಲ್ಲ.

ಜಯ—ಒಳ್ಳೆಯದು, ನೀವು ಈ ದುರ್ಗವನ್ನು ಸೇರುವುದಕ್ಕೆ ಎಷ್ಟು ಹೊತ್ತಾಯಿತು ?

ಸೈನಿಕ—ಸುಮಾರು ಎರಡು ಜಾವಗಳಾಗಿರಬಹುದು.

ಜಯ—ಒಂದು ಜಾವವಾದಮೇಲೆ, ಎರಡು ಜಾವವಾಗುವವರೆಗೆ ನೀವೆಲ್ಲರೂ ಕಲೆತು ಇದ್ದಿರಾ ? ಯಾರಾದರೂ ತಪ್ಪಿಸಿಕೊಂಡಿದ್ದರೆ ? ಒಬ್ಬನ ತಪ್ಪಿತಕ್ಕಾಗಿ ಅನೇಕರು ಕಷ್ಟಕ್ಕೀಡಾಗಬಾರದು. ತಪ್ಪುಮಾಡಿದವರನ್ನು ಹೊರಗೆಡವಿರಿ. ನಿಮ್ಮ ಪ್ರಭುವು ನಿಮ್ಮಲ್ಲಿ ಭರವಸೆಯಿಟ್ಟಿರಲು ನೀವು ವಿಶ್ವಾಸದ್ರೋಹಮಾಡುವುದು ಸರಿಯಲ್ಲ. ವಿಶ್ವಾಸಕ್ಕೆ ಯೋಗ್ಯತೆಯನ್ನು ತೋರ್ಪಡಿಸಬೇಕು. ಶಿವಾಜಿಯವರನ್ನು ಹೋಲುವಂತಹ ಪ್ರಭುವು ಇನ್ನು ನಿಮಗೆ ಸಿಕ್ಕನು. ಯಾರಾದರೂ ರಾಜದ್ರೋಹಿಯಿದ್ದರೆ ಮೊದಲು ಅವನನ್ನು ಹೊರಗೆಳೆಯಿರಿ. ಅವನು ರಾತ್ರಿ ನಡೆದ ಯುದ್ಧದಲ್ಲಿ ಮೃತನಾಗಿದ್ದರೆ ಅವನ ಹೆಸರನ್ನು ಹೇಳಿರಿ. ಅನುಮಾನವು ಒಳ್ಳೆಯದಲ್ಲ. ಒಬ್ಬನಿಂದ ಎಲ್ಲರಿಗೂ ಅಪಯಶಸ್ಸು ಬರುವುದು.

ಆಗ ಸೈನಿಕರು ಹಿಂದಿನ ದಿನದ ಮಾತನ್ನು ಸ್ಮರಿಸುತ್ತ ಬಂದರು. ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು. ಶಿವಾಜಿಯ ಕೋಪವು ಸ್ವಲ್ಪಮಟ್ಟಿಗೆ ಇಳಿದಿದ್ದಿತು. ಹೇಳಿದನು “ಜಯಸಿಂಹಮಹಾರಾಜಾ ! ರಾಜದ್ರೋಹಿಯನ್ನು

ಹೊರಗೆಡವಿದರೆ ನಾನು ನಿಮಗೆ ಚಿರಕಾಲಕೃತಜ್ಞನಾಗಿರುವೆನು.''

ಚಂದ್ರರಾಯನೆಂಬ ಜವಾದಾರನು ಮುಂದೆ ಬಂದು ಮೆಲ್ಲನೆ ಹೇಳಿದನು:—"ದೇವ, ನಾನು ಒಂದು ಜಾವದಮೇಲೆ ಹೊರಡುವಾಗ ನನ್ನ ಅಧೀನದ ಹವಾಲ್ದಾರನೊಬ್ಬನು ಕಾಣಲ್ಪಡಲಿಲ್ಲ. ರುದ್ರಮಂಡಲವನ್ನು ಸೇರಿದನಂತರ ಕಾಣಲ್ಪಟ್ಟನು''

ರಾಜದ್ರೋಹಿಯ ಹೆಸರನ್ನು ಕೇಳುವುದಕ್ಕೆ ಎಲ್ಲರೂ ಕುತೂಹಲರಾಗಿದ್ದರು. ಶಿವಾಜಿಯ ಉಚ್ಛ್ವಾಸ ನಿಶ್ವಾಸಗಳು ವೇಗವಾಗಿ ಕೇಳಬರುತ್ತಿದ್ದವು. ಸಭೆಯಲ್ಲಿ ನಿಶ್ಶಬ್ದವಾಗಿದ್ದಿತು. ಆಗ ಚಂದ್ರರಾಯನು ಮೆಲ್ಲಗೆ, "ರಘುನಾಥ ಹವಾಲ್ದಾರನು" ಎಂದನು. ಸಭಾಸದರು ಬೆಚ್ಚಿಬಿದ್ದು ನಾಲ್ಕು ಕಡೆಯನ್ನು ನೋಡಿದರು.

(ಚಂದ್ರರಾಯನು ಒಬ್ಬ ಯೋಧನಾದರೂ ರಘುನಾಥನು ಸೈನ್ಯದಲ್ಲಿ ಸೇರಿದ ಮೇಲೆ ಅವನ ಹೆಸರು ಪ್ರಕಾಶಕ್ಕೆ ಬರಲಿಲ್ಲ.) ಮುಖಮಂಡಲವು ಪುನಃ ಕೆಂಪೇರಲು ಹಲ್ಲನ್ನು ಕಡಿಯುತ್ತ ಶಿವಾಜಿಯು ಚಂದ್ರರಾಯನನ್ನು ಕುರಿತು ಕರ್ಕಶಸ್ವರದಿಂದ ಹೇಳಿದನು—"ಧೂರ್ತ! ವೃಥಾ ದೋಷಾರೋಪಣೆಯನ್ನೇಕೆ ಮಾಡುವೆ! ನೀನು ಆರೋಪಿಸಿದ ನಿಂದೆಯು ರಘುನಾಥನಿಗೆ ಸಲ್ಲುವುದಿಲ್ಲ. ಆತನ ನಡೆನುಡಿಗಳನ್ನು ಚೆನ್ನಾಗಿ ನೋಡಿರುವೆನು. ನಿಷ್ಕಾರಣವಾಗಿ ದೋಷಾರೋಪಣೆಮಾಡುವವನಿಗೆ ಆಗುವ ಫಲವನ್ನು ಈಗ ಎಲ್ಲರೂ ತಿಳಿದುಕೊಳ್ಳಲಿ." ಎಂದು ಹೇಳಿ ಶಿವಾಜಿಯು ಕತ್ತಿಯನ್ನು ಮೇಲಕ್ಕೆತ್ತಿದನು ಕೂಡಲೆ ರಘುನಾಥನು ಮುಂದಕ್ಕೆ ಬಂದ. 'ದೇವಾ! ಚಂದ್ರರಾಯನನ್ನು ಸಂಹರಿಸಬೇಡಿರಿ. ಅವನು ಸುಳ್ಳುಹೇಳಲಿಲ್ಲ. ನಾನು ದುರ್ಗವನ್ನು ಸೇರುವ ಹೊತ್ತಿಗೆ ಸ್ವಲ್ಪಕಾಲಮೀರಿತು." ಎಂದು ಹೇಳಿದನು. ಸಭಾಸದರು ಮತ್ತೂ ವಿಸ್ಮಿತರಾಗಿ ನೋಡುತ್ತಿದ್ದರು.

ಶಿವಾಜಿಯು ಸ್ವಲ್ಪಕಾಲ ಸ್ತಬ್ಧನಾಗಿದ್ದು ಮತ್ತೆ ಮುಖದಲ್ಲಿ ಸುರಿಯುತ್ತಿದ್ದ ಬೆವರನ್ನು ಒರಸಿಕೊಂಡು ಹೇಳಿದನು:—"ನಾನು ಸ್ವಪ್ನಾವಸ್ಥೆಯಲ್ಲಿರುವೆನೆ? ರಘುನಾಥ! ನೀನೇ ಈ ಕೆಲಸವನ್ನು ಮಾಡಿದೆಯೋ? ಪ್ರಾಕಾರವನ್ನು ದಾಟುವ ಸಮಯದಲ್ಲಿ ಎಲ್ಲರಿಗೂ ಮುಂದಾದೆ; ಇನ್ನೂರು ಮಂದಿ ಸೈನಿಕರಿಂದ ಐದುನೂರು ಮಂದಿ ಅಫ್‌ಘನರನ್ನು ಓಡಿಸಿದೆ! ಇಂತಹ ನೀನೇ ಮುಂದಾಗಿ ಖಿಲ್ಲೇದಾರನಿಗೆ ಮುತ್ತಿಗೆಯ ವಿಷಯವನ್ನು ತಿಳಿಯಪಡಿಸಿದೆಯಾ?

ರಘು—ದೇವ! ನಾನು ನಿರ್ದೋಷಿಯು.

ನಿರ್ಭೀಕನೂ ದೀರ್ಘಕಾಯನೂ ಆದ ಆ ಯುವಕನು ಕೋಪದಿಂದ ಘರ್ಜಿ ಸುತ್ತಿದ್ದ ಶಿವಾಜಿಯ ಇದಿರಾಗಿ ಅಣಗಿದವನಂತೆ ನಿಂತು ಭವಾನೀದೇವಿಯ ಕಡೆ ತೀವ್ರ ದೃಷ್ಟಿಯನ್ನು ಬಿಡುತ್ತಿದ್ದನು. ಅವನ ವಿಶಾಲವಾದ ಎದೆಯು ಗಂಭೀರಶ್ವಾಸದಿಂದ ಮತ್ತಷ್ಟು ವಿಸ್ತಾರವಾಯಿತು. ಶಿವಾಜಿಯು ಮತ್ತೆ ಕೇಳಿದನು:—"ಹಾಗಾದರೆ ನನ್ನ ಅಪ್ಪಣೆಯನ್ನು ಉಲ್ಲಂಘಿಸಿ, ನಿರ್ದಿಷ್ಟ ಸಮಯದಲ್ಲಿ ಸೈನ್ಯದಲ್ಲಿಲ್ಲದಿರಲು ಕಾರಣವೇನು?"

ರಘುನಾಥನ ಮುಖವು ಕಳೆಗುಂದಿತು. ಆದರೆ ಅವನು ಏನೂ ಮಾತನಾಡಲಾರದೆ ದೃಷ್ಟಿಯನ್ನು ನೆಲದ ಕಡೆ ನಿಲ್ಲಿಸಿ ಸುಮ್ಮನಿದ್ದನು.

ರಘುನಾಥನು ಮೌನಿಯಾಗಿದ್ದುದರಿಂದ ಸಂದೇಹವು ಹೆಚ್ಚಿತು. ಆಗ್ರಹದಿಂದ—"ಚೀ, ಕಪಟಿ! ಇದಕ್ಕಾಗಿಯೇ ಇಷ್ಟು ಕಾರ್ಯವನ್ನು ತೋರಿಸಿದೆಯಲ್ಲವೆ? ಆದರೆ ದುಸ್ಸಮಯದಲ್ಲಿ ಶಿವಾಜಿಯನ್ನು ವಂಚಿಸಲು ಯತ್ನಿಸಿದೆ" ಎಂದು ಹೇಳಿದನು.

ರಘುನಾಥನು ನಿಶ್ಚಲಸ್ವರದಿಂದ "ರಾಜಾ! ನಮ್ಮ ವಂಶದವರು ಕಪಟವನ್ನೇ ಅರಿಯರು. ಆ ಸಂಗತಿಯು ಚಂದ್ರರಾಯನಿಗೆ ಗೊತ್ತಿರುವುದು." ಎಂದು ಉತ್ತರವಿತ್ತನು.

ಶಿವಾಜಿಯ ಕೋಪವಿಮ್ಮಡಿಯಾಯಿತು. ಕಠೋರಸ್ವರದಿಂದ:—"ಪಾಪಿಷ್ಠ! ತಪ್ಪಿಸಿಕೊಳ್ಳಬೇಕೆಂಬುದು ವ್ಯರ್ಥ. ಹಸಿವಿನಿಂದ ಕುಪಿತವಾದ ಸಿಂಹದ ಬಾಯಿಂದಲಾದರೂ ತಪ್ಪಿಸಿಕೊಳ್ಳಬಹುದು; ಆದರೆ ಶಿವಾಜಿಯ ಕೋಪಾಗ್ನಿಯಿಂದ ತಪ್ಪಿಸಿಕೊಳ್ಳಲು ಶಕ್ಯವಿಲ್ಲ." ಎಂದು ಕೂಗಿ ಹೇಳಿದನು.

ರಘುನಾಥನು ಧೈರ್ಯದಿಂದ:—ನಾನು ಮಹಾರಾಜರ ಸನ್ನಿಧಿಯಲ್ಲಿ ಶರಣಾಗತನಾಗಿ ಪ್ರಾರ್ಥಿಸಿಕೊಳ್ಳುವುದಿಲ್ಲ; ಪರಮಾತ್ಮನವಿನಾ ಮಾನವರಲ್ಲಿ ನಾನು ಪ್ರಾರ್ಥಿಸಲಾರೆನು.

ಶಿವಾಜಿ—ಇರಲಿ. ರಾಜದ್ರೋಹಿಗೆ ಪ್ರಾಣದಂಡನೆಯೇ ಶಿಕ್ಷೆ!

ರಘು—ಈ ಯೋಧನು ಪ್ರಾಣತ್ಯಾಗಕ್ಕೆ ಹಿಂಜರಿಯುವಂತಿಲ್ಲ. ಆದರೆ ರಾಜದ್ರೋಹಿ ಮಾತ್ರ ನಾನಲ್ಲ!

ಶಿವಾಜಿಯು ಇನ್ನು ಸೈರಿಸಲಾರದೆ ಕತ್ತಿಯಿಂದ ಅವನನ್ನು ಹೊಡೆಯಲು ಕೈಯೆತ್ತಿದನು. ಜಯಸಿಂಹನು ಅವನ ಕೈಹಿಡಿದುಕೊಂಡನು. ಶಿವಾಜಿಯು

ಕೋಪವು ಮಿತಿಮೀರಿತು; ಮುಖವು ವಿಕೃತವಾಯಿತು, ಶರೀರಾದ್ಯಂತವೂ ನಡು ಗಿತು ಜಯಸಿಂಹನಿಗೆ ತೋರಿಸಬೇಕಾದ ಸನ್ಮಾನವನ್ನು ಕೂಡ ಮರೆತು ವಿಕೃತ ಸ್ವರದಿಂದ:—'ಕೈಯನ್ನು ಬಿಡಿರಿ, ರಾಜಪುತ್ರರ ಧರ್ಮವನ್ನು ನಾನು ಅರಿಯೆನು ; ನನಗೆ ತಿಳಿಯಬೇಕಾದ ಆಗತ್ಯವೂ ಇಲ್ಲ. ರಾಜದ್ರೋಹಿಗಳಿಗೆ ಪ್ರಾಣದಂಡನೆಯನ್ನು ವಿಧಿಸುವುದೇ ಮಹಾರಾಷ್ಟ್ರರ ನಿಯಮವು. ಶಿವಾಜಿಯೂ ಆ ನಿಯಮವನ್ನು ಆಚರಣೆಗೆ ತರುವನು" ಎಂದು ಹೇಳಿದನು.

ಜಯಸಿಂಹನು ಸ್ವಲ್ಪವೂ ಕೋಪಗೊಳ್ಳದೆ ಮೃದುಸ್ವರದಿಂದ ಹೇಳಿದನು:— "ಕ್ಷತ್ರಿಯಶ್ರೇಷ್ಠ ! ಈ ದಿನ ಮಾಡಿದ ಕೆಲಸವನ್ನು ನಾಳೆ ಮಾಡಲಾರರಲ್ಲವೆ ? ಇಂದು ಈ ಯೋಧನಿಗೆ ದೇಹಾಂತಶಿಕ್ಷೆಯನ್ನು ವಿಧಿಸಿ, ಬಹುಕಾಲದವರೆಗೆ ಇದರ ವಿಷಯವಾಗಿ ಅನುತಾಪ ಪಡಬೇಕಾಗುವುದು ಯುದ್ಧದಿಂದ ನನ್ನ ತಲೆಯು ಕಟ್ಟಾಗಿದೆ. ನನ್ನ ಮಾತನ್ನು ಕೇಳಿರಿ. ಇವನು ರಾಜದ್ರೋಹಿಯಲ್ಲ. ಆ ವಿಚಾ ರವನ್ನು ಬಿಟ್ಟುಬಿಡಿರಿ. ನೀವು ನನ್ನ ಮಿತ್ರರು. ನಾನು ನಿಮ್ಮಲ್ಲಿ ಒಂದು ವಿಷಯ ವನ್ನು ಬೇಡುತ್ತಿರುವೆನು. ಈ ರಾಜಪುತ್ರ ಯೋಧನಿಗೆ ದೇಹಾಂತ ಶಿಕ್ಷೆ ತಪ್ಪಿಸ ಬೇಕು. ನನ್ನೀ ಆಜ್ಞೆಯನ್ನು ವಿಚಾರಬೇಡಿರಿ."

ಶಿವಾಜಿಯು ಸ್ವಲ್ಪಹೊತ್ತು ಅಪ್ರತಿಭನಾಗಿದ್ದು ಹೀಗೆಂದನು—" ತಾತ ! ನನ್ನ ಪೌರುಷವಾಕ್ಯಗಳನ್ನು ಕ್ಷಮಿಸಬೇಕು. ನಿಮ್ಮ ಮಾತನ್ನು ನಾನು ಎಂದಿಗೂ ಮೀರಲಾರೆನು. ರಾಜದ್ರೋಹಿಯನ್ನು ಬಿಡುವೆನೆಂದು ನಾನು ನಂಬಿರಲಿಲ್ಲ" ಎಂದು ಹೇಳಿ ಅವನನ್ನು ಕುರಿತು "ಹವಾಲ್ದಾರನೇ ! ಜಯಸಿಂಹಮಹಾರಾಜರು ನಿನ್ನನ್ನು ರಕ್ಷಿಸಿರುವರು. ಇನ್ನು ನೀನು ನನ್ನ ಇದಿರಿಗೆ ನಿಲ್ಲಬೇಡ. ರಾಜದ್ರೋಹಿಗಳ ಮುಖವನ್ನು ನೋಡಲಾರೆನು, ಹೊರಟುಹೋಗು."

ರಘುನಾಥನು ಅಲ್ಲಿಂದ ಮೌನವಾಗಿ ಹೊರಹೊರಟನು. ಶಿವಾಜಿಯು ಪುನಃ ಹೇಳಿದನು: —'ಸ್ವಲ್ಪ ನಿಲ್ಲು; ಎರಡು ವರ್ಷಗಳ ಹಿಂದೆ ನಿನಗೆ ಆ ಖಡ್ಗವನ್ನು ನಾನೇ ಕೊಟ್ಟಿದ್ದೆನು; ರಾಜದ್ರೋಹಿಯ ಕೈಯಲ್ಲಿರುವ ಖಡ್ಗವು ದುಷ್ಕೀರ್ತಿಗೆ ಒಳ ಗಾಗಕೂಡದು."—'ಭಟರೇ ! ಆ ಖಡ್ಗವನ್ನು ಮುರಿದು ಬಿಸುಟು, ರಾಜದ್ರೋಹಿ ಯನ್ನು ದುರ್ಗದಿಂದ ಹೊರಗೆ ಹೋಗುವಂತೆ ಹೇಳಿರಿ."

ಮರಣಶಿಕ್ಷೆಯನ್ನು ವಿಧಿಸಿದಾಗಲೂ ಕೂಡ ನಿಶ್ಚಲನಾಗಿದ್ದ ರಘುನಾಥನು ಖಡ್ಗವನ್ನು ಮುರಿದು ಬಿಸುಟಾಗ ಬಹುವಾಗಿ ನಡುಗಿದನು. ಆದರೆ ಯಾವಮಾತನ್ನೂ ಆಡದೆ ಶಿವಾಜಿಯನ್ನು ಒಂದುಸಾರಿ ನೋಡಿ, ನೆಲಮುಟ್ಟಿ ತಲೆಬಾಗಿ ವಂದಿಸಿ, ಹಿಂದಿರುಗಿನೋಡದೆ ಹೊರಟುಹೋದನು. ಎಲ್ಲರೂ ಅವನನ್ನೇ ನೋಡುತ್ತಿದ್ದರು

---

## ಹನ್ನೆರಡನೆಯ ಪ್ರಕರಣ.

---

### (ಚಂದ್ರರಾಯ)

ಚಂದ್ರರಾಯನ ಪರಿಚಯವನ್ನು ನಮ್ಮ ಪಾಠಕರಿಗೆ ಉಂಟುಮಾಡಬೇಕಾಗಿದೆ. ಅವನು ಸಾಹಸಿ. ರಘುನಾಥನಿಗೂ ಆರೇಳುವರುಷ ದೊಡ್ಡವನು. ಆದರೆ ದೂರದಿಂದ ನೋಡಿದರೆ ನಾಲ್ವತ್ತುವರುಷದವನಂತೆ ಕಾಣುತ್ತಿದ್ದನು. ಅವನ ಮುಖದಲ್ಲಿ ಎರಡುಮೂರು ಚಿಂತಾರೇಖೆಗಳು ಗಾಢವಾಗಿ ನೆಟ್ಟುಕೊಂಡಿದ್ದುವು. ತಲೆಯಲ್ಲಿ ಬಿಳಿಯಕೂದಲುಗಳು ಅಲ್ಲಲ್ಲಿ ಇದ್ದುವು. ಕಣ್ಣುಗಳು ಬಹಳ ಚಿಕ್ಕವು; ಆದರೆ ಪ್ರಕಾಶವಾಗಿದ್ದುವು. ಅವನ ಸಾಹಸವು ದುರಾಲೋಚನೆಯಿಂದ ಕೂಡಿತ್ತೆಂದು ಅವನ ವಿಷಯವನ್ನು ಚೆನ್ನಾಗಿ ತಿಳಿದವರು ಹೇಳುತ್ತಿದ್ದರು. ಮಿತಭಾಷಿ. ಅವನ ಸಂಗಡ ಯಾರೂ ವಿವಾದವನ್ನು ಮಾಡರು. ಇದಕ್ಕೂ ಹೆಚ್ಚಾಗಿ ದೋಷಗಳಾಗಲಿ, ಗುಣಗಳಾಗಲಿ ಚಂದ್ರರಾಯನಲ್ಲಿ ಇತ್ತೆಂದು ಯಾರೂ ಹೇಳರು. ಆದರೆ, ಈ ವಿಷಯವನ್ನು ಮಾತ್ರ ಅಲ್ಲಲ್ಲಿ ಕೇಳಿರುವೆವು. ತಾನು ಯೋಚಿಸಿದ ಕೆಲಸವು ನೆರವೇರುವುದಕ್ಕೆ ಅವನು ಯಾವ ಮಾರ್ಗವನ್ನಾದರೂ ಅವಲಂಬಿಸುವನು. ಆ ಕಾರ್ಯಕ್ಕೆ—ಶತ್ರುವಾಗಲಿ ಮಿತ್ರನಾಗಲಿ, ಅಪಕಾರಿಯಾಗಲಿ -- ಯಾರಾದರೂ ಅಡ್ಡಬಂದರೆ ಅವರನ್ನು ನಿಸ್ಸಂದೇಹವಾಗಿ ನೆಲಕ್ಕೆ ತುಳಿಯುವನು. ತನ್ನ ಕೆಲಸದಲ್ಲಿ ರಘುನಾಥನು ಅಡ್ಡಬರುವನೆಂದು ತೋರಿದುದರಿಂದ ಚಂದ್ರರಾಯನು ಅವನನ್ನು ಹುಳುವಿನಂತೆ ಕಾಲಿನಲ್ಲಿ ತುಳಿದು, ತನ್ನ ಮಾರ್ಗದಲ್ಲಿ ನಡೆದನು. ಇಂಥವನ ಪೂರ್ವವೃತ್ತಾಂತವನ್ನು ತಿಳಿಯುವುದು ಮುಖ್ಯವು.

ಚಂದ್ರರಾಯನು ತನ್ನ ಜನನ ವೃತ್ತಾಂತವನ್ನು ಎಂದೂ ಯಾರೊಡನೆಯೂ ಹೇಳಲಿಲ್ಲ. ರಾಜಾ ಜಸ್ವಂತಸಿಂಹನ ಸೇನಾಪತಿಯಾದ ಗಜಪತಿಸಿಂಹನು ಬಾಲ್ಯದಲ್ಲಿ

ಅವನನ್ನು ಕಾಪಾಡುತ್ತಿದ್ದನು. ಆ ದಿಕ್ಕಿಲ್ಲದ ಬಾಲನು ಗಜಪತಿಸಿಂಹನ ಮನೆಗೆಲಸಗಳನ್ನು ಮಾಡುತ್ತ ಯಜಮಾನನ ಇಷ್ಟದಂತೆ ನಡೆದುಕೊಂಡು ಯುದ್ಧದವೇಳೆ ಅವನ ಸಂಗಡ ಹೋಗುತ್ತಿದ್ದನು.

ಚಂದ್ರರಾಯನು ಹದಿನೈದುವರುಷ ಪ್ರಾಯದವನಾಗಿದ್ದಾಗ ಅವನ ಗಾಂಭೀರ್ಯವನ್ನೂ, ಅಪ್ರತಿಹತವಾದ ತೇಜಸ್ಸನ್ನೂ ನೋಡಿ ಗಜಪತಿಸಿಂಹನು ಸಂತೋಷಪಟ್ಟು, ಅವನನ್ನೂ ತನ್ನ ಮಗನಾದ ರಘುನಾಥನನ್ನೂ ತನ್ನ ಅಧೀನದ ಸೈನಿಕರನ್ನಾಗಿ ನಿಯಮಿಸಿದನು.

ಸೈನಿಕವ್ರತವನ್ನು ಹೊಂದಿ ಪ್ರತಿದಿನದಲ್ಲಿಯೂ ಚಂದ್ರರಾಯನು ತೋರಿಸಿದ ಪರಾಕ್ರಮವನ್ನು ನೋಡಿ ವೃದ್ಧ ಸೈನಿಕರು ಕೂಡ ವಿಸ್ಮಯಹೊಂದುತ್ತಿದ್ದರು. ಯುದ್ಧರಂಗದಲ್ಲಿ ಎಲ್ಲಿ ವಿಶೇಷ ವಿಪತ್ತುಂಟೋ, ಎಲ್ಲಿ ಶವಗಳು ರಾಶಿಯಾಗಿ ಬೀಳುತ್ತಿದ್ದುವೋ, ಎಲ್ಲಿ ಧೂಳು ಭೂವ್ಯಾಕಾಶಗಳನ್ನು ಮುಚ್ಚುತ್ತಿದ್ದಿತೋ, ಯಾವ ಸ್ಥಳದಲ್ಲಿ ಆರ್ತನಾದಗಳಿಂದಲೂ ಜಯಧ್ವನಿಗಳಿಂದಲೂ ಕಿವಿಯು ಗಡಚಿಕ್ಕುತ್ತಿದ್ದಿತೋ ಆಯಾ ಪ್ರದೇಶಗಳಲ್ಲಿ ಹುಡುಕಿದರೆ,-ಹದಿನೇಳುವರುಷದ ಯುವಕನೂ ಮಿತಭಾಷಿಯೂ ಪ್ರತಿಜ್ಞಾಶೀಲನೂ ಆದ ಚಂದ್ರರಾಯನು ನಮಗೆ ಕಾಣುತ್ತಿದ್ದನು. ಯುದ್ಧವು ಮುಗಿದನಂತರ ವಿಜಯಶಾಲಿಗಳಾದ ಸೈನಿಕರು ಸಂಗೀತದಿಂದಲೂ ಸರಸವಾಕ್ಯಗಳಿಂದಲೂ ಆನಂದದಿಂದಲೂ ಸುರಾಪಾನದಿಂದಲೂ ಕಾಲಕ್ಷೇಪಮಾಡುತ್ತಿದ್ದ ಸ್ಥಳದಲ್ಲಿ ಆ ಬಾಲಕನು ಕಾಣಲ್ಪಡುತ್ತಿರಲಿಲ್ಲ. ಸಂಧ್ಯಾವೇಳೆ ಅಂಧಕಾರಪ್ರದೇಶದಲ್ಲಿ ಕುಳಿತಿರುವನು. ಇಲ್ಲದಿದ್ದರೆ, ದೂರವಾಗಿರುವ ಹೊಲಗಳಲ್ಲಿ ಸಂಚರಿಸುತ್ತಿದ್ದನು. ಯಾವಾಗಲೂ ಅವನ ಮುಖವು ಹರ್ಷವಾಗಿಯೇ ಇದ್ದಿತು. ಈಗ ಅವನ ಉದ್ದೇಶವು ಸ್ವಲ್ಪಮಟ್ಟಿಗೆ ಸಫಲವಾಯಿತು. ಈಗ ಅವನು ಅನಾಮಧೇಯನಲ್ಲ ; ಗಜಪತಿಯ ಸೈನಿಕರಲ್ಲಿ ಚಂದ್ರರಾಯನು ಬಹಳ ತೇಜಸ್ವಿಯೆಂದೂ ವೀರನೆಂದೂ ಪ್ರಸಿದ್ಧನಾದನು. ಗೌರವವು ಹೆಚ್ಚಾಗಲು ಅವನ ದುರಾಶೆಯೂ ದರ್ಪವೂ ಹೆಚ್ಚಿದುವು.

ಒಂದಾನೊಂದು ಯುದ್ಧದಲ್ಲಿ ಚಂದ್ರರಾಯನು ಗಜಪತಿಸಿಂಹನನ್ನು ಮಹಾವಿಪತ್ತಿನಿಂದ ಕಾಪಾಡಿದನು. ಯುದ್ಧವು ನಡೆದತರುವಾಯ ಸಭೆಮಾಡಿ ಗಜಪತಿಯು ಅವನನ್ನು ಯಥೋಚಿತವಾಗಿ ಆದರಿಸಿ, ಎಲ್ಲರೂ ಕೇಳುವಂತೆ "ಚಂದ್ರರಾಯನೇ !

ಇಂದು ನಿನ್ನ ಸಾಹಸದಿಂದ ನನ್ನ ಪ್ರಾಣವುಳಿಯಿತು. ಇದಕ್ಕೆ ನಿನಗೆ ಯಾವ ಬಹುಮಾನವನ್ನು ಕೊಡಲಿ?'' ಎಂದು ಕೇಳಿದನು.

ಚಂದ್ರರಾಯನು ತಲೆಬಗ್ಗಿಸಿ ಸುಮ್ಮನೆ ನಿಂತಿದ್ದನು.

ಗಜಪತಿಯು ಸಸ್ನೇಹದಿಂದ ಪುನಃ ಹೀಗೆಂದನು-" ಚೆನ್ನಾಗಿ ಯೋಚಿಸಿ, ನಿನ್ನ ಇಚ್ಛೆಗೆಬಂದ ಬಹುಮಾನವನ್ನು ಕೇಳಬಹುದು; ಧನವೋ, ಅಧಿಕಾರವೋ, ಮತ್ತಾವುದೋ? ಚಂದ್ರರಾಯಾ! ನಿನಗೆ ನಾನು ಕೊಡದೆ ಇರುವುದೇನು?"

ಆಗ ಚಂದ್ರರಾಯನು ಮೆಲ್ಲಗೆ ತಲೆಯನ್ನು ಎತ್ತಿ ಹೀಗೆಂದನು—" ರಾಜಪುತ್ರರು ಮಾಡಿದ ವಾಗ್ದಾನವನ್ನು ತಪ್ಪುವುದಿಲ್ಲವೆಂಬುದು ಲೋಕಪ್ರಸಿದ್ಧವು. ವೀರಪುಂಗವಾ! ತಮ್ಮ ಮಗಳಾದ ಲಕ್ಷ್ಮೀದೇವಿಯನ್ನು ನನಗೆ ವಿವಾಹಮಾಡಿಕೊಡಿರಿ.''

ಸಭಿಕರು ಮೂಕರಾದರು. ಗಜಪತಿಯ ತಲೆಯಮೇಲೆ ಆಕಾಶವು ಕಳಚಿಬಿದ್ದಂತಾಯಿತು. ಕೋಪದಿಂದ ಅವನ ಶರೀರವು ಕಂಪಿಸತೊಡಗಿತು. ಒರೆಯಿಂದ ಖಡ್ಗವು ಅರ್ಧ ಹೊರಕ್ಕೆ ಬಂದಿತು. ಆದರೆ, ಎಲ್ಲವನ್ನೂ ಸೈರಿಸಿಕೊಂಡು ಸಮಾಧಾನದಿಂದ ಸ್ವಲ್ಪನಕ್ಕು ಗಜಪತಿಯು ಹೀಗೆಂದನು—ವಾಗ್ದಾನವನ್ನು ನಡೆಸುವುದಕ್ಕೆ ಸಿದ್ಧನಾಗಿರುವೆನು. ಆದರೆ ನೀನು ಮಹಾರಾಷ್ಟ್ರದಲ್ಲಿ ಬೆಳೆದವನು. ರಾಜಪುತ್ರಿಯರು ಮಹಾರಾಷ್ಟ್ರದ ಕುಟೀರಗಳಲ್ಲಿಯೂ, ಪರ್ವತ ಕಂದರಗಳಲ್ಲಿಯೂ, ಅರಣ್ಯಗಳಲ್ಲಿಯೂ ವಾಸಮಾಡತಕ್ಕವರಲ್ಲ! ಮೊದಲು ಲಕ್ಷ್ಮಿಗೆ ತಕ್ಕ ವಾಸಸ್ಥಳವನ್ನು ಏರ್ಪಡಿಸು. ಅರಣ್ಯದಲ್ಲಿ ಕುಟೀರಕ್ಕೆ ಬದಲಾಗಿ ದುರ್ಗವನ್ನು ನಿರ್ಮಿಸು; ದಸ್ಯುಗಳೆಂದು ಕರೆಯಲ್ಪಡುವುದಕ್ಕೆ ಬದಲಾಗಿ ವೀರನಾಮವನ್ನು ಸಂಪಾದಿಸು—ಅದಾದನಂತರ ರಾಜಪುತ್ರಕನ್ಯೆಯನ್ನು ಮದುವೆಯಾಗುವೆ! ಈಗ ಇನ್ನೇನಾದರೂ ಕೋರಿಕೆಯುಂಟೋ?"

" ಈಗ ಮತ್ತಾವ ಕೋರಿಕೆಯೂ ಇಲ್ಲ; ಇದ್ದರೆ ಪ್ರಭುಗಳಿಗೆ ಅದನ್ನು ವಿಜ್ಞಾಪಿಸುವೆನು." ಎಂದು ಚಂದ್ರರಾಯನು ಧೈರ್ಯವಾಗಿ ಹೇಳಿದನು.

ಸಭೆಯನ್ನು ಮುಗಿಸಿದರು. ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಉದಾರಚಿತ್ತನಾದ ಗಜಪತಿಸಿಂಹನು ಆದಿನ ನಡೆದ ವಿಷಯವನ್ನು ಮರೆತುಬಿಟ್ಟನು. ಆದರೆ ಚಂದ್ರರಾಯನುಮಾತ್ರ ಮರೆಯಲಿಲ್ಲ. ಆ ರಾತ್ರಿಯ

ವೇಳೆ ಆತನು ಗುಡಾರದಲ್ಲಿ ಅಲ್ಲಿಂದಿಲ್ಲಿಗೆ ತಿರುಗಾಡುತ್ತಿದ್ದನು. ಪರ್ಣಕುಟೀರವು ಅಂಧಕಾರಮಯವಾಗಿತ್ತು. ಆದರೆ ಅದಕ್ಕಿಂತ ದುರ್ಭೇದ್ಯವಾದ ಅಂಧಕಾರವು ಅವನ ಹೃದಯದಲ್ಲಿಯೂ ಮುಖದಲ್ಲಿಯೂ ಆವರಿಸುತ್ತಿದ್ದಿತು.

ಎರಡು ಘಳಿಗೆಗಳಾದ ತರುವಾಯ ಚಂದ್ರರಾಯನು, 'ದೀಪವನ್ನು ಹತ್ತಿಸಿ' ಎಂದು ಪುಸ್ತಕದಲ್ಲಿ ಏನನ್ನೋ ಪ್ರಯತ್ನಪೂರ್ವಕವಾಗಿ ಬರೆದು, ಆ ಪುಸ್ತಕವನ್ನು ಮುಚ್ಚಿ, ಪುನಃ ತೆರೆದುನೋಡಿ ಮುಚ್ಚಿದನು. ಆಗ ಅವನ ಮುಖದಲ್ಲಿ ವಿಕಟಹಾಸ್ಯವು ತೋರಿತು.

ಅಷ್ಟರೊಳಗೆ ಸ್ನೇಹಿತನೊಬ್ಬನು ಬಿಡಾರದೊಳಕ್ಕೆ ಬಂದು—"ಚಂದ್ರಾ! ಏನು ಬರೆಯುತ್ತಿರುವೆ ?" ಎಂದು ಕೇಳಲು, ಸಹಜವಾದ ಗಂಭೀರಸ್ವರದಿಂದ ಅವನು "ಮತ್ತೇನೂ ಇಲ್ಲ; ಸಾಲವನ್ನು ಬರೆಯುತ್ತಿದ್ದೇನೆ. ಯಾರಹತ್ತಿರ ತೆಗೆದುಕೊಂಡೆನೋ ಅದರ ವಿವರವನ್ನು ಬರೆಯುತ್ತಿದ್ದೇನೆ." ಎಂದು ಉತ್ತರವಿತ್ತನು.

ಮಿತ್ರನು ಹೊರಟನು. ಚಂದ್ರರಾಯನು ಪುನಃ ಪುಸ್ತಕವನ್ನು ತೆರೆದನು. ನಿಜವಾಗಿಯೂ ಅದು ಹಸ್ತಪುಸ್ತಕವಾಗಿದ್ದಿತು. ಅವನು ಒಂದು ಸಾಲದ ವಿಷಯವನ್ನು ಬರೆದಿದ್ದನು. ಚಂದ್ರರಾಯನು ಪುಸ್ತಕವನ್ನು ಮುಚ್ಚಿಟ್ಟು ದೀಪವನ್ನು ಆರಿಸಿದನು.

ಆದಾದ ಒಂದು ವರುಷದಮೇಲೆ ಔರಂಗಜೇಬನ ಸಂಗಡ ಜಸ್ವಂತಸಿಂಹನಿಗೆ ಉಜ್ಜಯಿನಿಯ ಸಮೀಪದಲ್ಲಿ ಮಹಾಯುದ್ಧವು ಸಂಭವಿಸಿತು. ಆ ಯುದ್ಧದಲ್ಲಿ ಗಜಪತಿಸಿಂಹನು ಮೃತಪಟ್ಟನು.

ದಿಕ್ಕಿಲ್ಲದ ಗಜಪತಿಯ ಪುತ್ರನೂ, ಪುತ್ರಿಯೂ ಮಾರವಾಡ ದೇಶದಿಂದ ಮೇವಾಡದಲ್ಲಿದ್ದ ಸೂರ್ಯಮಹಲ್ ದುರ್ಗಕ್ಕೆ ಹೋಗುತ್ತಿದ್ದರು. ರಘುನಾಥನು ಹನ್ನೆರಡು ವರುಷಗಳ ಬಾಲನು. ಲಕ್ಷ್ಮಿಯು ಒಂಭತ್ತು ವರುಷದವಳು. ಅವರ ಹಿಂದೆ ಒಬ್ಬ ವೃದ್ಧಸೇವಕನು ಇದ್ದನು. ಮಾರ್ಗಮಧ್ಯದಲ್ಲಿ ಒಂದು ಕಳ್ಳರಗುಂಪು ಸೇವಕನನ್ನು ವಧಿಸಿ, ಅವರಿಬ್ಬರನ್ನೂ ಮಹಾರಾಷ್ಟ್ರದೇಶಕ್ಕೆ ಕರೆದುಕೊಂಡು ಹೋಯಿತು. ಚಿಕ್ಕವನಾದರೂ ರಘುನಾಥನು ತೇಜಸ್ವಿಯಾಗಿದ್ದನು. ಅವನು ಹೇಗೆಯೋ ರಾತ್ರಿಯವೇಳೆ ಕಳ್ಳರಗುಂಪಿನಿಂದ ತಪ್ಪಿಸಿಕೊಂಡನು. ಕಳ್ಳರ ನಾಯಕನು ಲಕ್ಷ್ಮೀಬಾಯಿಯನ್ನು ಬಲವಂತದಿಂದ ಮದುವೆಯಾದನು ಅವನೇ ಚಂದ್ರರಾಯ !

ದುರ್ಬುದ್ಧಿಯುವನಾದ ಚಂದ್ರರಾಯನ ಮನೋರಥವು ಸ್ವಲ್ಪಮಟ್ಟಿಗೆ ಸಫಲವಾಯಿತು. ಗಜಪತಿಯ ಮನೆಯಿಂದ ಅವನು ಸ್ವಲ್ಪ ಹಣವನ್ನು ತೆಗೆದುಕೊಂಡು ಬಂದಿದ್ದನು. ಆ ಹಣದಿಂದ ಮಹಾರಾಷ್ಟ್ರ ದೇಶದಲ್ಲಿ ಒಂದು ಜಹಗೀರನ್ನು ಕೊಂಡು ದೊಡ್ಡ ಮನುಷ್ಯನಾದನು. ಚಂದ್ರರಾಯನ ವಂಶವು ಪುರಾತನವಾದ ಒಂದು ರಾಜಪುತ್ರಗೋತ್ರದಿಂದ ಹುಟ್ಟಿತೆಂದು ಎಲ್ಲರೂ ನಂಬಿದರು; ಏಕೆಂದರೆ, ಅವನು ಪ್ರಸಿದ್ಧನಾದ ಗಜಪತಿಸಿಂಹನ ಮಗಳನ್ನು ಮದುವೆಯಾಗಿರುವುದು ಸ್ಪಷ್ಟವೇ ಅಲ್ಲವೆ? ಅವನ ಪರಾಕ್ರಮವನ್ನು ನೋಡಿ ಶಿವಾಜಿಯು ಅವನನ್ನು ಜಮಾದಾರನನ್ನಾಗಿ ನಿಯಮಿಸಿದನು. ಚಂದ್ರರಾಯನ ಅತುಳೈಶ್ವರ್ಯವನ್ನೂ ಜಹಗೀರಿಯನ್ನೂ ನೋಡಿ ಎಲ್ಲರೂ ಅವನನ್ನು ಗೌರವಿಸುತ್ತಿದ್ದರು. ಇವನ ಕೀರ್ತಿಯು ದಿನೇದಿನೇ ಅಭಿವೃದ್ಧಿ ಹೊಂದುತ್ತಾ ಬಂದಿತು. ರಘುನಾಥನು ತನ್ನ ಯಶೋಮಾರ್ಗದಲ್ಲಿ ಅಡ್ಡವಾಗಿ ದುಸ್ಸಮಯದಲ್ಲಿ ನಿಂತಿದ್ದುದರಿಂದ ಅವನನ್ನು ಕೂಡಲೆ ನೆಲಕ್ಕೆ ತಳ್ಳಿ ಮಾರ್ಗವನ್ನು ಪರಿಷ್ಕರಿಸಿಕೊಂಡನು.

ರಘುನಾಥನು ಕಳ್ಳರಗುಂಪಿನಿಂದ ತಪ್ಪಿಸಿಕೊಂಡು ಹೋಗಿ ಗ್ರಾಮಗಳಲ್ಲಿ ತಿರುಗುತ್ತಾ ಕಾಲಕಳೆಯುತ್ತಿದ್ದನು. ದಿಕ್ಕಿಲ್ಲದ ಈ ಬಾಲನನ್ನು ನೋಡಿ ಆಶ್ರಯವನ್ನೀಯಲು ಯಾರೂ ಪ್ರಯತ್ನಿಸದೆ ಹೋದರು.

ಆದಾದಮೇಲೆ ಅಯ್ದಾರು ವರುಷಗಳವರೆಗೂ ರಘುನಾಥನು ನಾನಾಪ್ರದೇಶಗಳಲ್ಲಿ ತಿರುಗುತ್ತಾ ಕಾಲವನ್ನು ಕಳೆಯುತ್ತಿದ್ದನು. ಬಹು ಕಷ್ಟಪಟ್ಟನು. ಶೋಕವೆಂಬ ಮಹಾಸಮುದ್ರದಲ್ಲಿ ಆ ಬಾಲಕನು ದಿಕ್ಕಿಲ್ಲದವನಂತೆ ಕೊಚ್ಚಿಕೊಂಡು ಹೋಗುತ್ತಿರಲು, ಅವನನ್ನು ಉದ್ಧರಿಸಿದವರು ಯಾರೂ ಇಲ್ಲ. ಅವನು ಭಿಕ್ಷೆಯಿಂದ ಜೀವಿಸುತ್ತಾ, ಕೆಲವು ದಿನಗಳನಂತರ ದಾಸ್ಯವೃತ್ತಿಯನ್ನು ಅವಲಂಬಿಸಿದನು. ಹಿಂದಿನ ಮಹಾದಶೆಯೂ ತನ್ನ ತಂದೆಯ ಔನ್ನತ್ಯವೂ ಅವನ ಹೃದಯದಲ್ಲಿ ಯಾವಾಗಲೂ ನೆಟ್ಟಿದ್ದರೂ ಅಭಿಮಾನಶಾಲಿಯಾದ ಬಾಲನು ಆ ಸಂಗತಿಯನ್ನು ಯಾರಿಗೂ ತಿಳಿಯಪಡಿಸುತ್ತಿರಲಿಲ್ಲ. ಒಂದೊಂದುವೇಳೆ ದುಃಖಭಾರವನ್ನು ಸೈರಿಸಲಾರದೆ ರಘುನಾಥನು ನಿರ್ಜನಪ್ರದೇಶಕ್ಕೆ ಹೋಗಿ, ಹೊಟ್ಟೆಯು ಒಡೆದುಹೋಗುವಂತೆ ರೋದನಮಾಡಿ ಸ್ವಲ್ಪ ಹೊತ್ತಿನಮೇಲೆ ಪುನಃ ತನ್ನ ಕೆಲಸದಮೇಲೆ ಬರುತ್ತಿದ್ದನು. ವಯಸ್ಸಾಗುತ್ತ ಬಂದ ಹಾಗೆಲ್ಲ ರಘುನಾಥನಿಗೆ ನಿಜವಂಶಕ್ಕೆ ಉಚಿತಭಾವನೆಗಳು ತನ್ನಷ್ಟಕ್ಕೆ ತಾನೇ ಉಂಟಾ

ಗುತ್ತ ಒಂದುವು. ಅಲ್ಪವಯಸ್ಕನಾದ ಆ ಸೇವಕನು ಆಗಾಗ್ಗೆ ತನ್ನ ಯಜಮಾನನ ಕಿರೀಟವನ್ನು ತನ್ನ ತಲೆಯಲ್ಲಿ ಧರಿಸಿ, ಖಡ್ಗವನ್ನು ಮೇಲಕ್ಕೆ ಎತ್ತುತ್ತಿದ್ದನು. ಸಂಧ್ಯಾ ಸಮಯದಲ್ಲಿ ಒಂದೆಡೆ ಕುಳಿತು ಸಂಗ್ರಾಮಸಿಂಹನ ಯಶೋಗೀತಗಳನ್ನಾಗಲಿ, ಪ್ರತಾಪಸಿಂಹನ ಯಶೋಗೀತಗಳನ್ನಾಗಲಿ ಹಾಡುತ್ತಾ, ದಾರಿಯಲ್ಲಿ ಹೋಗುವವರು ತನ್ನ ಶರೀರಗಳನ್ನು ಮರೆಯುವಂತೆ ಮಾಡುತ್ತಿದ್ದನು. ಹದಿನೆಂಟುವರುಷ ವಯಸ್ಸಾದಾಗ ರಘುನಾಥನು ಶಿವಾಜಿಯ ಮಹೋದ್ದೇಶವನ್ನು ಗ್ರಹಿಸಿ, ದಕ್ಷಿಣದೇಶದಲ್ಲಿ ಹಿಂದೂ ರಾಜ್ಯವು ಪ್ರಬಲವಾಗುವುದೆಂದು ಸಂತೋಷಿಸಿ, ಶಿವಾಜಿಪ್ರಭುವಿನ ಸನ್ನಿಧಿಗೆ ಹೋಗಿ, ಸಾಮಾನ್ಯ ಸೈನಿಕನಾಗಿ ತನ್ನನ್ನು ನಿಯಮಿಸುವಂತೆ ಆತನನ್ನು ಪ್ರಾರ್ಥಿಸಿದನು.

ಜನರ ಸ್ಥಿತಿಯನ್ನು ಕಂಡುಹಿಡಿಯುವುದರಲ್ಲಿ ಶಿವಾಜಿಯು ಅದ್ವಿತೀಯನು. ಕೆಲವು ದಿನಗಳಲ್ಲಿಯೇ ಅವನು ರಘುನಾಥನನ್ನು ಹವಾಲ್ದಾರನನ್ನಾಗಿ ಮಾಡಿದನು. ಅವನ ನಿಜವಾದ ಹೆಸರು ರಘುನಾಥಸಿಂಹ; ಆದರೆ ಮಹಾರಾಷ್ಟ್ರದೇಶದಲ್ಲಿ ಅವನನ್ನು ಜನರು ರಘುನಾಥಜೀ ಎಂದು ಕರೆಯುತ್ತಿದ್ದರು.

ರಘುನಾಥನು ಶಿವಾಜಿಯ ಬಳಿಯಲ್ಲಿರುವಾಗ ಜಮಾನದಾರ ಚಂದ್ರರಾಯನ ಒಳಿಯಲ್ಲಿದ್ದ ಒಬ್ಬ ಹವಾಲ್ದಾರನು ಮೃತಪಟ್ಟಿದ್ದುದರಿಂದ ರಘುನಾಥನಿಗೆ ಆ ಪದವಿಯು ದೊರೆದಿತು. ಇವನು, ಚಂದ್ರರಾಯನು, ತನ್ನ ತಂದೆಯ ಹಳೆಯಭಂಟನೆಂದೂ, ತನ್ನ ಬಾಲ್ಯಸ್ನೇಹಿತನೆಂದೂ ತಿಳಿದಿದ್ದನು; ಆದರೆ, ಚೋರನಾಯಕನೆಂದೂ ತನ್ನ ತಂಗಿಯಗಂಡನೆಂದೂ ರಘುನಾಥನಿಗೆ ತಿಳಿಯದು. ಆದುದರಿಂದ ಅವನು ಚಂದ್ರರಾಯನೊಡನೆ ಸಾನಂದದಿಂದ ಮಾತನಾಡುತ್ತಿದ್ದನು. ಚಂದ್ರರಾಯನು ಅವನನ್ನು ಆದರಿಸಿದನು. ಆದರೆ, ಅವನ ಮನಸ್ಸಿನಲ್ಲಿ ಅಸೂಯೆಯು ಮತ್ತೆ ತಲೆಯೆತ್ತಿತು.

ದಿನದಿನಕ್ಕೂ ರಘುನಾಥನ ಕೀರ್ತಿಯು ಹೆಚ್ಚುತ್ತಬಂದಂತೆ ಚಂದ್ರರಾಯನಿಗೆ ಚಿಂತೆಯು ಹೆಚ್ಚಾಗುತ್ತ ಒಂದಿತು. ಚಂದ್ರರಾಯನು ದೃಢಪ್ರತಿಜ್ಞಾವಂತನಲ್ಲವೇ, ಹೇಗಾದರೇನು ? ಅವನು ರಘುನಾಥನ ಪ್ರಾಣಗಳನ್ನು ತಗೆಯಿಸುವ ಪ್ರಯತ್ನಮಾಡಿದನು. ದೈವಯೋಗದಿಂದ ಅವನ ಪ್ರಾಣವುಳಿಯಿತು. ಆದರೆ ಅವನು ರಾಜದ್ರೋಹಿಯೆಂದೂ ದುರ್ಮಾರ್ಗನೆಂದೂ ಲೋಕಕ್ಕೆ ಗೊತ್ತಾದನಲ್ಲವೆ ?

ಚಂದ್ರರಾಯನು ಕೆಲವು ದಿನಗಳ ಮಟ್ಟಿಗೆ ರಜಾತೆಗೆದುಕೊಂಡು ತನ್ನ ಜಹ ಗೀರಿಗೆ ಹೋದನು. ಪಾಠಕಮಹಾಶಯರೇ! ನಡೆಯಿರಿ—ನಾವು ಕೂಡ ನಿರ್ಭ ಯವಾಗಿ ಅವನ ಮಂದಿರವನ್ನು ಪ್ರವೇಶಿಸುವ.

ಅವನು ಹೊರಗಿನ ಬಾಗಿಲನ್ನು ಸಮೀಪಿಸಿದ ಕೂಡಲೆ ನಗಾರಿಗಳು ಬಾರಿಸಲ್ಪ ಟ್ಟವು. ದಾಸದಾಸೀಜನರು ಪ್ರಭುವಿಗೆ ಎದುರಾದರು. ಗ್ರಾಮದ ದೊಡ್ಡ ಮನು ಷ್ಯರು ಅವನನ್ನು ಸಂದರ್ಶಿಸಲು ಬಂದರು. ಅವನ ಆಗಮನವಾರ್ತೆಯು ಜಹಗೀರಿ ಯಲ್ಲೆಲ್ಲ ವ್ಯಾಪಿಸಿತು. ಗಂಡನನ್ನು ಗೌರವಿಸುವುದಕ್ಕಾಗಿ ಶಾಂತೆಯೂ ಕೃಶಾಂಗಿಯೂ ಆದ ಲಕ್ಷ್ಮೀಬಾಯಿಯು ಅಂತಃಪುರದಲ್ಲಿ ಏನೋ ಸನ್ನಾಹ ಮಾಡುತ್ತಿದ್ದಳು.

ನಿಜವಾಗಿಯೂ ಲಕ್ಷ್ಮೀಬಾಯಿಯು ಲಕ್ಷ್ಮೀದೇವಿಗೆ ಸಮಾನಳು, ಪರ ಮಶಾಂತಳು, ಬುದ್ಧಿವಂತೆ, ಪತಿವ್ರತೆ. ಬಾಲ್ಯದಲ್ಲಿ ತುಂಬ ಪ್ರೇಮದಿಂದ ಬೆಳೆದು, ಚಿಕ್ಕಂದಿನಲ್ಲಿಯೇ ವಿದೇಶದಲ್ಲಿ ಅಪರಿಚಿತರ ನಡುವೆ. ಮಿತಭಾಷಿಯೂ, ಕಠಿಣ ಸ್ವಭಾ ವದವನೂ ಆದ ಗಂಡನ ಪಾಲಾದುದರಿಂದ. ಮರದಿಂದ ಬಿದ್ದ ಸುಕುಮಾರ ಕುಸುಮ ದಂತೆ ಅವಳು ಶುಷ್ಕಳಾಗು (ಸಣ್ಣವಾಗು)ತ್ತ ಬಂದಳು. ಒಂಭತ್ತುವರ್ಷದ ಬಾಲೆಯ ಜೀವಿತವು ಶೋಕಾಕುಲವಾಯಿತು. ಲಕ್ಷ್ಮೀಬಾಯಿಯು ಆ ದುಃಖ ವನ್ನು ಯಾರೊಡನೆ ಹೇಳಿಕೊಳ್ಳಬೇಕು? ಎರಡು ಮಾತುಗಳನ್ನಾಡಿ ಅವಳನ್ನು ಸಮಾಧಾನಪಡಿಸುವರು ಯಾರು? ಬಾಲೆಯು ತನ್ನ ಪೂರ್ವವೃತ್ತಾಂತವನ್ನು ಸ್ಮರ ಣೆಗೆ ತಂದುಕೊಂಡಿದ್ದಳು; ತಂದೆಯನ್ನೂ ಅಣ್ಣನನ್ನೂ ನೆನಸಿಕೊಂಡು ಇಷ್ಟು ಹೊತ್ತು ರಹಸ್ಯವಾಗಿ ಕಣ್ಣೀರು ಬಿಡುತ್ತಿದ್ದಳು.

ದುಃಖದ ಪಾಲಾಗಿ, ಕಷ್ಟಗಳಿಗೆ ಸಿಕ್ಕದಾಗ ಬುದ್ಧಿಯು ತೀಕ್ಷ್ಣವಾಗುವುದು; ನಾವು ಸಹಿಷ್ಣುಗಳಾಗುವೆವು. ಬಾಲೆಯೊಬ್ಬಳೇ ಎರಡು ವರುಷಗಳಿಂದ ಮನೆಯ ಕೆಲಸಗಳನ್ನು ಮಾಡುತ್ತಾ ಪತಿಸೇವಾನಿರತಳಾದಳು. ಹಿಂದೂ ರಮಣಿಯರಿಗೆ ಪತಿ ಗಿಂತ ಬೇರೆ ದೈವವಿಲ್ಲವಷ್ಟೆ! ಗಂಡನು ಸದಯಹೃದಯನಾದನೆಂದು ಲಕ್ಷ್ಮೀಬಾಯಿಯು ಸಂತೋಷಿಸುತ್ತಿದ್ದಳು. ನಿರ್ದಯನೂ, ವಿಮುಖನೂ ಆದರೂ ಸ್ತ್ರೀಯರಿಗೆ ಪತಿಸೇವೆಗಿಂತ ಮತ್ತೆ ಬೇರೆ ಗತಿಯಿಲ್ಲ. ಚಂದ್ರರಾಯನು ತುಂಬ ಅಭಿಮಾನಿಯೂ ದುರಾಶಾಪರನೂ, ಕ್ರೂರನೂ ಆದರೂ ಈ ಅಬಲೆಯಲ್ಲಿ ನಿಷ್ಠುರವಾಗಿ ಪ್ರವರ್ತಿಸನು. ಆಕೆಯ ಉಪ ಚಾರದಿಂದ ಚಂದ್ರರಾಯನಿಗೆ ಬಹಳ ಸಂತೋಷ. ಯುದ್ಧವು ಕೊನೆಗಂಡಮೇಲೆ

ಚಂದ್ರರಾಯ
ಲದ ತಟ್ಟೆಯನ್ನು ...ನಾದ ತನ್ನ ಭಾರ್ಯೆಯ ಹತ್ತಿರಕ್ಕೆ ಬರುವನು. ಅವಳ ರೂಪನ್ನು ನೋಡಿಯೂ ಮೃದುಮಧುರವಾದ ಮಾತುಗಳನ್ನು ಕೇಳಿಯೂ, ಲಕ್ಷ್ಮೀ ಬಾಯಿಯನ್ನು ಆಲಿಂಗಿಸಿಕೊಳ್ಳುವನು; ಆ ವೇಳೆಯಲ್ಲಿ ಅವಳು ಲೋಕದಲ್ಲಿ ತಾನೇ ಧನ್ಯಳೆಂದು ಭಾವಿಸುವಳು. ಹೃದಯೇಶ್ವರನು ತೋರ್ಪಡಿಸುವ ಸಾಮಾನ್ಯ ವಿಶ್ವಾಸದಿಂದ ಪುಲಕಿತಗಾತ್ರಳಾಗುವಳು. ಗಂಡನು ಹೇಳುವ ಮಾತಿಗೆ ಅವಳ ಹೃದಯವು ನಾಟ್ಯವಾಡುತ್ತಿದ್ದಿತು. ಆಹಾ ! ಉದ್ಯಾನವನದಿಂದ ಒಂದು ಹೂವನ್ನು ತಂದು ಮನೆಯ ಮಧ್ಯದಲ್ಲಿಟ್ಟು ಅದರಮೇಲೆ ಸೂರ್ಯಕಿರಣವು ಬಿದ್ದರೆ ಎಷ್ಟು ಚೆನ್ನಾಗಿ ಪ್ರಕಾಶಿಸುವದು ?

ಈ ರೀತಿಯಲ್ಲಿ ಸೌಖ್ಯಪರವಶಳಾಗಿ ಪತಿಸೇವಾ ನಿರತಳಾಗಿ ಕೆಲವು ವರುಷ್ಟಗಳನ್ನು ಕಳೆದಳು. ಆನಂತರ ಲಕ್ಷ್ಮೀಬಾಯಿಗೆ ಯೌವನದಶೆಯು ಪ್ರಾರಂಭವಾಯಿತು. ಅವಳು ಯೌವನದಲ್ಲಿ ಶಾಂತಳು ! ಲಕ್ಷ್ಮಿಯು ತನ್ನ ಪೂರ್ವವೃತ್ತಾಂತವನ್ನು ಮರೆತುಹೋದಳು; ಒಂದೊಂದು ವೇಳೆ ಸಂಧ್ಯಾಸಮಯಗಳಲ್ಲಿ ರಾಜಾಸ್ಥಾನದ ಸಂಗತಿಯನ್ನು ಜ್ಞಾಪಿಸಿಕೊಂಡು, ತನ್ನ ಬಾಲ್ಯ, ಬಾಲಕ್ರೀಡೆಗಳು, ಪ್ರಿಯ ಸಹೋದರನು ಜ್ಞಾಪಕಕ್ಕೆ ಬರಲು ನಿಶ್ಶಬ್ದವಾಗಿ ಆಕೆಯ ಕೆನ್ನೆಗಳ ಮೇಲೆ ಒಂದೆರಡು ತೊಟ್ಟು ಕಣ್ಣೀರು ಬೀಳುತ್ತಿತ್ತು. ಅನಂತರ ಧೈರ್ಯವನ್ನು ತಂದುಕೊಂಡು ಕಣ್ಣೀರನ್ನು ಒರಸಿಕೊಂಡು ಪುನಃ ಗೃಹಕೃತ್ಯಗಳಲ್ಲಿ ಪ್ರವೇಶಿಸುತ್ತಿರುವಳು

ಇಂದು ಚಂದ್ರರಾಯನು ಭೋಜನ ಮಾಡುತ್ತಿರಲು, ಪಕ್ಕದಲ್ಲಿ ನಿಂತು ಲಕ್ಷ್ಮೀಬಾಯಿಯು ಅವನಿಗೆ ಬೀಸಣಿಗೆಯಿಂದ ಬೀಸುತ್ತಿರುವಳು. ಈಗ ಆಕೆಗೆ ಹದಿನೇಳುವರುಷ ವಯಸ್ಸು. ಆಕೆ ಸೌಂದರ್ಯವತಿಯೇ, ಆದರೆ ರಾಜಾಸ್ಥಾನದ ಕುಸುಮವು ಮಹಾರಾಷ್ಟ್ರದಲ್ಲಿ ಚೆನ್ನಾಗಿ ವಿಕಸಿಸಿ, ಅದರ ಪ್ರಕಾಶವನ್ನು ಹರಡುತ್ತಿದ್ದರೂ, ಸರಿಯಾದ ಪೋಷಣೆಯಿಲ್ಲದೆ ಕ್ಷೀಣಿಸುತ್ತಿದೆ.

"ನಿಮ್ಮ ಅಣ್ಣನು ನನ್ನ ಅಧೀನದಲ್ಲಿ ಹವಾಲ್ದಾರನಾಗಿರುವನು. ಕೀರ್ತಿ ಸಂಪಾದಿಸುತ್ತಿರುವನು." ಎಂದು ಚಂದ್ರರಾಯನು ಲಕ್ಷ್ಮಿಯಸಂಗಡ ಒಂದು ದಿನ ಹೇಳಿದ್ದನು. ಆಮಾತು ಮುಗಿದಕೂಡಲೆ ಅವನ ಮುಖವು ಕಳೆಗುಂದಿ ವಿವರ್ಣವಾದುದನ್ನು ನೋಡಿ ಲಕ್ಷ್ಮೀಬಾಯಿಯು ಸಂಶಯ ಗ್ರಸ್ತಳಾದಳು.

ಒಂದು ತನ್ನ ಜಾ

ಮತ್ತೊಂದು ದಿನ ಗಂಡನು ಹೇಳಿದ ಒಂದೆರಡು ವಾಕ್ಯ ಕೂಡ ನಿರ್ಭೀ ಹೊಂದಿ, ಗಂಡನ ಪಾದಯುಗ್ಮದ ಬಳಿ ಕುಳಿತು ಅವಳು "ಈ ಸೇವಕ ಎಜ್ಞಾ ಪನೆಯೊಂದಿರುವುದು. ಹೇಳುವುದಕ್ಕೆ ಭಯವಾಗುತ್ತದೆ." ಎಂದಳು.

ಮೃದುವಾದ ಹಾಸಿಗೆಯಮೇಲೆ ಮಲಗಿ ಚಂದ್ರರಾಯನು ತಾಂಬೂಲವನ್ನು ಅಗಿಯುತ್ತಾ, ತಲೆಯನ್ನು ಬಗ್ಗಿಸಿಕೊಂಡು ಕುಳಿತಿದ್ದ ಹೆಂಡತಿಯನ್ನು ಸಸ್ನೇಹವಾಗಿ ಮುದ್ದಿಟ್ಟು, "ಅದೇನೋ ಹೇಳು; ನಿನಗೆ ನಾನು ಕೊಡದೆ ಇರುವುದೇನಿದೆ ?" ಎಂದು ಕೇಳಿದನು.

ಲಕ್ಷ್ಮೀ—ನನ್ನ ಸೋದರನು ಚಿಕ್ಕವನು, ತಿಳಿವಳಿಕೆ ಇಲ್ಲದವನು.

(ಚಂದ್ರರಾಯನ ಮುಖವು ಗಂಭೀರವಾಯಿತು.)

ಲಕ್ಷ್ಮೀ—ಅವನು ನಿಮ್ಮ ಸೇವಕನೇ ?

ಚಂದ್ರ—ಅವನು ನನಗಿಂತಲೂ ಸಾಹಸಿಯೆಂದು ಹೆಸರುಗೊಂಡಿರುವನು.

ಬುದ್ಧಿವಂತಳಾದ ಲಕ್ಷ್ಮೀಬಾಯಿಯು ಅವನ ಅಭಿಪ್ರಾಯವನ್ನು ಗ್ರಹಿಸಿದಳು. ಅವಳು ಭಯಪಡುತ್ತಿರುವಂತೆಯೇ ಆಯಿತು!—ಚಂದ್ರರಾಯನು ರಘುನಾಥನಲ್ಲಿ ವಿಷಸರ್ಪದಂತೆ ಇದ್ದನು. ಅವಳು ಭಯದಿಂದ ನಡುಗುತ್ತ "ಚಿಕ್ಕವನು ತಪ್ಪುಮಾಡಿದರೂ ನೀವು ಕ್ಷಮಿಸಬೇಕು. ನೀವೇ ಕ್ಷಮಿಸದೆ ಹೋದರೆ ಅವನಲ್ಲಿ ಅನುಗ್ರಹವಿಡುವವರು ಯಾರು" ಎಂದು ಗಂಡನನ್ನು ಬೇಡಿದಳು.

(ಚಂದ್ರರಾಯನ ಮುಖವು ಮರಳಿ ಕೆಂಪೇರಿದುದರಿಂದ ಲಕ್ಷ್ಮಿಯು ಆ ಸಂಗತಿಯನ್ನು ಬಿಟ್ಟು ಬಿಟ್ಟಳು.)

ಆ ಸಂಗತಿಯು ನಡೆದು ಅನೇಕ ದಿವಸಗಳಾದುವು. ಅನಂತರ ಚಂದ್ರರಾಯನು ಬರುವುದಕ್ಕೆ ಇದೇ ಮೊದಲು; ಲಕ್ಷ್ಮೀಬಾಯಿಗೆ ರಘುನಾಥನ ತೊಂದರೆಯ ಸಂಗತಿ ತಿಳಿಯದು. ಆದರೂ ಅವಳ ಹೃದಯವು ಏಕೋ ಚಿಂತಾಕುಲವಾಗಿದ್ದಿತು. ಗಂಡನನ್ನು ಕೇಳದೆ ಹೋದಳು; ಚಂದ್ರರಾಯನು ನಿದ್ರೆಮಾಡಿದತರುವಾಯ ಸೇವಕರನ್ನು ಕೇಳಿ, ಸಹೋದರನ ವೃತ್ತಾಂತವನ್ನು ತಿಳಿದುಕೊಳ್ಳಬಹುದೆಂದು ಭಾವಿಸಿರಬಹುದು.

ಚಂದ್ರರಾಯನು ಊಟಮಾಡಿ ಮಲಗುವ ಮನೆಗೆ ಹೋದನು. ತಾಂಬೂಲದ ತಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಲಕ್ಷ್ಮೀಬಾಯಿಯು ಅಲ್ಲಿಗೆ ಹೋದಳು. ನೋಡಲು ಅವನ ಮುಖವು ಚಿಂತಾಕುಲವಾಗಿದ್ದಿತು. ಗಂಡನಿಗೆ ತಾಂಬೂಲವಿತ್ತು ನಿಶ್ಶಬ್ದವಾಗಿ ಅಲ್ಲಿಂದ ಹೊರಟುಹೋದಳು. ಏನನ್ನೋ ಆಲೋಚಿಸುತ್ತಾ ಚಂದ್ರರಾಯನು ಬಾಗಿಲನ್ನು ಮುಚ್ಚಿಕೊಂಡನು.

ನಿಶ್ಶಬ್ದವಾಗಿ ಅವನು ಒಂದು ಗುಪ್ತಸ್ಥಾನದಿಂದ ಒಂದು ಪೆಟ್ಟಿಗೆಯನ್ನು ತೆಗೆದು, ಅದರಲ್ಲಿದ್ದ ಒಂದು ಪುಸ್ತಕವನ್ನು ಹೊರಕ್ಕೆ ತೆಗೆದಿಟ್ಟನು. ನೋಡಲು ಅದು ಹಸ್ತಪುಸ್ತಕವಾಗಿದ್ದಿತು. ಸುಮಾರು ಹತ್ತು ವರುಷಗಳ ಕೆಳಗೆ ಗಜಪತಿಸಿಂಹನ ಸಭೆಯಲ್ಲಿ ಅವಮಾನ ಹೊಂದಿದ ದಿನ, ಚಂದ್ರರಾಯನು ಆ ಪುಸ್ತಕದಲ್ಲಿ ಒಂದು ಸಾಲದ ವಿಷಯವನ್ನು ಬರೆದಿದ್ದನು. ಆ ಪತ್ರವನ್ನು ಹಿಂತಿರುಗಿಸಲು ಸುಂದರವಾದ ಅಕ್ಷರಗಳಿಂದ ಸ್ಪಷ್ಟವಾಗಿ ಈರೀತಿ ಕಾಣಿಸುತ್ತಿದ್ದಿತು:—

"ಸಾಲಗಾರನು........ ..........................ಗಜಪತಿಸಿಂಹನು; ಸಾಲ ..............ಅವಮಾನವು; ಪರಿಶೋಧನೆ................ಅವನ ರಕ್ತದಿಂದಲೂ,......... ..............ವಂಶಾವಮಾನದಿಂದಲೂ."

ಒಂದು ಸಾರಿ ಎರಡು ಸಾರಿ ಈ ಅಕ್ಷರಗಳನ್ನು ಓದಿ, ವಿಕಟಾನನದಲ್ಲಿ ಮಂದಹಾಸವು ತೋರಲು, ಚಂದ್ರರಾಯನು ಅದರ ಕೆಳಗೆ, "ಇಂದು ಸಾಲತೀರಿತು."

ಎಂದು ಬರೆದು ತಾರೀಖು ಹಾಕಿ, ಆ ಪುಸ್ತಕವನ್ನು ಮುಚ್ಚಿಟ್ಟನು.

ತರುವಾಯ ಬಾಗಿಲನ್ನು ತೆರೆದು ಚಂದ್ರರಾಯನು ಲಕ್ಷ್ಮೀಬಾಯಿಯನ್ನು ಕರೆಯಲು ಅವಳು ಭಯಭಕ್ತಿಗಳಿಂದ ಗಂಡನ ಸನ್ನಿಧಿಗೆ ಬಂದಳು. ಅವಳ ಕೈ ಹಿಡಿದು, ಕಿರುನಗೆಯಿಂದ "ಬಹುಕಾಲದ ಸಾಲವು ಈ ದಿನ ತೀರಿತು." ಎಂದು ಹೇಳಿದನು.

ಲಕ್ಷ್ಮೀಬಾಯಿಯು ನಡುಗಿ ಬಿದ್ದಳು.

---

# ಹದಿಮೂರನೆಯ ಪ್ರಕರಣ.

———

## (ಭವಾನೀಮಂದಿರ.)

ಚಂದ್ರರಾಯನು ವಾಸಮಾಡುತ್ತಿದ್ದ ಪ್ರದೇಶಕ್ಕೆ ಸುಮಾರು ಮೂರು ಮೈಲುಗಳ ದೂರದಲ್ಲಿ ಭವಾನೀಮಂದಿರವಿದ್ದಿತು. ಪರ್ವತಶಿಖರದಮೇಲೆ ಆ ದೇವಾಲಯವು ಪುರಾತನಕಾಲದಲ್ಲಿ ನಿರ್ಮಿಸಲ್ಪಟ್ಟುದು; ಮೇಲಕ್ಕೆ ಹತ್ತಿಹೋಗಲು ಶಿಲಾಸೋಪಾನಗಳಿರುವುವು. ಆ ಸೋಪಾನಗಳನ್ನು ತೊಳೆಯುತ್ತ ಒಂದು ಚಿಕ್ಕ ಹೊಳೆಯು ಹರಿಯುತ್ತಿದ್ದಿತು. ಬಹುಕಾಲದಿಂದಲೂ ಅಸಂಖ್ಯಾಕರಾದ ಯಾತ್ರಿಕರು ಈ ಪುಣ್ಯಜಲದಲ್ಲಿ ಸ್ನಾನಮಾಡಿ ಭವಾನೀದೇವಿಯನ್ನು ಪೂಜಿಸುತ್ತಿದ್ದರು. ಈವರೆಗೂ ದೇವಾಲಯದ ಗೌರವವಾಗಲಿ, ಯಾತ್ರಿಕರ ಸಂಖ್ಯೆಯಾಗಲಿ ತಗ್ಗಿರಲಿಲ್ಲ. ಗುಡಿಯ ಹಿಂಭಾಗದಲ್ಲಿ ಅನೇಕ ಮರಗಳು ಗುಂಪಾಗಿ ಬೆಳೆದಿದ್ದುವ. ಕೆಲವು, ತುದಿಯಿಂದ ಬುಡದವರೆಗೂ ಒಂದೇಸಮವಾಗಿದ್ದು ಎಲೆಗಳಿಂದ ತುಂಬಿದ್ದುವು. ಹಗಲು ಹೊತ್ತಿನಲ್ಲಿ ಕೂಡ, ಆ ಮರಗಳ ಬಳಿ ಸ್ವಲ್ಪ ಅಂಧಕಾರವು ಕವಿಯುತ್ತಿದ್ದಿತು. ಆ ಗಿಡಗಳ ಕೆಳಗೆ ಅರ್ಚಕರೂ, ಇತರ ಬ್ರಾಹ್ಮಣರೂ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದರು. ಆ ಪವಿತ್ರ ಪ್ರದೇಶದಲ್ಲಿದ್ದರ ಶಾಂತಿರಸವು ಭಿನ್ನವಾಗಿ, ಭಾವೋದ್ರೇಕವು ಉಂಟಾಗದು. ಭಾರತವರ್ಷದ ಪೂರ್ವಕಥೆಗಳೂ, ವೇದಘೋಷಗಳೂ, ಶಾಸ್ತ್ರಪ್ರಸಂಗಗಳೂ ಹೊರತು, ಮತ್ತೇನೂ ಆ ಸ್ಥಳದಲ್ಲಿ ಕೇಳಲ್ಪಡದು. ಅನೇಕ ಯುದ್ಧಗಳಿಂದ ಮಹಾರಾಷ್ಟ್ರವು ತಲೆಕೆಳಗಾಯಿತು; ಆದರೆ ಆ ದೇವಿಯ ಪ್ರಶಾಂತ ಮಂದಿರವು ಎಂದೂ ಯುದ್ಧದ ತೊಂದರೆಗೆ ಸಿಕ್ಕಲಿಲ್ಲ

ರಾತ್ರಿ ಒಂದು ಜಾವದ ಹೊತ್ತಿನಲ್ಲಿ ಆ ದೇವಾಲಯದ ಬಳಿ ಒಬ್ಬ ಪ್ರಯಾಣಿಕನು, ತಿರುಗಾಡುತ್ತಿದ್ದನು. ಅವನ ಮುಖಮಂಡಲವು ಕೆಂಪಗಾಗಿದ್ದಿತು. ಕಣ್ಣುಗಳು ಒಂದು ವಿಧವಾದ ಉನ್ಮಾದವನ್ನು ಸೂಚಿಸುತ್ತಿದ್ದುವು. ಹೃದಯವು ಕ್ರೋಧ, ವಿಷಾದ, ಜಿಗುಪ್ಸೆಗಳಿಂದ ದಹಿಸಿಕೊಂಡು ಕರಗುತ್ತಿರುವಂತೆ ತೋರುತ್ತಿದ್ದಿತು.

ಬಲಹೊತ್ತು ಅವನು ಅಲ್ಲಿಂದಿಲ್ಲಿಗೆ ತಿರುಗಾಡುತ್ತಿದ್ದನು. ಅವನ ಶರೀರವು ಬಲಹೀನವಾಗಿದ್ದಿತು. ಆದರೂ ಮನಸ್ಸಿನ ಸಂತಾಪವು ತಪ್ಪಲಿಲ್ಲ. ಅವನು ಉನ್ಮತ್ತಪ್ರಾಯನು ! ಬೇಗನೆ ಉಪಚಾರಮಾಡದೆ ಹೋದರೆ ಅವನ ವಿವೇಚನಾ ಶಕ್ತಿಯು ಕಡಿಮೆಯಾಗುವುದೋ ಅಥವಾ ಇಲ್ಲದೆ ಹೋಗುವುದೋ ತಿಳಿಯದು. ಪ್ರಕೃತಿಯೇ ಚಿಕಿತ್ಸಕಳು. ದೊಡ್ಡ ಪರ್ವತಗಳಂತೆ ಉಂಟಾಗುವ ಕಷ್ಟಗಳಿಂದ ಶರೀರವನ್ನು ಒಣಗಿಸುವಂತೆಮಾಡಿ ಅಗ್ನಿಯಂತೆ ದಹಿಸಿಕೊಂಡು ಹೋಗುವ, ಚಿಂತೆಗಳನ್ನೂ, ಔಷಧವಾಗಲಿ —ವೈದ್ಯನಾಗಲಿ ಇಲ್ಲದ ಮನೋವ್ಯಾಧಿಗಳನ್ನೂ ಹೋಗಲಾಡಿಸಿ ಸುಖವನ್ನು ಕೊಡುವವಳು ಪ್ರಕೃತಿಯೇ ಅಲ್ಲವೆ ?

ಆ ವೃಕ್ಷದ ಕೆಳಗೆ ಕೆಲವರು ಬ್ರಾಹ್ಮಣರು ಪುರಾಣವನ್ನು ಓದುತ್ತಿದ್ದರು. ಆ ಪುಣ್ಯಕಥೆಗಳು, ಸುಧಾವರ್ಷಗಳು ಬೀಳುತ್ತಿದ್ದಂತೆ ಇದ್ದುವು. ಅಲ್ಲಿದ್ದವರ ಹೃದಯವು ಶಾಂತಿರಸ ಮಗ್ನವಾಯಿತು.

ಎಷ್ಟು ಶತಮಾನಗಳಿಂದ ಈ ಪುಣ್ಯಚರಿತ್ರೆಗಳು ಭರತಖಂಡದಲ್ಲಿ ಪ್ರತಿಧ್ವನಿಗೈಯುತಿವೆ ? ರಮಣೀಯವಾದ ವಂಗದೇಶದಲ್ಲಿಯೂ, ಅತಿಶೀತಲವಾದ ಕಾಶ್ಮೀರ ದೇಶದಲ್ಲಿಯೂ ವೀರಭೂಮಿಯಾದ ರಾಜಾಸ್ಥಾನ ಮಹಾರಾಷ್ಟ್ರ ದೇಶಗಳಲ್ಲಿಯೂ, ಪರಿಶುದ್ಧವಾದ ಕರ್ಣಾಟಕ, ಆಂಧ್ರ, ದ್ರಾವಿಡ ದೇಶಗಳಲ್ಲಿಯೂ ಎಷ್ಟು ವರುಷಗಳಿಂದ ಆ ಗೀತಾಮೃತವಾಹಿನಿಯು ಹರಿಯುತ್ತಿದೆ ! ಪೂರ್ವದಲ್ಲಿ ಈ ಗೀತೆಗಳೇ ನಮ್ಮ ಆರ್ಯರನ್ನು ಉತ್ಸಾಹವಂತರನ್ನಾಗಿ ಮಾಡಿದುವು; ಹಸ್ತಿನಾವತಿ, ಅಯೋಧ್ಯೆ, ಮಿಥಿಲೆ, ಕಾಶಿ, ಮಗಧ, ಉಜ್ಜಯಿನಿ ಮೊದಲಾದ ಪ್ರದೇಶಗಳನ್ನು ವೀರತ್ವದಿಂದಲೂ, ಕೀರ್ತಿಯಿಂದಲೂ ಪ್ರಕಾಶಪಡಿಸಿತು. ದುರ್ದಿನಗಳಲ್ಲಿ ಈ ಗೀತಗಳನ್ನು ಹಾಡಿ, ಸಂಗ್ರಾಮಸಿಂಹನೂ, ಪ್ರತಾಪಸಿಂಹನೂ ಧರ್ಮರಕ್ಷಣಾರ್ಥವಾಗಿ ತಮ್ಮ ರಕ್ತವನ್ನು ಧಾರೆಯೆರೆದರು. ಈ ಮಹಾಯಂತ್ರಗಳಿಂದ ಉತ್ಸಾಹಶೀಲನಾಗಿ ಶಿವಾಜಿ ಛತ್ರಪತಿಯು ಪ್ರಾಚೀನ ಸಭ್ಯತೆಯನ್ನು ಪ್ರತಿಷ್ಠಿಸಲು ಯತ್ನಿಸಿದನು. ವಿಪದ್ದೆಶೆಗಳಲ್ಲಿದ್ದೂ ನಾವು ಈ ಪೂರ್ವ ಕಥೆಗಳನ್ನು ಮರೆಯುತ್ತಿಲ್ಲ. ಕ್ಷೀಣರೂ, ದುರ್ಬಲರೂ ಆದ ಹಿಂದುಗಳಿಗೆ ಈ ಪ್ರಾಚೀನ ಕಥೆಗಳೇ ದೃಷ್ಟಾಂತಗಳಾಗಿವೆ. ಜಾತಿಯ ವ್ಯವಸ್ಥೆಯು ಇರುವವರೆಗೂ ಮನಸ್ಸಿನಲ್ಲಿ ಈ ಗೀತಗಳನ್ನು ಹಾಡುತ್ತಿರುವರು.

ಪಾಠಕಮಹಾಶಯ! ನೀವು ಆಂಗ್ಲೇಯರ ಅನೇಕ ಗ್ರಂಥಗಳನ್ನೂ, ನಾವಲುಗಳನ್ನೂ ನಾಟಕಗಳನ್ನೂ ಓದಿರುವಿರಿ. ಆದರೆ ಹೃದಯವನ್ನು ಪರಿಶೋಧಿಸಿರಿ,—ಯಾವಕಥೆಗಳು ಹೃದಯಂಗಮಗಳಾಗಿರುವುವು? ಯಾವುದನ್ನು ಆಕರ್ಣಿಸುವುದರಿಂದ ಮನಸ್ಸು ಮುಗ್ಧವಾಗಿ ಹೋಗುವುದು? ಭೀಷ್ಮಾಚಾರ್ಯನ ಜಿತೇಂದ್ರಿಯತ್ವವೂ, ಸೀತಾದೇವಿಯ ಪಾತಿವ್ರತ್ಯವೂ ಹಿಂದುಗಳ ಅಂತರಂಗದಲ್ಲಿ ಸ್ಥಿರವಾಗಿದೆ. ಹಿಂದುಗಳ ಕಥೆಗಳನ್ನು ಎಂದಿಗೂ ಮರೆಯಲಾಗುವುದಿಲ್ಲ.

ಪ್ರಶಾಂತವನದಲ್ಲಿ ಪವಿತ್ರವಾದ ಪುರಾಣ ಕಥೆಗಳು ಪ್ರಯಾಣಿಕನ ಚಿಂತಾಕುಲ ಹೃದಯದಲ್ಲಿ ಶಾಂತಿರಸವನ್ನು ಪ್ರೋಕ್ಷಣೆ ಮಾಡಲಾರಂಭಿಸಿದುವು. ಆ ದೀನನ ಉನ್ಮತ್ತತೆಯು ಕ್ರಮವಾಗಿ ಕಡಮೆಯಾಯಿತು. ಪವಿತ್ರವಾದ ಕಥೆಗಳ ಮುಂದೆ ಮಹೋದ್ದೇಶಗಳೂ, ವೀರತ್ವವೂ ಕ್ಷುದ್ರಗಳಾಗಿ ತೋರಿದುವು. ರಘುನಾಥನು ಒಂದು ಮರದ ನೆರಳಿನಲ್ಲಿ ಮಲಗಿದನು. ಚಿಂತಾಪಹಾರಿಣಿಯಾದ ನಿದ್ರಾದೇವಿಯು ಅವನನ್ನು ತನ್ನ ಬಲೆಗೆ ಸಿಕ್ಕಿಸಿಕೊಂಡಳು.

ರಘುನಾಥನು ಕಳವಳಪಡಲಾರಂಭಿಸಿದನು. ಆ ದಿನದ ಸ್ವಪ್ನವು ಎಂತಹದು? ಸನ್ಮಾನವಿಷಯಕವಾದ ಸ್ವಪ್ನವೇ? ಇಲ್ಲ—ಆ ದಿನಗಳು ಕಳೆದುಹೋದುವು; ಆ ಭಾವನೆಗಳೂ ಕೊನೆಗಂಡವು. ಅವನು ಯುದ್ಧರಂಗದಲ್ಲಿದ್ದಂತೆ ಕಳವಳಿಸುತ್ತಿರುವನೆ? ಶತ್ರುಗಳ ಶಿರಗಳನ್ನು ಸೀಳಿ ಚೆಂಡಾಡುತ್ತಿರುವನೆ? ದುರ್ಗಗಳನ್ನು ಜಯಿಸುತ್ತಿರುವನೆ? ಯೋಧನ ಕರ್ತವ್ಯವನ್ನು ನೆರವೇರಿಸುತ್ತಿರುವನೆ —ಇಲ್ಲ—ಅವುಗಳೆಲ್ಲವೂ ಕಳೆದು ಹೋದುವು. ಆ ಪ್ರಯತ್ನಗಳೆಲ್ಲವೂ ಭಗ್ನಗಳಾಗಿವೆ!

ಯುವಕನ ಕೆಲಸಗಳು ಒಂದೊಂದಾಗಿ ನಡೆಯದಂತಾದುವು; ಆಶಾಪ್ರದೀಪವು ನಿರ್ವಾಣಹೊಂದಿತು. ಆ ಕತ್ತಲೆಯ ನಟ್ಟಿರುಳಿನ ವೇಳೆ, ಬಂಧುಜನ ಹೀನನಾದ ಆ ಯುವಕನ ಅಂತರಂಗದಲ್ಲಿ ಬಾಲ್ಯ ದಿನಗಳ ಚರಿತ್ರೆಯು ಪೂರ್ವಜನ್ಮದ ಸ್ಮೃತಿಯಂತೆ ಮಸಕು ಮಸಕಾಗಿ ಹೊಳೆಯುತ್ತಾ ಬಂದಿತು. ಶೋಕಸಾಗರದಲ್ಲಿ ಮನಸ್ಸು ಆಯಾಸಹೊಂದಿದಾಗಲೂ ಆಶೆಯು ಬಿಟ್ಟುಹೋಗುವಾಗಲೂ ಬಂಧುಹೀನನು ಸ್ಮರಿಸುವ ಸಂಗತಿಗಳನ್ನೇ ರಘುನಾಥನು ಸ್ವಪ್ನದಲ್ಲಿ ಕಾಣುತ್ತಿದ್ದನು. ಮೊದಲು ದಯಾಮಯಿಯಾದ ಜನನಿಯ ಮುಖಮಂಡಲವು ಅವನಿಗೆ ಕಾಣಿಸಿತು; ದೀರ್ಘಕಾಯನಾದ ಜನಕನ ವದನವು ದೃಷ್ಟಿಗೆ ಗೋಚರವಾಯಿತು. ಆಮೇಲೆ ಬಾಲ್ಯದಲ್ಲಿ

ಸೂರ್ಯಮಹಲ್ ದುರ್ಗದಲ್ಲಿ ತಾನು ಆಡಿದ ಆಟಗಳೂ, ಹಾಡಿದ ಹಾಡುಗಳೂ ಜ್ಞಾಪಕಕ್ಕೆ ಬಂದುವು ; ಕೂಡಲೇ ಸಹಚರಿಯಾದ ಸಹೋದರಿ—ಲಕ್ಷ್ಮೀಬಾಯಿಯು ಜ್ಞಾಪಕಕ್ಕೆ ಬಂದಳು. ಪುನಃ ಈ ಜನ್ಮದಲ್ಲಿ ಇನ್ನವಳನ್ನು ಕಾಣಲಾದೀತೆ ? ಇಂದು ಆ ಸುಖಮಯವಾದ ಸಂಸಾರವೆಲ್ಲಿ ಪ್ರಾಣಸಮಾನಳಾದ ತಂಗಿಯೆಲ್ಲಿ ? ನಿದ್ರಿಸುತ್ತಿರುವ ರಘುನಾಥನ ಕಣ್ಣಿಂದ ಒಂದೆರಡು ಹನಿ ಬಿಸಿನೀರು ಜಾರಿ ನೆಲದಮೇಲೆ ಬಿದ್ದಿತು.

ಅವನು ತಂಗಿಯ ವಿಷಯದಲ್ಲಿ ಯೋಚಿಸುತ್ತಾ ಕಣ್ಣುಗಳನ್ನು ತೆರೆದನು. ಅವನಿಗೆ ಕಾಣಿಸಿದುದೇನು ? ಲಕ್ಷ್ಮೀಬಾಯಿಯು ಅವನ ತಲೆಯನ್ನು ತೊಡೆಯಮೇಲೆ ಇರಿಸಿಕೊಂಡು ಕುಳಿತಿದ್ದಂತೆಯೂ ಮೃದುವಾದ ಕೈಯನ್ನು ಅವನ ಮುಖದಮೇಲೆ ಇಟ್ಟು ಆಡಿಸುತ್ತಿರುವಂತೆಯೂ, ಸ್ನೇಹರಸದಿಂದ ಆನಂದಬಾಷ್ಪವು ತುಂಬಿ ರೆಪ್ಪೆಯಾಡಿಸದೆ ತನ್ನ ಕಡೆ ನೋಡುತ್ತಿರುವಂತೆಯೂ ರಘುನಾಥನಿಗೆ ತೋರಿತು ; ಚಿಂತೆಯಿಂದ ಅವನ ಮುಖವು ಕಾಂತಿಹೀನವಾಗಿದ್ದಿತು ; ಕಣ್ಣುಗಳು ಅಗಲವಾಗಿಯೂ ತೇಜೋವಂತಗಳಾಗಿಯೂ ಇದ್ದರೂ ಪ್ರಕಾಶವು ಕಡಿಮೆಯಾಗಿದ್ದಿತು.

ರಘುನಾಥನು ಕಣ್ಣುಗಳನ್ನು ಮುಚ್ಚಿಕೊಂಡು ಕಣ್ಣೀರನ್ನು ಸುರಿಸಿ,—"ಭಗವಂತ ! ಅನೇಕ ದುಃಖಗಳನ್ನು ಸೈರಿಸಿದೆನು. ನೆರವೇರದೆ ಇರುವ ಆಶೆಯಿಂದ ನನ್ನ ಹೃದಯವನ್ನು ಏಕೆ ಬೇಧಿಸುವೆ ?.....ನನಗೆ ಹುಚ್ಚು ಹಿಡಿದಿರುವುದಲ್ಲವೆ" ಎಂದು ಕೂಗಿ ನಿಟ್ಟುಸಿರುಬಿಟ್ಟನು. ಮತ್ತೆ ಕೋಮಲಹಸ್ತವು ಅವನ ಕಣ್ಣೀರನ್ನು ಒರಸಿದಂತಾಯಿತು. ರಘುನಾಥನು ಪುನಃ ಕಣ್ಣುಗಳನ್ನು ತೆರೆದನು ಅದು ಸ್ವಪ್ನವಲ್ಲ. ನಿಜವಾಗಿಯೂ ಪ್ರಿಯಸಹೋದರಿಯು ಅವನ ತಲೆಯನ್ನು ತನ್ನ ತೊಡೆಯಮೇಲೆ ಇರಿಸಿಕೊಂಡು ಗಿಡದ ಬುಡದಲ್ಲಿ ಕುಳಿತಿದ್ದಳು.

ರಘುನಾಥನ ಮನಸ್ಸು ಕೂಡಲೇ ಚಲಿಸಿತು. ಅವನು ಲಕ್ಷ್ಮೀಬಾಯಿಯ ಕೈಗಳನ್ನು ತನ್ನ ಸಂತಪ್ತ ಹೃದಯದಮೇಲೆ ಇಟ್ಟುಕೊಂಡು ಅವಳ ಮುಖವನ್ನು ನೋಡಿದನು. ಅವನ ಬಾಯಿಂದ ಮಾತು ಹೊರಡದೆ ಹೋಯಿತು. ಕಣ್ಣೀರು ಪ್ರವಹಿಸಿತು. ಕೊನೆಗೆ ಅವನು ತಡೆಯಲಾರದೆ ಅಳುತ್ತಾ ಗಟ್ಟಿಯಾಗಿ ಹೀಗೆಂದನು. "ಲಕ್ಷ್ಮೀ ! ಲಕ್ಷ್ಮೀ ! ನಿನ್ನನ್ನು ಈ ಜನ್ಮದಲ್ಲಿ ಪುನಃ ನೋಡುವ ಭಾಗ್ಯವುಂಟಾಯಿತು. ದುರ್ಭಾಗ್ಯನಾದ ಅಣ್ಣನನ್ನು ನಿನ್ನ ಬಳಿಯಲ್ಲಿಯೇ ಇರುವಂತೆ ಮಾಡು ;

ಈ ಜೀವಿತ ಕಾಲದಲ್ಲಿ ಅವನು ಕೋರುವುದು ಮತ್ತೇನೂ ಇಲ್ಲ.'' ಲಕ್ಷ್ಮಿಯು ಶೋಕವನ್ನು ಅಡಗಿಸಿಕೊಳ್ಳಲಾರದೆ, ಅಣ್ಣನ ಭುಜಗಳಮೇಲೆ ತಲೆಯಿಟ್ಟು ಗಟ್ಟಿಯಾಗಿ ಅತ್ತಳು. ಬಹುದಿನಗಳ ಮೇಲೆ ಒಬ್ಬರನ್ನೊಬ್ಬರು ನೋಡಿದುದರಿಂದ ಅವರು ಬಹಳ ಹೊತ್ತು ಮಾತನಾಡಲಿಲ್ಲ. ಹಿಂದಿನ ವೃತ್ತಾಂತವು ಮನಸ್ಸಿನಲ್ಲಿ ಕುದಿಯಲಾರಂಭಿಸಿತು. ದುಃಖಪ್ರವಾಹವು ಸಂತೋಷಪ್ರವಾಹದೊಡನೆ ಸೇರಿತು. ನಡುನಡುವೆ ಬಾಷ್ಪಧಾರೆಗಳಿಂದ ಇಬ್ಬರ ದೇಹಗಳೂ ಮರೆತು ಹೋಗುತ್ತಿದ್ದುವು. ಭ್ರಾತೃಸ್ನೇಹದಂತಹ ಪವಿತ್ರ ಪ್ರೇಮವು ಮತ್ತೊಂದು ಇರುವುದೆ ?

ಹೇಗೆಯೋ ಸ್ವಲ್ಪಹೊತ್ತು ಕಳೆದ ಮೇಲೆ ಅವರ ಮನಸ್ಸು ಸ್ವಲ್ಪ ಶಾಂತವಾಯಿತು. ಲಕ್ಷ್ಮೀಬಾಯಿಯು ತನ್ನ ಸೀರೆಯ ಸೆರಗಿನಿಂದ ಅಣ್ಣನ ಕಣ್ಣೀರನ್ನು ಒರಸಿ ಹೀಗೆಂದಳು:—"ಭವಾನೀದೇವಿಯ ವರಪ್ರಸಾದದಿಂದಲೂ, ನನ್ನ ಪ್ರಯತ್ನದಿಂದಲೂ ನಿನ್ನನ್ನು ನೋಡುವಳಾದೆನು. ಈ ದೀನಳ ಲಲಾಟರೇಖೆಯಲ್ಲಿ ಸಂತೋಷವುಂಟೆ ? ಅಣ್ಣಾ ! ಈ ಚಳಿಗಾಳಿಯಲ್ಲಿದ್ದರೆ ನಿನ್ನ ದೇಹಕ್ಕೆ ಅಸ್ವಸ್ಥತೆಯುಂಟಾಗುವುದು. ಏಳು ? ಮಂದಿರಕ್ಕೆ ಹೋಗುವ ನಾನು ಇಲ್ಲಿ ಬಹಳಹೊತ್ತು ನಿಲ್ಲುವುದಕ್ಕೆ ಅವಕಾಶವಿಲ್ಲ.''

ರಘುನಾಥನು ಸಮ್ಮತಿಸಿದನು; ಇಬ್ಬರೂ ಆಲಯದೊಳಕ್ಕೆ ಹೋದರು. ಅಲ್ಲಿ ತಮ್ಮ ತಮ್ಮ ವೃತ್ತಾಂತಗಳನ್ನು ಹೇಳಿಕೊಂಡರು.

ಲಕ್ಷ್ಮೀಬಾಯಿಯು ಅವನನ್ನು ಏನೋ ಕೇಳುತ್ತಿರಲು ತಕ್ಕ ಸಮಾಧಾನವನ್ನು ಹೇಳುತ್ತಿದ್ದನು. ಕಳ್ಳರ ಕೈಯಿಂದ ತಪ್ಪಿಸಿಕೊಂಡು ಹೋದುದೂ ದಿಕ್ಕಿಲ್ಲದೆ ದೇಶದೇಶಗಳನ್ನು ತಿರುಗಿದುದೂ ಕೊನೆಗೆ ಒಂದು ಸ್ಥಳದಲ್ಲಿ ಸೇರಿದುದೂ ಇವೇ ಮೊದಲಾದ ವಿಷಯಗಳನ್ನು ಅವಳಿಗೆ ತಿಳಿಸಿದನು. ಒಂದೊಂದು ವೇಳೆ ತಾನು ಒಕ್ಕಲಿಗರ ಸಂಗಡ ಸೇರಿ ಶ್ರಮಪಟ್ಟ ಸಂಗತಿಯನ್ನೂ, ಇನ್ನೊಂದುಸಾರಿ ದನಗಳನ್ನೂ ಕುರಿಗಳನ್ನೂ ಕಾಯುತ್ತಾ ಅವುಗಳ ಸಂಗಡ ಕಾಡುಗಳಲ್ಲಿಯೂ ಪರ್ವತಗಳಲ್ಲಿಯೂ ಕೊಲಗಳಲ್ಲಿಯೂ ಸಂಚರಿಸಿದ ವಿಷಯವನ್ನೂ, ಆ ಕಾಲದಲ್ಲಿ ನಿರ್ಜನಪ್ರದೇಶಗಳಲ್ಲಿ ಗೀತಗಳನ್ನು ಹಾಡುತ್ತಿದ್ದುದೂ, ಅವುಗಳಿಂದ ಮನೋವ್ಯಾಕುಲವು ಪರಿಹಾರವಾಗುತ್ತಿದ್ದುದೂ, ಕೆಲವು ವೇಳೆ ಪೂರ್ವಿಕರ ಚರಿತ್ರೆಗಳನ್ನು ಸ್ಮರಿಸಿ ಗಟ್ಟಿಯಾಗಿ ಅಳುತ್ತಿದ್ದುದೂ ಕೊಂಕಣದೇಶದಲ್ಲಿ ಒಂದು ವರ್ಷ ವಾಸಮಾಡಿದ ಬಳಿಕ ಒಬ್ಬ ಸಾಹ

ರಾಷ್ಟ್ರ ಸೇನಾಪತಿಯ ಕೈಕೆಳಗೆ ಕೆಲಸಕ್ಕೆ ಸೇರಿದುದೂ, ಅಡಿಗಡಿಗೆ ಅವನ ಸಂಗಡ ಯುದ್ಧರಂಗಕ್ಕೆ ಹೋಗುತ್ತಿದ್ದುದೂ, ಆ ಕಾರಣದಿಂದ ಯುದ್ಧಾಸಕ್ತಿ ಹೆಚ್ಚಾದುದೂ ಕೊನೆಗೆ ಮಹಾನುಭಾವನಾದ ಶಿವಾಜಿಪ್ರಭುವಿನ ಸನ್ನಿಧಿಯನ್ನು ಸೇರಿ ಅವನ ಅಧೀನದಲ್ಲಿ ಒಬ್ಬ ಸೈನಿಕನಾಗಿದ್ದು ಮೂರು ವರುಷಗಳಕಾಲ ಯಾವ ಲೋಪವೂ ಇಲ್ಲದಂತೆ ಕೆಲಸಮಾಡುತ್ತಿದ್ದುದೂ, ಅನಂತರ ರಾಜನಿಗೆ ತನ್ನಮೇಲೆ ನಿಷ್ಕಾರಣವಾಗಿ ಸಂದೇಹವುಂಟಾದುದರಿಂದ ಅವಮಾನಿತನಾಗಿ ದಿಕ್ಕಿಲ್ಲದವನಂತೆ ಹೊರಟದುದೂ ಮೊದಲಾದ ಸಂಗತಿಗಳನ್ನು ರಘುನಾಥನು ತಂಗಿಯ ಸಂಗಡ ಹೇಳಿದನು. ಈಗ ಅವನಿಗೆ ಜೀವದಮೇಲೆ ಆಶೆಯಿಲ್ಲ. ಜನಕನಂತೆ ಯುದ್ಧದಲ್ಲಿ ಸತ್ತು ಅಸಾರವಾದ ಈ ಲೋಕವನ್ನು ಪರಿತ್ಯಜಿಸುವ ಆಶೆ ಬಹುವಾಗಿರುವುದು. ಅಣ್ಣನ ದುಃಖಕರವಾದ ಕಥೆಯನ್ನು ಕೇಳುತ್ತಾ, ಲಕ್ಷ್ಮೀಬಾಯಿಯು ಕಣ್ಣೀರಿಡುತ್ತ ತನ್ನ ಕಷ್ಟಗಳನ್ನ ಸ್ಮರಿಸಿಕೊಂಡಿದ್ದರೂ ಅಣ್ಣನ ದುರವಸ್ಥೆಯನ್ನು ಕೇಳಿ ಸಹಿಸದೆ, ಹೋದಳು. ರಘುನಾಥನ ಕಥೆಯು ಮುಗಿದಬಳಿಕ ಹೇಗೋ ದುಃಖವನ್ನು ಅಡಗಿಸಿಕೊಂಡು, "ನನ್ನ ವಿಷಯವೇನೆಂದು ಹೇಳಲಿ?" ಎಂದು ಭಾವಿಸಿ, ಕಣ್ಣೀರನ್ನು ಒರಸಿಕೊಂಡು ಲಕ್ಷ್ಮೀಬಾಯಿಯು ತನ್ನ ವೃತ್ತಾಂತವನ್ನು ಅವನಿಗೆ ಹೇಳಲಾರಂಭಿಸಿದಳು. ಆದರೆ ಚಂದ್ರರಾಯನ ಹೆಸರನ್ನು ಹೇಳಲಿಲ್ಲ. "ಮಹಾರಾಷ್ಟ್ರ ದೇಶಕ್ಕೆ ಬಂದಕೂಡಲೆ, ಒಬ್ಬ ಜಹಗೀರದಾರನನ್ನು ಮದುವೆಯಾದಳು. ಹಿಂದೂರಮಣಿಯರು ತಮ್ಮ ಗಂಡಂದಿರ ಹೆಸರನ್ನು ಹೇಳರು. ಗಂಡನ ಹೆಸರು ಗಗನಮಂಡಲದಲ್ಲಿ ಪ್ರಕಾಶಿಸುವ ಹಿಮಾಂಶುವಿನ ಹೆಸರೇ! ಶಶಲಾಂಛನನ ರೀತಿಯಲ್ಲಿ ಗಂಡನ ಕೀರ್ತಿಯು ನಾಲ್ಕು ದಿಕ್ಕುಗಳಲ್ಲಿಯೂ ವ್ಯಾಪಿಸುತ್ತಿದೆ. ಲಕ್ಷ್ಮೀಬಾಯಿಯು ಸಂತೋಷದಿಂದಲೇ ಕಾಲಕ್ಷೇಪ ಮಾಡುತ್ತಿರುವಳು. ಹೃದಯೇಶ್ವರನು ಲಕ್ಷ್ಮಿಯಮೇಲೆ ಅನುಗ್ರಹವನ್ನು ತೋರಿಸುತ್ತಿರುವನು. ಆ ಅನುಗ್ರಹವೇ ಅವಳ ಸುಖಕ್ಕೆ ಕಾರಣ. ಈ ಜನ್ಮದಲ್ಲಿ ಆಕೆಗೆ ಮತ್ತಾವ ಕೋರಿಕೆಯೂ ಇಲ್ಲ. ಆದರೆ ಅಣ್ಣನು ಸುಖದಿಂದ ಸಂಸಾರ ಮಾಡುತ್ತಿರುವುದನ್ನು ನೋಡಬೇಕೆಂಬ ಆಶೆ! ರಘುನಾಥನ ವಿಷಯವನ್ನು ಅಡಿಗಡಿಗೆ ಕೇಳಿ ತಿಳಿದುಕೊಳ್ಳುತ್ತಿದ್ದಳು. ಹೇಗಾದರೂ ಒಂದು ಸಾರಿ ನೋಡಿ ಬರಬೇಕೆಂದು ಪ್ರಯತ್ನಿಸಿದಳು. ಭವಾನೀದೇವಿಯ ಆಲಯಕ್ಕೆ ಪೂಜೆಗಾಗಿ ಬರಲು, ಮಂದಿರದ ಪಕ್ಕದಲ್ಲಿ ಒಂದು ಮರ; ಅದರ ಕೆಳಗೆ ಹಠಾತ್ತಾಗಿ ಪ್ರಾಣಸಮಾನನಾದ ಅಣ್ಣನನ್ನು ಕಂಡಳು."

ಈ ರೀತಿಯಾಗಿ ತನ್ನ ಸ್ಥಿತಿಗಳನ್ನು ಸಹೋದರನಿಗೆ ತಿಳಿಸಿದಳು. ಅವನ ದುಃಖವು ಬೆಟ್ಟದಂತಿದೆ. ಅದನ್ನು ಹೋಗಲಾಡಿಸಲು ಲಕ್ಷ್ಮೀಬಾಯಿಯು ಪ್ರಯತ್ನಿಸಿದಳು.

ನಾನಾವಿಧಗಳಲ್ಲಿ ಬೋಧಿಸಿ, ಅವನ ಹೃದಯದ ಸಂತಾಪವನ್ನು ಶಾಂತಿಪಡಿಸಿ ಹೀಗೆಂದಳು :—ಯಾವಾಗಲೂ ನಮ್ಮ ಜೀವಿತವು ಈ ಸ್ಥಿತಿಯಲ್ಲೇ ಇರದು. ಮನುಷ್ಯ ಜನ್ಮವು ದುಃಖಮಯವಾದುದು. ದುಃಖವು ಸಂಭವಿಸಿದಾಗ ಅದನ್ನು ನಾವು ಸೈರಿಸಬೇಕು. ಒಂದೊಂದುಸಾರಿ ಸುದಿನಗಳೂ ಉಂಟಾಗುವುವು. ನಾವು ಚಿಕ್ಕಂದಿನಲ್ಲಿ ಸುಖವನ್ನು ಅನುಭವಿಸಿದೆವು.—ನಾಳೆ ಪುನಃ ಸುಖವುಂಟಾಗಬಹುದು. ಅಣ್ಣಾ ! ನೀನು ಈ ನಿರಾಶೆಯನ್ನು ಬಿಟ್ಟುಬಿಡು. ಈ ಅವಸ್ಥೆಯಲ್ಲಿ ಶರೀರವು ಎಷ್ಟು ದಿನವಿರುವುದು ? ನಿದ್ರಾಹಾರಗಳನ್ನು ಬಿಟ್ಟರೆ ಮನುಷ್ಯ ದೇಹವು ಎಷ್ಟು ಕಾಲ ನಿಲ್ಲುವುದು.

ರಘು—ತಂಗಿ ! ಇಂಬೇಕಾದ ಅಗತ್ಯವೇನು ? ರಾಜದ್ರೋಹಿಯೆಂದು ಸೈನಿಕನಮೇಲೆ ಅಪನಿಂದೆ ಬಂದಾಗಲೇ ಅವನ ಪ್ರಾಣವೇಕೆ ಹೋಗಲಿಲ್ಲ ?

ಲಕ್ಷ್ಮೀ—ಯಾವಾಗಲೂ ನಿನ್ನ ತಂಗಿಯನ್ನು ದುಃಖಪಡಿಸಬೇಕೆಂಬುದೇ ನಿನ್ನ ಕೋರಿಕೆಯೆ ? ನೋಡು, ಅಣ್ಣಾ ! ನನಗೆ ಈ ಲೋಕದಲ್ಲಿ ಇನ್ನು ಯಾರಿರುವರು ? ತಂದೆ ಇಲ್ಲ. ತಾಯಿ ಇಲ್ಲ. ಲಕ್ಷ್ಮಿಯಮೇಲೆ ನೀನಿರಿಸಿದ್ದ ಮಮತೆಯನ್ನು ಮರೆತೆಯಾ ?

ರಘು—ಲಕ್ಷ್ಮೀ ! ನಿನಗೆ ನನ್ನ ಮೇಲೆ ವಿಶ್ವಾಸವಿರುವುದೆಂದು ನಾನು ಬಲ್ಲೆನು. ನಿನಗೆ ಮನೋವ್ಯಥೆಯನ್ನುಂಟು ಮಾಡಲು ಯತ್ನಿಸಿಲ್ಲ. ಈ ಜನ್ಮದಲ್ಲಿ ನನಗೆ ಇನ್ನು ಸುಖವಿಲ್ಲ. ನೀನು ಹೆಂಗಸು. ಸೈನಿಕನ ಮನೋವ್ಯಥೆಯು ನಿನಗೆ ಹೇಗೆ ತಿಳಿಯುವುದು ? ಪ್ರಾಣಕ್ಕಿಂತಲೂ ನಮಗೆ ಕೀರ್ತಿಯು ಶ್ರೇಷ್ಠವಾದುದು ; ಮೃತ್ಯುವಿಗಿಂತ ದುಷ್ಕೀರ್ತಿಯು ಸಾವಿರಪಾಲು ಹೆಚ್ಚು. ರಘುನಾಥನಿಗೆ ಕಳಂಕವು ಆವರಿಸಿದೆ!

ಲಕ್ಷ್ಮೀ—ಕಳಂಕವನ್ನು ಹೋಗಲಾಡಿಸಲು ಏಕೆ ಪ್ರಯತ್ನ ಮಾಡಬಾರದು? ಮಹಾನುಭಾವನಾದ ಶಿವಾಜಿಯ ಸನ್ನಿಧಿಗೆ ಹೋಗು. ಕೋಪವು ಶಾಂತವಾದಾಗ ಅವನು ನಿನ್ನ ಮಾತುಗಳನ್ನು ತಪ್ಪದೆಯೆ ಕೇಳುವನು; ನೀನು ನಿರ್ದೋಷಿಯೆಂದು ತಿಳಿದುಕೊಳ್ಳುವನು.

ರಘುನಾಥನು ಪ್ರತ್ಯುತ್ತರವನ್ನು ಕೊಡಲಿಲ್ಲ. ಆದರೆ ಅವನ ಮುಖವು ಕೆಂಪಾಯಿತು. ಕಣ್ಣುಗಳಿಂದ ಬೆಂಕಿಯ ಕಿಡಿಗಳು ಉದುರಿದಂತಾಯಿತು. ಜನಕನ ಅಭಿಮಾನವೂ, ಪೌರುಷವೂ ಪುತ್ರನಲ್ಲಿ ಇರುವುದೆಂದು ಗ್ರಹಿಸಿ, ಆ ಬುದ್ಧಿಮತಿಯು ಹೀಗೆಂದಳು:—“ಕ್ಷಮಿಸು, ನಾನು ಹೆಂಗಸು. ಎಲ್ಲಸಂಗತಿಗಳನ್ನೂ ಗ್ರಹಿಸಲಾರೆನು. ಮಹಾರಾಷ್ಟ್ರ ಪ್ರಭುವಿನ ಸನ್ನಿಧಿಗೆ ಸೇನೇ ಹೋಗಲು ಸಮ್ಮತಿಸದಿದ್ದರೆ, ಕೆಲಸದ ಮೂಲಕ ನಿನ್ನ ಅಪವಾದವನ್ನು ಏಕೆ ಹೋಗಲಾಡಿಸಿಕೊಳ್ಳಬಾರದು ? ಸೈನಿಕನ ಸಾಹಸ, ಪ್ರಭುಭಕ್ತಿ ಇವು ಕೆಲಸಗಳ ಮೂಲಕ ತಿಳಿಯಬಹುದೆಂದು ಮಾತಾಜಿಯವರು ಹೇಳುತ್ತಿದ್ದರು. ಖಡ್ಗಹಸ್ತನಾಗಿ ರಾಜದ್ರೋಹಿಯೆಂಬ ಕಳಂಕವನ್ನು ಹೋಗಲಾಡಿಸಿಕೊಳ್ಳಬಾರದೆ ?”

ಆಶೆಯಿಂದ ಕಣ್ಣುಗಳು ವಿಕಸಿಸಲು; ರಘುನಾಥನು “ಅದು ಹೇಗೆ ?” ಎಂದು ತಂಗಿಯನ್ನು ಕೇಳಿದನು.

ಲಕ್ಷ್ಮಿ—ಶಿವಾಜಿಪ್ರಭುಗಳು ಡಿಲ್ಲಿನಗರಕ್ಕೆ ಹೋಗುವರೆಂದು ಕೇಳಿದೆನು. ಅಲ್ಲಿ ಅನೇಕ ಕೆಲಸಗಳುಂಟಾಗಬಹುದು. ಸುಭಟನು ತನ್ನನ್ನು ತಿಳಿಯಪಡಿಸಿಕೊಳ್ಳುವುದಕ್ಕೆ ಅನೇಕ ಉಪಾಯಗಳಿರುವುವು.—ಅವೆಲ್ಲವನ್ನೂ ಸ್ತ್ರೀಯಾದ ನಾನು ನಿನಗೆ ತಿಳಿಯಪಡಿಸಲು ಸಾಧ್ಯವಿಲ್ಲ. ನೀನು ತಂದೆಯಂತೆ ವೀರನಾಗುವೆಯಾದರೆ ನಿನ್ನ ಉದ್ದೇಶವು ಸಫಲವಾಗದೆ ಇರದು.

ರಘುನಾಥನು ಸ್ವಸ್ಥಚಿತ್ತನಾಗಿದ್ದ ಪಕ್ಷದಲ್ಲಿ ಲಕ್ಷ್ಮೀಬಾಯಿಯು ಮನಶ್ಶಾಸ್ತ್ರದಲ್ಲಿ ತಿಳಿವಳಿಕೆ ಸಾಲದೆಂದು ಹೇಳಬಹುದಾಗಿದ್ದಿತು. ಆದರೆ ಅವಳು ಮಾಡಿದ ಉಪಚಾರವು ಗುಣಮಾಡಿಕೊಟ್ಟ ಔಷಧದ ಬಲದಂತೆ ಕೂಡಲೆ, ಸಂತಾಪವು ಹೋಗಿ ಸೈನಿಕನ ಮನಸ್ಸು ಹೆಚ್ಚು ಉತ್ಸಾಹದಿಂದ ಕೂಡಿತು.

ಸ್ವಲ್ಪಹೊತ್ತು ಚಿಂತಾಮಗ್ನನಾಗಿದ್ದನು ; ಹಟಾತ್ತಾಗಿ ಅವನ ಮುಖವೂ, ಕಣ್ಣುಗಳೂ ನೂತನಕಾಂತಿಯನ್ನು ಹೊಂದಿದುವು. ಆಗ ರಘುನಾಥನು ಹೀಗೆಂದನು:—ಲಕ್ಷ್ಮೀ ! ನೀನು ಹೆಂಗಸು ; ಆದರೂ ನಿನ್ನ ಮಾತುಗಳನ್ನು ಕೇಳುತ್ತ ಕೇಳುತ್ತ ನನ್ನ ಮನಸ್ಸಿನಲ್ಲಿ ನೂತನ ಭಾವನೆಯುಂಟಾಗಿದೆ. ಇನ್ನು ನನ್ನ ಹೃದಯದಲ್ಲಿ ಉತ್ಸಾಹವುಂಟಾಗುವುದು. ಭಗವಂತನ ಅನುಗ್ರಹದಿಂದ ರಘುನಾಥನು ರಾಜದ್ರೋ

ಹಿಯೂ ಅಂಜುಬುರುಕನೂ ಅಲ್ಲವೆಂಬುದನ್ನು ಲೋಕಕ್ಕೆ ತೋರ್ಪಡಿಸಬಹುದು. ನೀನು ಚಿಕ್ಕವಳು. ನಿನ್ನಲ್ಲಿ ಎಲ್ಲವನ್ನೂ ಹೇಳುವುದೇಕೆ ? ನೀನು ನನ್ನ ಮನೋಗತವನ್ನು ಬಲ್ಲೆಯಾ ?

ಲಕ್ಷ್ಮೀಬಾಯಿಯು ತನ್ನಲ್ಲಿ "ರೋಗವನ್ನು ನಿರ್ಣಯಿಸಿ. ಔಷಧವನ್ನು ಹಾಕಿದ್ದೇನೆ. ನನಗೆ ನಿನ್ನ ಮನೋಗತವು ತಿಳಿಯದೆ?" ಎಂದು ಭಾವಿಸಿ, ಪ್ರಕಾಶವಾಗಿ ಹೀಗೆಂದಳು. "ಅಣ್ಣಾ ! ನಿನ್ನ ಉತ್ಸಾಹವನ್ನು ನೋಡಿ ನನ್ನ ಪ್ರಾಣವು ಚೇತರಿಸಿಕೊಂಡಿತು. ನಿನ್ನ ಮನೋದ್ದೇಶವನ್ನು ನಾನು ಯಾವರೀತಿ ಗ್ರಹಿಸಲಿ ? ಆದರೆ ಹೇಗಾದರೂ ಆಗಲಿ, ನಿನ್ನ ತಂಗಿಯು ಬದುಕಿರುವಷ್ಟು ಕಾಲ ನೀನು ಸಫಲ ಮನೋರಥನಾಗಿರಬೇಕೆಂದು ಜಗದೀಶ್ವರನನ್ನು ಪ್ರಾರ್ಥಿಸುತ್ತಿರುವೆನು."

"ನಾನು ಬದುಕಿರುವಷ್ಟು ಕಾಲ, ನಿನ್ನ ವಿಶ್ವಾಸವನ್ನು ಮರೆಯಲಾರೆನು." ಎಂದು ರಘುನಾಥನು ಹೇಳಿದನು.

ಸ್ವಲ್ಪ ಹೊತ್ತಿನವರೆಗೂ ಲಕ್ಷ್ಮೀಬಾಯಿಯು ತಲೆಯನ್ನು ಬಗ್ಗಿಸಿಕೊಂಡು, "ನಾನು ಒಂದು ಸಂಗತಿಯನ್ನು ಹೇಳಬೇಕೆಂದಿರುವೆನು. ಆದರೆ ಭಯವಾಗುತ್ತಿದೆ." ಎಂದು ಮೆಲ್ಲನೆ ಹೇಳಿದಳು.

ರಘು—ಲಕ್ಷ್ಮೀ ! ನನ್ನೊಡನೆ ಹೇಳಲು ನಿನಗೆ ಭಯವೇಕೆ ? ನಾನು ನಿನ್ನ ಅಣ್ಣನಲ್ಲವೆ? ಸಹೋದರನ ಹತ್ತಿರ ಭಯವೆ ?

ಲಕ್ಷ್ಮಿ—ಚಂದ್ರರಾಯನೆಂಬ ಜಮಾದಾರನು ನಿನಗೆ ಅಪಕಾರ ಮಾಡಿದನೆಂದು ತಿಳಿಯುತ್ತೇನೆ?

ರಘುನಾಥನ ಉತ್ಸಾಹವು ಹಾರಿಹೋಯಿತು. ಮುಖವು ಕೆಂಪೇರಿತು. ಕೂಡಲೆ ಅವನು ಶಾಂತನಾಗಿ "ರಾಜಸನ್ನಿಧಿಯಲ್ಲಿ ಚಂದ್ರರಾಯನು ಹೇಳಿದ ಮಾತುಗಳು ಸುಳ್ಳಲ್ಲ. ಅವನು ಮತ್ತೆ ಯಾವುದಾದರೂ ಅಪಕಾರ ಮಾಡಿದನೋ ಇಲ್ಲವೋ ತಿಳಿಯದು." ಎಂದು ನುಡಿದನು.

ಲಕ್ಷ್ಮಿ—ಅವರು ಏನೂ ಮಾಡಲಿಲ್ಲವಷ್ಟೆ ? ಅಣ್ಣಾ ! ಅವರಿಗೆ ನೀನು ಕೆಡುಕನ್ನು ಉಂಟುಮಾಡಬೇಡ.

ನಿರುತ್ತರನಾಗಿ ರಘುನಾಥನು ಏನನ್ನೋ ಯೋಚಿಸುತ್ತಿರಲು, ಲಕ್ಷ್ಮೀಬಾಯಿಯು ಪುನಃ ಹೀಗೆಂದಳು.—"ಅಣ್ಣನಲ್ಲಿ ಇದುವರೆಗೆ ಯಾವುದನ್ನೂ ಕೇಳಿಲ್ಲ.

ಇದೇ ಮೊದಲನೆಯ ಕೋರಿಕೆ. ನನ್ನ ಮೇಲೆ ನಿನಗೆ ವಿಶ್ವಾಸವಿದ್ದರೆ ಅಣ್ಣಾ ! ನೀನು ಅವರಿಗೆ ಕೆಡಕು ಮಾಡಬೇಡ.''

ರಘುನಾಥನ ಹೃದಯವು ಕರಗಿಹೋಯಿತು. ತಂಗಿಯ ಎರಡು ಕೈಗಳನ್ನೂ ಹಿಡಿದುಕೊಂಡು, ಅವನು, "ಲಕ್ಷ್ಮೀ ! ಚಂದ್ರರಾಯನೇ ನನಗೆ ಈ ದುಃಸ್ಥಿತಿಯನ್ನು ಉಂಟುಮಾಡಿದನೆಂದು ಅನುಮಾನಿಸಿದೆನು ಆಗಲಿ,—ನಿನಗೆ ಕೊಡದೆ ಇರುವುದೇನಿದೆ ? ದೇವರ ಸನ್ನಿಧಿಯಲ್ಲಿ ಹೇಳುತ್ತಿರುವೆನು —ಚಂದ್ರರಾಯನಿಗೆ ಯಾವ ಅಪಾಯವನ್ನೂ ಉಂಟುಮಾಡೆನು. ನಾನು ಅವನ ತಪ್ಪುಗಳನ್ನು ಕ್ಷಮಿಸಿದೆನು. ಭಗವಂತನೂ ಕೂಡ ಕ್ಷಮಿಸಲಿ !'' ಎಂದು ಪ್ರತ್ಯುತ್ತರವಿತ್ತನು. "ಭಗವಂತನು ಅವರ ದೋಷಗಳನ್ನು ಕ್ಷಮಿಸಲಿ'' ಎಂದು ಲಕ್ಷ್ಮೀಬಾಯಿಯೂ ಮನಃಪೂರ್ವಕವಾಗಿ ಹೇಳಿದಳು.

ಪೂರ್ವದಿಕ್ಕಿನಲ್ಲಿ ಬೆಳಕಾಗುತ್ತ ಬಂದಿತು. ಆಗ ಲಕ್ಷ್ಮೀಬಾಯಿಯು 'ನನ್ನ ಸಂಗಡ ಕೆಲವು ಸೇವಕರನ್ನು ಕರೆದುಕೊಂಡು ಬಂದಿದ್ದೇನೆ. ಇನ್ನು ನಾನು ಹೊರಡಬೇಕು ಪರಮೇಶ್ವರನು ನಿನ್ನ ಮನೋರಥವನ್ನು ನೆರವೇರಿಸಲಿ.'' ಎಂದು ಹೇಳಿ, ಸಸ್ನೇಹವಾಗಿ ಅಣ್ಣನ ಅಪ್ಪಣೆಯನ್ನು ತೆಗೆದುಕೊಂಡು ಹೊರಹೊರಟಳು.

"ಪರಮೇಶ್ವರನು ನಿನಗೆ ಸುಖವನ್ನು ಉಂಟುಮಾಡಲಿ.'' ಎಂದು ಆಶೀರ್ವಾದ ಮಾಡಿ, ರಘುನಾಥನು ತಂಗಿಯನ್ನು ಕಳುಹಿಕೊಟ್ಟನು. ದೇವಾಲಯದಿಂದ ಇಬ್ಬರೂ ಹೊರಟರು.

## ಹದಿನಾಲ್ಕನೆಯ ಪ್ರಕರಣ.

### (ಗೋಸಾಯಿ-ಸೀತಾಪತಿ.)

ರುದ್ರಮಂಡಲದುರ್ಗವನ್ನು ಜಯಿಸಿದ ದಿನ, ರಘುನಾಥನು ಹೊತ್ತುಮೀರಿ ಹೋಗುವುದಕ್ಕೆ ಕಾರಣವನ್ನು ನಾವು ಇಲ್ಲಿ ತಿಳಿಸಬೇಕಾಗಿರುವುದು. ಆ ದಿವಸ

ಯುದ್ಧದಲ್ಲಿ ಯಾರು ಮೃತಪಟ್ಟರೋ, ಯಾರು ಜೀವಸಹಿತವಾಗಿ ಇರುವರೋ ಯಾರಿಗೆ ಗೊತ್ತು ? ಯುದ್ಧಕ್ಕೆ ಮೊದಲು ರಘುನಾಥನು ಸರಳೆಯನ್ನು ಕಂಡುಬರುವುದಕ್ಕಾಗಿ ಅವಳ ಹತ್ತಿರಕ್ಕೆ ಹೋಗಿದ್ದನು.

ಒಂದು ದಿನ, ಎರಡು ದಿನ ಕಳೆಯಿತು; ರಘುನಾಥನ ವರ್ತಮಾನವೇ ತಿಳಿಯಲಿಲ್ಲ. ದೇವಿಯು ಅವಳ ಕಿವಿಯಲ್ಲಿ ಹೀಗೆಂದು ಹೇಳಿದಳು:—"ರಘುನಾಥನು ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿ, ರಾಜಸನ್ಮಾನವನ್ನು ಪಡೆದಿರುವನು; ಬೇಗನೆ ಇಲ್ಲಿಗೆ ಬಂದು ಜನಾರ್ದನನ ಸಂಗಡ ಯುದ್ಧವಿಷಯಗಳನ್ನು ಹೇಳುವನು." ಆದರೆ, ರಘುನಾಥನು ಬರಲಿಲ್ಲ. ಯುದ್ಧವನ್ನು ವರ್ಣಿಸಲೇಯಿಲ್ಲ.

ರಘುನಾಥನು ರಾಜದ್ರೋಹಿಯೆಂದೂ, ಆ ಕಾರಣದಿಂದ ಅವಮಾನಿತನೂ, ಅಪವಾದಗ್ರಸ್ತನೂ ಆದನೆಂದೂ ಕಾಡುಗಿಚ್ಚಿನಂತಹ ವರ್ತಮಾನವು ಹಟಾತ್ತಾಗಿ ಮುಟ್ಟಿತು. ಆ ನಿಮಿಷದಲ್ಲಿಯೇ ಸರಳಬಾಲೆಯು ಮೂರ್ಛೆ ಹೊಂದಿದಳು. ಆ ಮಾತಿನ ಅರ್ಥವು ಅವಳಿಗೆ ತಿಳಿಯಲಿಲ್ಲ. ಕ್ರಮವಾಗಿ ಅವಳ ಮುಖವು ಕೆಂಪಾಯಿತು. ಕಣ್ಣುಗಳಿಂದ ಕೆಂಡಗಳು ಉದುರುವಂತಾದವು. ಶರೀರವು ನಡುಗಿತು. ಆಗ ಅವಳು ದಾಸಿಯನ್ನು ನೋಡಿ, "ಏನು ? ಆತನು ದ್ರೋಹಿಯಾದನೆ ? ಮುಸಲ್ಮಾನರ ಸಂಗಡ ಸೇರಿದನೆ ? ಸರಿ ! ನೀನು ಶುದ್ಧ ಮೂರ್ಖಳು ! ಇಲ್ಲಿಂದ ಹೊರಟು ಹೋಗು." ಎಂದು ಗದರಿಸಿಕೊಂಡಳು.

ಕ್ರಮವಾಗಿ ಸೈನಿಕರು ತಮ್ಮ ವಾಸಸ್ಥಳಕ್ಕೆ ಬರುವವರಾದರು. ಯಾರಬಾಯಿಂದ ಕೇಳಿದರೂ ರಘುನಾಥನು ರಾಜದ್ರೋಹಿಯೆಂಬುದೇ ! ಜನಾರ್ಧನನ ಕಣ್ಣುಗಳಿಂದ ನೀರುಸುರಿಯುತ್ತಿರಲು, "ನಿರ್ಮಲವಾದ ಅವನ ಮನಸ್ಸಿನಲ್ಲಿ ಆ ದುರಾಲೋಚನೆಯು ಇರುವುದೆಂದು ಯಾರಿಗೆ ಗೊತ್ತು ?" ಎಂದನು. ಸರಳಬಾಲೆಯು ಆ ಮಾತಿಗೆ ಪ್ರತ್ಯುತ್ತರ ಕೊಡಲಿಲ್ಲ. ಜನರು, 'ರಘುನಾಥನು ರಾಜದ್ರೋಹಿಯೆಂದು ಹೇಳುತ್ತಿದ್ದರೂ, ನಂಬಲಿಲ್ಲ. ಅವನು ನಿರ್ದೋಷಿಯೆಂದೇ ನಂಬಿದಳು.

ಈ ರೀತಿಯಾಗಿ ಕೆಲವು ದಿನಗಳು ಕಳೆದುವು. ತರುವಾಯ ಒಂದು ದಿನ ಸಾಯಂಕಾಲ, ಸರಳಬಾಲೆಯು ಸರೋವರಕ್ಕೆ ಹೋದಳು. ಆ ಸರಸ್ಸಿನ ತೀರದಲ್ಲಿ ಜಟಾಧಾರಿಯೂ, ದೀರ್ಘಕಾಯನೂ ಆದ ಒಬ್ಬ ಗೋಸಾಯಿಯು ಕುಳಿತಿ

ದ್ದನು. ಮೊದಲು ವಿಸ್ಮಯಹೊಂದಿದರೂ, ಆತನ ಆಕಾರವನ್ನು ನೋಡಿದಕೂಡಲೇ ಅವಳ ಮನಸ್ಸಿನಲ್ಲಿ ಭಕ್ತಿಹುಟ್ಟಿತು.

ಗೋಸಾಯಿಯು ಸರಳೆಯನ್ನು ನೋಡಿ ಗಂಭೀರಸ್ವರದಿಂದ "ಭದ್ರೆ! ಈ ಗೋಸಾಯಿಯ ಹತ್ತಿರ ನಿನಗೇನಾದರೂ ಕೆಲಸವಿರುವುದೆ? ಯಾವುದಾದರೂ ಮನೋರಥದಿಂದ ನನ್ನ ಹತ್ತಿರಕ್ಕೆ ಬಂದೆಯಾ? ನಿನ್ನ ಮುಖವನ್ನು ನೋಡಿದರೆ ದುಃಖಿತೆಯಾಗಿರುವಂತೆ ಕಾಣುತ್ತದೆ ಕಾರಣವೇನು? ಕಣ್ಣುಗಳಲ್ಲಿ ನೀರು ಸುರಿಯುತ್ತಿರುವುದಲ್ಲವೆ?" ಎಂದು ಕೇಳಿದನು.

ಸರಳೆಯು ಪ್ರತ್ಯುತ್ತರಕೊಡಲಾರದೆ ಹೋದಳು. ಪುನಃ ಗೋಸಾಯಿಯು ಹೀಗೆಂದನು. "ನಿನ್ನ ಅಭಿಪ್ರಾಯವು ನನಗೆ ಗೊತ್ತಿದೆ ಒಬ್ಬನ ವಿಷಯವಾಗಿ ನೀನು ತಿಳಿದುಕೊಳ್ಳಲು ಯೋಚಿಸುತ್ತಿರುವೆ?"

ಸರಳೆ—ಗೋಸಾಯೀ! ತಮ್ಮ ಶಕ್ತಿಯು ಅಸಾಧಾರಣವಾದುದು. ಅನುಗ್ರಹಿಸಿ ಅಪ್ಪಣೆಕೊಡಿಸಬೇಕು. ಆತನು ಆಪತ್ತಿನಲ್ಲಿದ್ದಾನೆ.

ಗೋ—ಲೋಕದಲ್ಲಿ ಎಲ್ಲರೂ ಅವನನ್ನು ರಾಜದ್ರೋಹಿಯೆಂದು ನಂಬುತ್ತಿರುವರು.

ಸರಳೆ—ಸ್ವಾಮಿಗೆ ತಿಳಿಯದುದು ಯಾವುದೂ ಇಲ್ಲ

ಗೋ—ಅವನು ರಾಜದ್ರೋಹಿಯೆಂದು ಭಾವಿಸಿ, ಶಿವಾಜಿ ಮಹಾರಾಜನು ಅವನನ್ನು ತನ್ನ ಸೈನ್ಯದಿಂದ ಹೊರಡಿಸಿರುವನು.

ಅವಳ ಮುಖವು ಕಾಷಾಯಕಾಂತಿಯನ್ನು ವಹಿಸಿತು. ಕಣ್ಣುಗಳು ಕೆಂಪಾದವು. "ಮತ್ತೇನನ್ನಾದರೂ ನಂಬುವೆನು. ಆದರೆ, 'ಅವನು ರಾಜದ್ರೋಹಿಯೆಂಬ' ಮಾತನ್ನು ನಂಬಲಾರೆನು." ಎಂದು ಹೇಳಿದಳು.

"ನಾನು ಇನ್ನೂ ಸ್ವಲ್ಪ ಹೇಳಬೇಕಾಗಿದೆ!" ಎಂದು ಗೋಸಾಯಿಯು ಮೆಲ್ಲನೆ ಹೇಳಿದನು.

ಸರಳೆ—ಅಪ್ಪಣೆಕೊಡಿಸಿರಿ.

ಗೋ—ಮಾನವನ ಮನಸ್ಸನ್ನು ಗ್ರಹಿಸುವುದು ಕಷ್ಟ. ರಘುನಾಥನ ಮನಸ್ಸಿನಲ್ಲಿ ಏನಿರುವುದೋ ತಿಳಿದುಕೊಳ್ಳಲು ಒಂದೇ ಉಪಾಯವಿರುವುದು. ಅವನ ಪ್ರೇಯಸಿಯ ಹತ್ತಿರ ಹೋಗು. ಪ್ರಣಯಿಯ ಹೃದಯವು ಪ್ರಿಯಳ ಹೃದಯಕ್ಕೆ

ಕನ್ನಡಿಯಂತಿರುವುದು. ಅವಳ ಮನೋಗತವನ್ನು ಕೇಳು. ಅಭಿಪ್ರಾಯವು ಸುಳ್ಳಾಗಲಾರದು.

ಸರಳೆಯು ನಭೋಮಂಡಲದಕಡೆ ತನ್ನ ದೃಷ್ಟಿಯನ್ನು ನಿಲ್ಲಿಸಿ "ಜಗದೀಶ್ವರಾ! ನಿನ್ನನ್ನು ಸ್ತೋತ್ರಮಾಡುವೆನು. ಇದುವರೆಗೆ ನೀನು ಮನಸ್ಸಿನಲ್ಲಿ ಶಾಂತಿಯನ್ನು ನೆಲೆಗೊಳಿಸಿರುವೆ. ಆ ಯೋಧನೇ ಪತಿಯಾಗಬೇಕೆಂದು ಯಾವಳು ಆಶೆಯನ್ನಿಟ್ಟಿರುವಳೋ ಅವಳು ಬದುಕಿರುವವರೆಗೂ ಆತನಲ್ಲಿ ವಿಶ್ವಾಸವನ್ನು ತಪ್ಪಿಸಬೇಡ" ಎಂದು ಹೇಳಿದಳು.

ಸ್ವಲ್ಪಹೊತ್ತು ಸುಮ್ಮನಿದ್ದು ಗೋಸ್ವಾಮಿಯು ಹೀಗೆಂದನು "ಭದ್ರೆ! ನಿನ್ನ ಮಾತುಗಳಿಂದ ನೀನೇ ಆತನ ಪ್ರಿಯಳೆಂದು ತಿಳಿಯುತ್ತೇನೆ. ನಾನು ದೇಶದೇಶಗಳನ್ನು ಸಂಚಾರ ಮಾಡುವವನು. ಒಂದುವೇಳೆ ರಘುನಾಥನನ್ನು ಮತ್ತೆ ನೋಡಿದರೂ ನೋಡಬಹುದು. ಆದುದರಿಂದ ಅವನಿಗೇನಾದರೂ ಹೇಳುವೆಯಾ? ನನ್ನಬಳಿ ನಾಚಿಕೆಪಡಬೇಕಾದುದಿಲ್ಲ. ನಾನು ಸನ್ಯಾಸಿಯಲ್ಲವೆ?

ಸರಳೆ—(ಸ್ವಲ್ಪ ಲಜ್ಜೆಯಿಂದ) ಮಹಾತ್ಮರೇ! ಆತನನ್ನು ಎಂದು, ಎಲ್ಲಿ, ಕಂಡಿದ್ದಿರಿ?

ಗೋ—ನಿನ್ನಿನ ರಾತ್ರಿ ಭವಾನೀಮಂದಿರದಲ್ಲಿ ಕಂಡೆನು ನನ್ನನ್ನು ನಿನ್ನ ಬಳಿಗೆ ಕಳುಹಿದವನು ಅವನೇ.

ಸರಳೆ—ಈಗ ಅವರು ಮಾಡಬೇಕೆಂದಿರುವ ಕೆಲಸಗಳನ್ನು ತಮಗೆ ತಿಳಿಸಿದ್ದಾರೆಯೆ?

ಗೋ—ಅನ್ಯಾಯವಾಗಿ ಬಂದ ಅಪಯಶಸ್ಸನ್ನು ಹೋಗಲಾಡಿಸಿಕೊಳ್ಳುವನು; ಅಥವಾ ಆ ಪ್ರಯತ್ನಗಳಲ್ಲಿ ಪ್ರಾಣವನ್ನಾದರೂ ಹೋಗಲಾಡಿಸಿಕೊಳ್ಳುವನು.

ಸರಳೆ—ಅದು ವೀರನ ಪ್ರತಿಜ್ಞೆ! ಅವರು ನಿಮಗೆ ಸಿಕ್ಕಿದರೆ ಹೀಗೆಂದು ಹೇಳಿರಿ. 'ಸರಳಬಾಲೆಯು ರಾಜಪುತ್ರಾಂಗನೆ. ಪ್ರಾಣಕ್ಕಿಂತ ಕೀರ್ತಿಯನ್ನೇ ಮೇಲೆಂದು ಯೋಚಿಸುವಳು. ಭಗವಂತನು ಅವರ ಪ್ರಯತ್ನಗಳನ್ನು ಸಫಲಗೊಳಿಸಲಿ!'

ಗೋ—ತಪ್ಪದೆ ಫಲಿಸುವುದು. ಅವನಿಗೂ ಜಯವುಂಟಾಗುವುದು. ಆದರೆ, ರಘುನಾಥನು ಕೈ ಹಾಕಿದ ಕೆಲಸವು ವಿಪತ್ತಿನಿಂದ ಕೂಡಿರುವುದು. ಒಂದುವೇಳೆ ಪ್ರಾಣಹೋದರೂ ಹೋಗಬಹುದು?

ಸರಳೆ—ರಾಜಪುತ್ರರಿಗೆ ಇದು ಹೊಸದಲ್ಲ. ಪ್ರಯತ್ನದಲ್ಲಿ ಅವರಿಗೆ ಮರಣ ಸಂಭವಿಸಿದರೆ ಅವರ ಯಶೋಗೀತಗಳನ್ನು ಹಾಡುತ್ತಾ, ಉಲ್ಲಾಸದಿಂದ ಸರಳೆಯು ಪ್ರಾಣಬಿಡುವಳೆಂದು ಹೇಳಿರಿ.

ಇಬ್ಬರೂ ಸ್ವಲ್ಪಹೊತ್ತು ಸುಮ್ಮನಿದ್ದರು. ತರುವಾಯ ಸರಳೆಯು ಹೀಗೆಂದಳು, "ಅವರು ತಮ್ಮ ಸಂಗಡ ಇನ್ನೇನಾದರೂ ಹೇಳಿದರೆ ?"

ಸ್ವಲ್ಪ ಯೋಚಿಸಿ ಗೋಸಾಯಿಯು ಹೀಗೆಂದನು: "ಜನರು ದ್ರೋಹಿಯೆನ್ನುವವನಿಗೆ ಮನಸ್ಸು ಹೇಗಿರಬೇಕು ? ನಿರ್ಭಾಗ್ಯನಾದ ರಘುನಾಥನನ್ನು ಸರಳಬಾಲೆಯು ಜ್ಞಾಪಕದಲ್ಲಿ ಇಟ್ಟುಕೊಳ್ಳುವಳೆ ?" ಎಂದು ಅವನು ನಿನ್ನನ್ನು ಕೇಳಿರುವನು.

ಸರಳೆ—ಮಹಾತ್ಮಾ ! ಸರಳೆಯು ರಾಜಪುತ್ರಯುವತಿ ; ವಿಶ್ವಾಸಘಾತಕಳಲ್ಲವೆಂದು ತಿಳಿಸಿರಿ.

ಗೋ—ಮಹಾದೇವಾ ! ಇನ್ನು ಅವನಿಗೆ ಮನೋವ್ಯಥೆಯಿಲ್ಲ. ಜನರೆಲ್ಲರೂ ಕೆಟ್ಟವರಾಗಲಿ !—ಒಬ್ಬ ಯುವತಿಯು ಮಾತ್ರ ತನ್ನನ್ನು ಪ್ರೀತಿಸುತ್ತಿರುವಳೆಂದು ತಿಳಿದುಕೊಳ್ಳುವನು ! ಇನ್ನು ನಾನು ಹೊರಡುವೆನು. ನಾನು ಈ ಮಾತುಗಳನ್ನು ಹೇಳಿದರೆ ಅವನ ಹೃತ್ತಾಪವು ಶಾಂತಿಯಾಗುವುದು.

"ಭಗವಂತನು ಅವನಿಗೆ ಮಂಗಳವನ್ನು ಉಂಟುಮಾಡಲಿ" ಎಂದು ಸರಳೆಯು ಬಾಷ್ಪಪೂರಿತಲೋಚನೆಯಾಗಿ ಮತ್ತೆ ಹೇಳಿದಳು. "ಮಹನೀಯರೇ ! ನನ್ನ ಮನಸ್ಸನ್ನು ಶಾಂತಿಪಡಿಸಿರುವಿರಿ. ತಮ್ಮ ಹೆಸರನ್ನು ಕೇಳಬಹುದೆ ?" ಎಂದಳು. ನನ್ನ ಹೆಸರು 'ಸೀತಾಪತಿ' ಎಂದು ಗೋಸಾಯಿ ಹೇಳಿದನು.

ಕತ್ತಲೆಯು ವ್ಯಾಪಿಸುತ್ತ ಬಂದಿತು. ಆ ಅಂಧಕಾರದಲ್ಲಿ ಗೋಸಾಯಿಯು ಒಂಟಿಯಾಗಿ ರಾಜಗಡ ದುರ್ಗಕ್ಕೆ ಅಭಿಮುಖನಾಗಿ ಹೊರಟನು..................

ಮೇಲಿನ ಸಂಗತಿಯು ನಡೆದ ಕೆಲವು ದಿವಗಳ ಮೇಲೆ ಆಗಿನ ರಾಜಧಾನಿಯಾದ ರಾಜಗಡ ದುರ್ಗದಲ್ಲಿ ರಾತ್ರಿ ಎರಡು ಜಾವದ ಹೊತ್ತಿಗೆ ಸಭೆ ಸೇರಿದ್ದಿತು. ಪ್ರಧಾನ ಸೇನಾಪತಿಗಳೂ ಮಂತ್ರಿಗಳೂ ಉದ್ಯೋಗಸ್ಥರೂ, ಶಾಸ್ತ್ರಕೋವಿದರೂ ಬ್ರಾಹ್ಮಣರೂ ಆ ಸಭೆಯಲ್ಲಿ ಅಲಂಕೃತರಾಗಿದ್ದರು. ಪರಾಕ್ರಮಶಾಲಿಯೂ, ಧೈರ್ಯಸಂಪನ್ನನೂ, ರಾಜನೀತಿವಿಶಾರದನೂ ವೃದ್ಧನೂ ಆದ ನ್ಯಾಯಶಾಸ್ತ್ರಿಯು, ಸಭೆಯಲ್ಲಿದ್ದನು. ಎಲ್ಲಾ ವಿಷಯಗಳಲ್ಲಿಯೂ ಶಿವಾಜಿಗೆ ಆತನೇ ಸಹಾಯಕನಾಗಿದ್ದನು. ಶಿವಾಜಿಯಂತೆ

ಆತನೂ ಸ್ವದೇಶಾಭಿಮಾನಿ. ಸಭಾಭವನವು ನಿಶ್ಶಬ್ದವಾಗಿದ್ದಿತು. ಮಹಾರಾಷ್ಟ್ರರು ತಮ್ಮ ಗೌರವಲಕ್ಷ್ಮಿಯನ್ನು ಬೀಳ್ಕೊಳ್ಳುವುದಕ್ಕಾಗಿ ಸೇರಿದ್ದರು ಸ್ವಲ್ಪ ಹೊತ್ತಿಗೆ ಶಿವಾಜಿಯು ಮುರೇಶ್ವರನನ್ನು ಕರೆದು, "ಪೇಷ್ವಾಜೀ ! ನಾನು ಅವನಿಗೆ ಒಳಗಾಗಿ ಜಹಗೀರದಾರನಾಗಿರಬೇಕಾದುದೇ ನಿಮ್ಮ ಉಪದೇಶವು." ಎಂದು ಕೇಳಿದನು.

ಮುರೇ—ಮಾನವಸಾಧ್ಯವಾದುದೆಂದು ತಾವು ಕೈಕೊಂಡಿರುವಿರಿ ವಿಧಿನಿರ್ಬಂಧವನ್ನು ಉಲ್ಲಂಘಿಸಲು ಯಾರಿಗೆ ಶಕ್ಯ ?

ಶಿವಾಜಿ—ಸ್ವರ್ಣದೇವಾ ! ನನ್ನ ಆಜ್ಞಾನುಸಾರ ನೀವು ಈ ದುರ್ಗವನ್ನು ನಿರ್ಮಿಸುವಾಗ ಇದು ಜಸ್ವಂತನೃಪಾಲನ ರಾಜಧಾನಿಯೆಂನೊ ? ಅಥವಾ ಜಹಗೀರುದಾರನ ರಾಜಧಾನಿಯೆಂವೊ ? ಆಗ ನಿಮ್ಮ ಅಭಿಪ್ರಾಯವು ಹೇಗಿದ್ದಿತು ?

ಸ್ವರ್ಣ—ದೇವಾ! ಭವಾನೀದೇವಿಯ ಅಪ್ಪಣೆಯಂತೆ ಅನೇಕ ಕಾರ್ಯಗಳನ್ನು ಮಾಡಿರುವಿರಿ; ಅವಳ ಆಜ್ಞೆಯಪ್ರಕಾರ ಮುಷ್ಕರವನ್ನು ಬಿಟ್ಟುಬಿಟ್ಟಿರಿ.—ಅದರಲ್ಲಿ ಯಾರ ಆಕ್ಷೇಪಣೆಯೇನೂ ಇಲ್ಲ ಹಿಂದೂ ಸೇನಾಪತಿಯೊಡನೆ ಯುದ್ಧಮಾಡಲು ಭಗವತಿಯು ನಿಷೇಧಿಸಿರುವಳೆ ?

"ಯಾವುದೋ ಕಷ್ಟವು ಸಂಪ್ರಾಪ್ತವಾಯಿತು ಈಗ ಸ್ವಾಮಿಯವರು ಡಿಲ್ಲಿಗೆ ಹೋಗುವುದು ಸರಿಯೆ ? ನಿರೂಪಿಸಿರಿ." ಎಂದು ಅನ್ನಾಜೀ ದತ್ತನು ಹೇಳಿದನು.

ಶಿವಾಜಿ—ಅನ್ನಾಜೀ ! ನೀವು ಹೇಳಿದ ಮಾತುಗಳು ಚೆನ್ನಾಗಿವೆ. ಆದರೆ, ಯಾವ ಆಶೆಯು ಬಹುದಿನಗಳಿಂದ ಹೃದಯದಲ್ಲಿ ನೆಟ್ಟುಕೊಂಡಿರುವುದೋ ಅದನ್ನು ಬೇಗನೆ ಬಿಟ್ಟು ಬಿಡಲಾರೆ. ಮಹಾರಾಷ್ಟ್ರದೇಶವು ಬೇಗನೆ ವೃದ್ಧಿಯಾಗುವುದೆಂದೂ ಪುನಃ ಹಿಂದೂ ರಾಜನು ಆಸೇತು ಹಿಮಾಚಲಪರ್ಯಂತ ಭರತಖಂಡವನ್ನು ಆಳುವನೆಂದೂ ಭವಾನೀದೇವಿಯು ಹೇಳುತ್ತಿದ್ದಳು. ನನ್ನ ಆಶೆಯು ಕೇವಲ ಸ್ವಪ್ನವಾಗಿರುವುದು. ಭಗವಂತನು ನನ್ನ ಹೃದಯವನ್ನು ನಿಷ್ಕಾರಣವಾಗಿ ಏಕೆ ಬದಲಾಯಿಸಿದನು ?

ಈ ಮಾತುಗಳನ್ನು ಕೇಳಿ ಸಭೆಯವರೆಲ್ಲರೂ ನಿಶ್ಶಬ್ದರಾದರು. ಆ ಸಭೆಯಲ್ಲಿ ಕತ್ತಲೆಯ ಮೂಲೆಯಿಂದ "ಭವಾನೀದೇವಿಯು ಹೇಳುತ್ತಿರುವಳು. ಮನುಷ್ಯರಿಗೆ ವೀರತ್ವವೂ, ಪ್ರಯತ್ನವೂ ಇದ್ದರೆ ಭಗವತಿಯು ಅವರಿಗೆ ಸಹಾಯಮಾಡುವಳು"

ಎಂಬುದೊಂದು ಗಂಭೀರವಾದ ಮಾತು ಕೇಳಲ್ಪಟ್ಟಿತು. ಶಿವಾಜಿಯು ಭಯಪಟ್ಟು ಹಿಂತಿರುಗಿ ನೋಡಲು, ಗೋಸಾಯಿ ಸೀತಾಪತಿಯು ಪ್ರತ್ಯಕ್ಷನಾದನು.

ಉತ್ಸಾಹದಿಂದ ಕಣ್ಣುಗಳು ಪ್ರಜ್ವಲಿಸಲು ಶಿವಾಜಿಯು ಹೀಗೆಂದನು. 'ಮಹಾತ್ಮಾ! ನನ್ನ ಬಾಲ್ಯದ ಉತ್ಸಾಹವನ್ನು ಹುರಿದುಂಬಿಸಿರಿ. ಬಾಲ್ಯದ ವೃತ್ತಾಂತವನ್ನು ಜ್ಞಾಪಕಕ್ಕೆ ತಂದಿರಿ. ದಾದಾಜಿ ಕೊಣದೇವನು ಅವಸಾನಕಾಲದಲ್ಲಿ ನನಗೆ- "ಮಗು, ನೀನು ಮಾಡುವ ಕೆಲಸಕ್ಕೂ ಮಹತ್ತರವಾದುದು ಮತ್ತೆ ಬೇರೆಯಿಲ್ಲ. ಈ ಮಾರ್ಗವನ್ನು ಬಿಡಕೂಡದು. ರಾಜ್ಯವನ್ನು ವಿಸ್ತರಿಸು. ಗೋಬ್ರಾಹ್ಮಣರನ್ನೂ ರೈತರನ್ನೂ ಸಂರಕ್ಷಿಸು ದೇವಾಲಯಗಳನ್ನು ಹಾಳುಮಾಡುವ ಜನರನ್ನು ಶಿಕ್ಷಿಸು. ಭವಾನೀದೇವಿಯು ನಿನಗೆ ತೋರಿಸಿದ ಮಾರ್ಗವನ್ನು ಅನುಸರಿಸು." ಎಂದು ಉಪದೇಶಿಸಿದನು. ಸುಮಾರು ಇಪ್ಪತ್ತು ವರುಷದ ಮಾತುಗಳು ಈಗಲೂ ನನ್ನ ಕಿವಿಯಲ್ಲಿ ಭೋರ್ಗರೆಯುತ್ತಿವೆ. ದಾದಾಜಿಯ ಮಾತುಗಳು ವ್ಯರ್ಥವೆ?

ಗೋ—ಅವರ ಉಪದೇಶವು ವ್ಯರ್ಥವಾಗದು. ಉನ್ನತಿ ಮಾರ್ಗವನ್ನು ಅನುಸರಿಸಿದರೆ ತಕ್ಕ ಫಲವು ಲಭಿಸುವುದು. ಮಾರ್ಗಮಧ್ಯದಲ್ಲಿ ನಿರುತ್ಸಾಹರಾಗಿ ಮೊದಲಿನ ಉದ್ದೇಶವನ್ನು ಬಿಟ್ಟರೆ ಅದು ದಾದಾಜಿಯು ಮಾಡಿದ ವಂಚನೆಯೊ? ಅಲ್ಲದೆ ನಮ್ಮ ಭೀತಿಯೊ?

'ಭೀತಿಯೊ'? ಎಂದ ಮಾತ್ರದಲ್ಲಿಯೇ ಸಭಾಸ್ಥಳದಲ್ಲಿ ಕಲಕಲವು ಸಂಭವಿಸಿತು. ವೀರರ ಕೋಶಗಳಲ್ಲಿ ಖಡ್ಗಗಳು ಝಣಝಣ ಧ್ವನಿಮಾಡಿದುವು.

ಗೋಸಾಯಿಯು ಪುನಃ ಹೀಗೆಂದನು "ರಾಜನೇ! ನನ್ನ ವಾಚಾಳಕತ್ವವನ್ನು ಕ್ಷಮಿಸಿರಿ. ಆದರೆ ನನ್ನ ಮಾತು ಸುಳ್ಳೋ ನಿಜವೋ ಯೋಚಿಸಿ ನೋಡಿ. ಜಹಗೀರದಾರನಾಗಿದ್ದ ಯಾವ ವೀರನು ರಾಜನಾದನೋ—ಬಹುಕಾಲ ಸ್ವಾತಂತ್ರ್ಯವನ್ನು ವಹಿಸಿದ್ದನೋ——ಮ್ಲೇಂಛರನ್ನು ಶಿಕ್ಷಿಸಿದನೋ—ಅಂಥವನು ಸ್ವಾತಂತ್ರ್ಯಕ್ಕೆ ತಿಲಾಂಜಲಿಯನ್ನು ಬಿಟ್ಟು ಬಿಡುವನೆ? ಬಾಲಸೂರ್ಯನನ್ನು ವಿಕಾರಿಸಿ, ಪಾರತಂತ್ರ್ಯತಿಮಿರವನ್ನು ಓಡಿಸಿ, ಹಿಂದೂ ಗೌರವವೆಂಬ ಧೈರ್ಯವನ್ನು ನಾಲ್ಕು ಕಡೆಗೂ ವಿಸ್ತರಿಸಿದ ಯಾವ ಮಹಾರಾಷ್ಟ್ರಸೂರ್ಯನು ಅಕಾಲದಲ್ಲಿ ಅಸ್ತಮಿಸುವನೆ? ರಾಜನೇ! ಹಿಂದೂ ರಾಜ್ಯಲಕ್ಷ್ಮಿಯು ತಮ್ಮನ್ನು ವರಿಸಿರುವಳು. ಸ್ವೇಚ್ಛಾಪೂ

ರ್ವಕವಾಗಿ ತಾವು ಇದನ್ನು ಬಿಡುವಿರಾ ? ನಾನು ಗೋಸಾಯಿ. ಆಲೋಚನಾ ಶಕ್ತಿ ನನಗೆ ಇಲ್ಲ. ತಾವು ಸ್ವತಂತ್ರವಾಗಿ ವಿವೇಚಿಸಿ ನೋಡಿರಿ."

ಸಭಾಸದರು ಸುಮ್ಮನಿದ್ದರು— ಶಿವಾಜಿಯು ಮೌನವಾಗಿದ್ದನು. ಆದರೆ, ಅವನ ಕಣ್ಣುಗಳು ಧಗಧಗನೆ ಉರಿಯುತ್ತಿದ್ದುವು ಸ್ವಲ್ಪ ಹೊತ್ತಿಗೆ ಗೋಸಾಯಿಯಕಡೆ ನೋಡಿ, ಅವನು ಹೀಗೆಂದನು.—"ಮಹಾತ್ಮಾ ! ತಾವು ದೇವತೆಗಳೋ ಮನುಷ್ಯರೋ ತಿಳಿಯಲಾರೆ. ಆದರೆ ದೇವರ ಮಾತಿಗಿಂತಲೂ ನಿಮ್ಮ ಮಾತು ನನ್ನ ಹೃದಯದಲ್ಲಿ ನಾಟಿಕೊಂಡಿವೆ, ನಿಮ್ಮನ್ನು ಒಂದು ಮಾತು ಕೇಳುವೆನು. ರಾಜಪುತ್ರಸೇನಾಪತಿಯು ತುಂಬ ಪರಾಕ್ರಮಶಾಲಿ; ಬುದ್ಧಿಶಾಲಿ, ಮತ್ತು ರಣಶೂರ. ಅವನಿಗೆ ಅಮಿತ ಸೈನ್ಯವಿದೆ. ಅವನನ್ನು ಇದಿರಿಸುವದಕ್ಕೆ ನನಗೆ ತಕ್ಕಷ್ಟು ಸೈನ್ಯವೆಲ್ಲಿ !

ಗೋ—ರಾಜಪುತ್ರರು ವೀರರೇ ; ಮಹಾರಾಷ್ಟ್ರರೇನೂ ದುರ್ಬಲರಲ್ಲ ; ಜಯಸಿಂಹನು ರಣಶೂರನೇ ! ಆದರೂ ಶಿವಾಜಿ ಛತ್ರಪತಿಯೂ ಅಶಕ್ತನಲ್ಲ. ಅಪಜಯವುಂಟಾಗುವುದೆಂದು ಸಂಶಯಪಟ್ಟರೆ ಪರಾಜಯವೇ ಉಂಟಾಗುವುದು. ಪುರುಷಸಿಂಹನು ವಿಪತ್ತುಗಳನ್ನು ತೃಣೀಕರಿಸಿ ಕಾರ್ಯಸಾಧನೆಯನ್ನು ಮಾಡಲಿ. ಆತನ ಯಶೋಗೀತಗಳನ್ನು ಹಾಡದ ಹಿಂದುವು ಒಬ್ಬನೂ ಇರಲಾರನು.

ಶಿವಾಜಿ—ಚಿತ್ತ ! ಆದರೆ ಹಿಂದುಗಳು ಹಿಂದುಗಳ ಸಂಗಡ ಹೋರಾಡುವುದು ಉತ್ತಮವೆ ? ಅದು ಪುಣ್ಯಕರ್ಮವಾಗುವುದೆ ?

ಗೋ—ಆ ವಾಕ್ಯವು ಯಾರಿಗೆ ? ಸ್ವಧರ್ಮಕ್ಕಾಗಿಯೂ, ಸ್ವದೇಶಕ್ಕಾಗಿಯೂ ಯುದ್ಧ ಮಾಡುವವನಿಗೋ ? ಅಥವಾ ದೇಶದ್ರೋಹಿಗಳಾದ ಮುಸಲ್ಮಾನರ ಹಣವನ್ನು ತಿಂದು ಸ್ವಜಾತಿಗೆ ವಿರುದ್ಧವಾಗಿ ಪ್ರವರ್ತಿಸುವವನಿಗೋ ?

ಶಿವಾಜಿಯು ಸ್ವಲ್ಪ ಮೌನವಾಗಿದ್ದನು. ಅವನ ಮನಸ್ಸು ಯಾವ ಯಾವ ವೃತ್ತಿಗಳಿಂದ ಬದಲಾವಣೆಯಾಗುತ್ತಿದ್ದಿತೋ ಯಾರು ಹೇಳಬಲ್ಲರು ? ಮತ್ತೆ ಮೆಲ್ಲನೆ ತಲೆಯೆತ್ತಿ ಹೀಗೆಂದನು. "ಗೋಸಾಯಿ ! ಮಹಾರಾಷ್ಟ್ರವು ಈಗಲೂ ವೀರಶೂನ್ಯವಾಗಿಲ್ಲ. ಪರಾಧೀನವಾಗದು ; ಪುನಃ ಯುದ್ಧ ಸಂಭವಿಸುವುದು ನಿಜ ಆದರೆ ಆ ದಿನವು ಇನ್ನೂ ಬಂದಿಲ್ಲ. ಅಪಜಯವುಂಟಾಗುವದಕ್ಕೇನೂ ಅನುಮಾನವಿಲ್ಲ.

ಇನ್ನೊಂದು ಕಾರಣದಿಂದ ಈಗ ಯುದ್ಧವಿಮುಖನಾದೆನು. ನಾನು ಕೈಕೊಂಡ ಮಹಾ ವ್ರತಸಾಧನೆಗಾಗಿ ಬಹುವಿಧದಲ್ಲಿ ಉಪಾಯವನ್ನು ಯೋಚಿಸಿದೆನು. ಮ್ಲೇಂಛರು ನಮ್ಮ ಸಂಗಡ ಮಾಡಿದ ಸಂಧಿಯಂತೆ ನಡೆದುಕೊಳ್ಳರ; ನಾನು ಕೂಡ ಅವರ ವಿಷಯದಲ್ಲಿ ಸರಿಯಾಗಿ ನಡೆಯೆನು. ಆದರೆ, ಹಿಂದೂ ಧರ್ಮಸಂರಕ್ಷಕನೂ, ಸತ್ಯವ್ರತನೂ, ಪರಾಕ್ರಮಶಾಲಿಯೂ ಆದ ರಾಜಾ ಜಯಸಿಂಹನ ಸಂಗಡ ಸಂಧಿಪ್ರಸ್ತಾಪ ಮಾಡಿದೆನು. ಆ ಸಂಧಿಯನ್ನು ಭಂಗಮಾಡೆನು. ಸಮಾನ ಹಿಂದೂ ವೀರನ ಸಂಗಡ ಶಿವಾಜಿಯು ಎಂದಿಗೂ ಧರ್ಮವನ್ನು ಅತಿಕ್ರಮಿಸನು. ''ಸತ್ಯಪಾಲನೆಯಲ್ಲಿ ಸನಾತನ ಹಿಂದೂ ಧರ್ಮಸಂರಕ್ಷಣೆಯು ನಡೆಯದೆ ಹೋದರೆ ಸತ್ಯೋಲ್ಲಂಘನೆಯಲ್ಲಿ ನಡೆಯುವುದೆ ?'' ಎಂದು ರಾಜಾಜಯಸಿಂಹರವರು ನನ್ನ ಸಂಗಡ ಹೇಳಿದ ಮಾತನ್ನು ಇನ್ನೂ ಮರೆಯಲಿಲ್ಲ. ಆ ಧರ್ಮಾತ್ಮನ ಮಾತು ಕಿವಿಯಲ್ಲಿ ಧ್ವನಿ ಮಾಡುತ್ತಿದೆ. ಆದುದರಿಂದ, ಮಹಾತ್ಮಾ ! ಕಪಟಿಯಾದ ಔರಂಗಜೇಬನು ನಮ್ಮ ಸಂಗಡ ಸ್ಥಾಪಿಸಿದ ಸಂಧಿಯನ್ನು ಅತಿಕ್ರಮಿಸಲಿ. ಆಗ ನಿಮ್ಮ ಉಪದೇಶವನ್ನು ಗ್ರಹಿಸುವೆನು. ಆದರೆ ಸತ್ಯಪರಾಯಣನಾದ ಜಯಸಿಂಹನ ಸಂಗಡ ಸಂಧಿಯನ್ನು ಮೀರುವುದಕ್ಕೆ ಅವಕಾಶವಿಲ್ಲ.

ಅನ್ನಾಜೀ—ಮಹಾರಾಜಾ ! ಡಿಲ್ಲೀನಗರಕ್ಕೆ ಹೋಗಲು ನಿಶ್ಚಯಿಸಿದಿರಾ ?

ಶಿವಾಜಿ—'ಸರಿ' ಎಂದು ರಾಜಾಜಯಸಿಂಹನಿಗೆ ವಾಗ್ದಾನ ಮಾಡಿದೆನು.

ಅನ್ನಾಜೀ—ಮಹಾರಾಜಾ ! ಚಕ್ರವರ್ತಿಯು ಮೋಸಗಾರನು; ಅವನ ಮಾತುಗಳನ್ನು ನೀವು ನಂಬಿದಿರಾ ? ಮನಃಪೂರ್ವಕವಾಗಿ ಅವನು ನಿಮ್ಮನ್ನು ಆಹ್ವಾನಿಸಿದನೋ ಇಲ್ಲವೋ ತಿಳಿಯಲಿಲ್ಲವಷ್ಟೆ ?

ಶಿವಾಜಿ—ಅನ್ನಾಜೀ ! ಡಿಲ್ಲೀನಗರದಲ್ಲಿ ನನಗೆ ಯಾವ ಅಪಾಯವೂ ಉಂಟಾಗುವುದಿಲ್ಲವೆಂದು ರಾಜಾಜಯಸಿಂಹನು ನನ್ನೊಡನೆ ಹೇಳಿದ್ದಾನೆ.

ಅನ್ನಾಜಿ—ದುರ್ಮಾರ್ಗನಾದ ಔರಂಗಜೇಬನು ನಿಮ್ಮನ್ನು ಸೆರೆಯಲ್ಲಿಟ್ಟರೆ ಜಯಸಿಂಹನು ನಿಮ್ಮನ್ನು ಹೇಗೆ ಕಾಪಾಡುವನು ?

ಶಿವಾಜಿ—ಸಂಧಿಯನ್ನು ಅತಿಕ್ರಮಿಸುವುದರಿಂದ ಆಗುವ ಫಲವನ್ನು ಔರಂಗಜೇಬನು ತಪ್ಪದೆ ಅನುಭವಿಸುವನು. ಅನ್ನಾಜಿ ! ಮಹಾರಾಷ್ಟ್ರವು ವೀರಭೂಮಿ. ಮ್ಲೇಂಛನು ತಪ್ಪುಕೆಲಸ ಮಾಡಿದ ಪಕ್ಷದಲ್ಲಿ ಮಹಾರಾಷ್ಟ್ರದಲ್ಲಿ ಪ್ರಜ್ವಲಿಸುವ

ಯುದ್ಧಾನಲವನ್ನು ಆರಿಸುವುದಕ್ಕೆ ಸಮುದ್ರದ ನೀರಾದರೂ ಸಾಲದು. ಡಿಲ್ಲೀಸಾಮ್ರಾಜ್ಯವು ಆ ಮಹಾವಹ್ನಿಯಲ್ಲಿ ಉರಿದು ಹೋಗುವುದು. ಪಾಪಕ್ಕೆ ಪ್ರತಿಫಲವು ತಪ್ಪದು.

ಶಿವಾಜಿಯು ಪ್ರಯಾಣ ಮಾಡಲು ನಿಶ್ಚಯಿಸಿದನೆಂದು ತಿಳಿದುಕೊಂಡು ಮುಂದೆ ಯಾರೂ ಪ್ರತ್ಯುತ್ತರಕೊಡಲಿಲ್ಲ. ಅನಂತರ ಮಹಾರಾಷ್ಟ್ರಾಧಿಪತಿಯು ಹೀಗೆಂದನು—“ಪೇಷ್ವೆಗಳಾದ ಮೋರೇಶ್ವರ, ಆಬಾಜಿಸೋನದೇವ, ಅನ್ನಾಜಿದತ್ತರೇ! ನಿಮ್ಮಂತಹ ಕಾರ್ಯದಕ್ಷರೂ, ರಾಜಭಕ್ತರೂ ಮಹಾರಾಷ್ಟ್ರದಲ್ಲಿ ದುರ್ಲಭರು. ನಾನು ಇಲ್ಲದಾಗ ನೀವು ಮೂವರೂ ದೇಶವನ್ನು ಆಳಬೇಕು. ನನ್ನ ಆಜ್ಞೆಯಂತೆಯೇ ನಿಮ್ಮಲ್ಲಿಯೂ ಆಯಾದೇಶದ ಪ್ರಜೆಗಳು ಶಿರಸಾವಹಿಸಿ ನಡೆಯುವರು. ಈರೀತಿ ಜನರಿಗೆ ತಿಳಿಸಿ ಹೊರಡುವೆನು.

ಆಗ ಮಾಲಸೂರೆಯು ಮುಂದಕ್ಕೆ ಬಂದು, “ಮಹಾಪ್ರಭೂ ! ನನ್ನ ದೀನಾಭಿಪ್ರಾಯವನ್ನು ಮನ್ನಿಸಬೇಕು. ಚಿಕ್ಕಂದಿನಿಂದಲೂ ಕಷ್ಟಕಾಲದಲ್ಲಿ ನಿಮ್ಮನ್ನು ಬಿಟ್ಟಿರಲಿಲ್ಲ. ಅನುಜ್ಞೆ ಕೊಡಿರಿ. ತನ್ನೊಡನೆ ಡಿಲ್ಲೀನಗರಕ್ಕೆ ಬರುವೆನು.” ಎಂದು ಶಿವಾಜಿಯನ್ನು ಪ್ರಾರ್ಥಿಸಿದನು.

ಶಿವಾಜಿಯು ಸಜಲನಯನನಾಗಿ “ಮಾಲಸೂರೆ ! ನಿನಗೆ ನಾನು ಕೊಡದೆ ಇರುವುದೇನಿದೆ ? ನಿನ್ನ ಕೋರಿಕೆಯ ಪ್ರಕಾರಮಾಡು.” ಎಂದು ಹೇಳಿದನು.

ಸೀತಾಪತಿ—ರಾಜರ್ ! ನನಗೆ ಇನ್ನು ಅಪ್ಪಣೆ ಕೊಡಿರಿ ! ತೀರ್ಥಯಾತ್ರೆ ಮಾಡಬೇಕಾಗಿದೆ. ಭಗವಂತನು ನಿಮಗೆ ಜಯವನ್ನು ಉಂಟುಮಾಡಲಿ ! ಸೀತಾಪತಿಯು ಪುನಃ ಎಂದಾದರೂ ನಿಮ್ಮ ದರ್ಶನವನ್ನು ತೆಗೆದುಕೊಳ್ಳುವನು.

ಶಿವಾಜಿ—ಸೀತಾಪತಿ ಗೋಸಾಯೀ ! ಕ್ಷೇಮವಾಗಿ ತೀರ್ಥಯಾತ್ರೆಮಾಡಿರಿ. ಯುದ್ಧದ ಸಮಯದಲ್ಲಿ ನಿಮ್ಮನ್ನು ಸ್ಮರಿಸುವೆನು. ನಿಮ್ಮಂತೆ ಈ ಅಲ್ಪವಯಸ್ಸಿನಲ್ಲಿ ಯಾರಲ್ಲಿಯೂ ನಾನು ಈ ತೇಜಸ್ಸನ್ನೂ, ಸಾಹಸವನ್ನೂ ನೋಡಿರಲಿಲ್ಲ. ಎಂದು ನಿಟ್ಟುಸಿರುಬಿಟ್ಟು, ಅಸ್ಫುಟಸ್ವರದಿಂದ “ಆದರೆ. ಮತ್ತೊಬ್ಬನಲ್ಲಿ ಈ ತೇಜಸ್ಸನ್ನು ನೋಡಿದ್ದೆನು.” ಎಂದು ಹೇಳಿದನು. ಸೀತಾಪತಿಯು ಹೊರಟುಹೋದನು.

---

# ಹದಿನೈದನೆಯ ಪ್ರಕರಣ.

---

## (ರಾಮಸಿಂಹ.)

೧೬೬೬ನೇ ಇಸವಿಯ ವಸಂತಕಾಲದಲ್ಲಿ ಆಯ್ದ ಸಾವಿರ ಕುದುರೆ ಸೈನ್ಯವನ್ನೂ, ಒಂದು ಸಾವಿರ ಪದಾತಿಯನ್ನೂ ಸಂಗಡ ಕರೆದುಕೊಂಡು ಹೊರಟು ಶಿವಾಜಿಯು ಡಿಲ್ಲೀನಗರಕ್ಕೆ ಆರುಮೈಲುಗಳ ದೂರದಲ್ಲಿ ನಿಂತನು. ಸೈನಿಕರು ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದರು. ಚಿಂತಾಮಗ್ನನಾಗಿ ಶಿವಾಜಿಯು ಅಲ್ಲಲ್ಲಿ ತಿರುಗಾಡುತ್ತಿದ್ದನು. "ಡಿಲ್ಲಿಗೆ ಬಂದುದು ಎಂತಹ ಹುಚ್ಚುಕೆಲಸ ! ಮುಸಲ್ಮಾನರ ಮರ್ಯಾದೆಯನ್ನು ಅಂಗೀಕರಿಸುವುದು ಉಚಿತ ಕಾರ್ಯವೆ ? ಈಗಲಾದರೂ ಹಿಂತಿರುಗಿ ಹೋಗುವುದಕ್ಕೆ ಅವಕಾಶವಿಲ್ಲವೆ ?" ಎಂಬ ಆಲೋಚನೆಯು ಅವನ ವಿಶಾಲಹೃದಯವನ್ನು ಉದ್ರೇಕಪಡಿಸುತ್ತಿದ್ದಿತು. ಯಾವ ಕಷ್ಟಕಾಲದಲ್ಲಿಯೂ ಅವನ ಮುಖವು ಇಷ್ಟು ಚಿಂತಾರೇಖೆಗಳಿಂದ ತುಂಬಿರಲಿಲ್ಲ.

ಉಗ್ರಸ್ವಭಾವಿಯೂ, ತೇಜಸ್ವಿಯೂ, ಒಂಭತ್ತು ವರುಷ ವಯಸ್ಸುಳ್ಳವನೂ ಆದ ಅವನ ಮಗನಾದ ಸಂಭಾಜಿಯು ಶಿವಾಜಿಯ ಸಂಗಡ ಸಂಚಾರಮಾಡುತ್ತಾ, ಮಾತುಮಾತಿಗೂ ಜನಕನ ಮುಖವನ್ನು ನೋಡುತ್ತಿದ್ದನು. ತಂದೆಯ ಹೃದಯದಲ್ಲಿದ್ದ ಅಭಿಪ್ರಾಯಗಳು ಅವನಿಗೆ ಸ್ವಲ್ಪಸ್ವಲ್ಪವಾಗಿ ತಿಳಿಯುತ್ತಿದ್ದುವು. ರಘುನಾಥಪಂತ ನ್ಯಾಯಶಾಸ್ತ್ರಿಯು ಸ್ವಲ್ಪ ಹಿಂದಕ್ಕೆ ನಿಂತಿದ್ದನು.

ಸ್ವಲ್ಪ ಹೊತ್ತಿಗೆ ಶಿವಾಜಿಯು ಮಂತ್ರಿಯನ್ನು ನೋಡಿ, "ನ್ಯಾಯಶಾಸ್ತ್ರೀ ! ತಾವು ಎಂದಾದರೂ ಡಿಲ್ಲೀನಗರವನ್ನು ನೋಡಿರುವಿರಾ ? ಎಂದು ಕೇಳಿದನು.

ನ್ಯಾ—ನಾನು ಚಿಕ್ಕಂದಿನಲ್ಲಿ ನೋಡಿದ್ದೇನೆ.

ಶಿ—ದೊಡ್ಡಗೋಡೆಯಂತೆ ದೂರದಲ್ಲಿ ಕಾಣುತ್ತಿರುವುದು ಏನು ಹೇಳಬಲ್ಲಿರಾ? ತದೇಕ ಧ್ಯಾನದಿಂದ ಅದರ ಕಡೆ ನೋಡುತ್ತಿರುವಿರಿ !

ನ್ಯಾ—ಮಹಾರಾಜಾ ! ಅಲ್ಲಿ ಕಾಣಲ್ಪಡುವುದು ಹಿಂದೂ ಸಾರ್ವಭೌಮನಾದ ಪೃಥ್ವೀರಾಯನ ದುರ್ಗದ ಪ್ರಾಕಾರವು.

ಶಿವಾ—(ವಿಸ್ಮಯದಿಂದ) ಅದೇ ಆ ಪೃಥುರಾಯನ ದುರ್ಗವೇ ? ಇದೇ ಅವನ ರಾಜಧಾನಿಯೆ ? ಇಲ್ಲಿಯೇ ಕೊನೆಯ ಹಿಂದೂ ಸಾರ್ವಭೌಮನು ರಾಜ್ಯವನಾಳಿದನು. ನ್ಯಾಯಶಾಸ್ತ್ರಿ ! ಆ ದಿನಗಳು ಸ್ವಪ್ನದಂತೆ ಕಳೆದು ಹೊದವಲ್ಲವೆ ? ಸೂರ್ಯನು ಅಸ್ತಮಿಸಿ ಪುನಃ ಹುಟ್ಟುವನು. ಶೀತಕಾಲದಲ್ಲಿ ಹೂಗಳು ಎಲೆಗಳನ್ನು ಬೀಳಿಸಿ, ವಸಂತದಲ್ಲಿ ಪುನಃ ಕಾಣಿಸುವುವು. ಅದರಂತೆಯೇ ನಮ್ಮ ಗೌರವದಿನವು ಪುನಃ ಬರುವುದೆ ?

ನ್ಯಾ—ಭಗವಂತನ ಅನುಗ್ರಹದಿಂದ ಎಲ್ಲವೂ ಅನುಕೂಲಿಸಬಹುದು. ನಿಮ್ಮ ಬಾಹುಬಲದಿಂದ ಹಿಂದೂ ಜಾತಿಯು ಉನ್ನತಿಗೆ ಬರುವುದು.

ಶಿ—ಅಮಾತ್ಯಪುಂಗವಾ ! ಬಾಲ್ಯದಲ್ಲಿ ನಾವು ಕೊಂಕಣ ದೇಶದಲ್ಲಿ ಕೇಳಿದ ಕಥೆಕಾರರ ಹಾಡುಗಳೂ, ಚಾಂದಕವಿಯ ಪದ್ಯಗಳೂ ತಮಗೆ ಜ್ಞಾಪಕದಲ್ಲಿರುವುವೆ ? ಈ ಜೀರ್ಣದುರ್ಗವು ಪ್ರಾಸಾದಗಳಿಂದ ತುಂಬಿದೆ. ಪತಾಕೆ ತೋರಣಾದಿಗಳಿಂದ ಅಲಂಕೃತವಾದ ನಗರದಲ್ಲಿಯ ಆ ಸಭಾಭವನದಲ್ಲಿ ಸಾರ್ವಭೌಮನು ದರ್ಬಾರು ನಡೆಯಿಸುತ್ತಿರುವನು. ಪಟ್ಟಣಿಗರು ಸಂತೋಷಕರವಾದ ನಗರದ ಬೀದಿಗಳಲ್ಲಿ ಸಂಚರಿಸುತ್ತಿರುವರು. ವಿಶಾಲವಾದ ಅಂಗಡಿಬೀದಿಯಲ್ಲಿ ಕ್ರಯ ವಿಕ್ರಯಗಳು ನಡೆಯುತ್ತಿವೆ. ಹೆಂಗಸರು ಬಿಂದಿಗೆಗಳಲ್ಲಿ ನೀರನ್ನು ತರುತ್ತಿರುವರು. ಅರಮನೆಯ ಇದಿರಿಗೆ ಸೈನ್ಯವು ಸಿದ್ಧವಾಗಿದೆ. ಆನೆಗಳೂ, ಕುದುರೆಗಳೂ ಸಂಸಿದ್ಧವಾಗಿ ನಿಂತಿವೆ. ವಾದ್ಯಗಾರರು ಸಾನಂದವಾದ ವಾದ್ಯಗಳನ್ನು ಬಾರಿಸುತ್ತಿರುವರು. ಈ ಸಮಯದಲ್ಲಿ ಮಹಮ್ಮದ್ ಘೋರಿಯ ದೂತನು ರಾಜಸಭೆಯಲ್ಲಿ ಪ್ರವೇಶಿಸುವನು. ಆ ವೃತ್ತಾಂತವು ನನ್ನ ಮನಸ್ಸಿಗೆ ಹೊಳೆಯುತ್ತಿದೆ. ನಿಮಗೇನಾದರೂ ಜ್ಞಾಪಕಕ್ಕೆ ಬಂದಿರುವುದೆ ?

ನ್ಯಾ—ದೇವಾ ! ಚಾಂದಕವಿಯ ಕಥೆಯು ಮನಸ್ಸಿನಲ್ಲಿ ನರ್ತಿಸುತ್ತಿದೆ. ಸ್ವಾಮಿಯವರು ಅಪ್ಪಣೆಕೊಟ್ಟರೆ ಆ ಕಥೆಯನ್ನು ಕೇಳಿ, ಆನಂದಪಡಬಹುದು.

ಶಿ—ಕೇಳಿರಿ, ಮುಸಲ್ಮಾನರ ದೂತನು ಪೃಥುರಾಯನ ಸಂಗಡ ಹೀಗೆಂದನು. "ದೇವಾ ! ನಮ್ಮ ಪ್ರಭುಗಳು ತಮ್ಮ ದರ್ಶನವನ್ನು ಅಪೇಕ್ಷಿಸುತ್ತಿರುವರು. ತಾವು ಅದನ್ನು ಪರಿಗ್ರಹಿಸಿ, ಅವರನ್ನು ಕರೆಯಿಸಿಕೊಂಡರೆ ನಾವು ತುಂಬ ಕೃತಜ್ಞರಾಗುವೆವು. ನನ್ನ ಮಾತುಗಳನ್ನು ಸಾವಧಾನವಾಗಿ ಲಾಲಿಸಬೇಕು."

ಪೃಥ್ವೀರಾಜನು—"ಎಂದಿಗೆ ಇನ್ನೊಬ್ಬ ಸೂರ್ಯನು ಹುಟ್ಟುವನೋ ಆಗ ಮತ್ತೊಬ್ಬನಿಗೆ ನನ್ನ ರಾಜ್ಯದಲ್ಲಿ ತಪ್ಪದೆ ಪ್ರವೇಶಮಾಡಗೊಡುವೆನು"

ದೂತನು—"ನಿಮ್ಮ ಮಾವಂದಿರು ಸಸ್ನೇಹವಾಗಿ ಸಂಧಿಮಾಡಿಕೊಂಡಿರುವರು. ಆದುದರಿಂದ ರಾಠೋರರುಬಲವು ಅಫ್ಘನ್ನರ ಸೈನ್ಯವನ್ನು ನೋಡಲಾರದು," ಎಂದನು.

ಪೃಥ್ವೀರಾಜನು—"ಒಳ್ಳೆಯದು. ಮಾವನವರಿಗೆ ಅಳಿಯನ ವಂದನೆಯನ್ನು ತಿಳಿಸಿ ಯುದ್ಧರಂಗದಲ್ಲಿ ದರ್ಶನ ತೆಗೆದುಕೊಳ್ಳುವೆನೆಂದು ಹೇಳು," ಎಂದುತ್ತರವಿತ್ತು ಕಳುಹಿದನು.

ಅನಂತರ ಯುದ್ಧವು ನಡೆಯಿತು. ತಿರೋರಿಕಾಳಗದೊಡನೆ ಹಿಂದೂರಾಜರ ಜಯಲಕ್ಷ್ಮಿಯೂ ಓಡಿಹೋದಳು. ಅಮಾತ್ಯಪುಂಗವಾ! ಆ ದಿನಗಳು ಕಳೆದು ಹೋಗಿವೆ. ಈಗ ಚಾಂದಕವಿಯ ಗೀತೆಗಳನ್ನು ಹಾಡುವವರು ಯಾರು? ಕೇಳುವವರು ಯಾರು? ಆದರೂ ಪೂರ್ವಿಕರ ಶಾಶ್ವತಕೀರ್ತಿಯನ್ನು ಸ್ಮರಿಸಿದಾಗ, ಸ್ವಪ್ನದಂತೆ ಹೊಸಹೊಸ ಆಶೆಗಳು ಹುಟ್ಟುವವು. ಈ ವಿಶಾಲ ಕೀರ್ತಿ ಕ್ಷೇತ್ರವು ವಿಶೇಷ ಕಾಲ ತಿಮಿರಾಚ್ಛಾದಿತವಾಗಿರಲಾರದು. ಭಗವಂತನು ರೋಗಿಯನ್ನು ಪುನಃ ಆರೋಗ್ಯವಂತನನ್ನಾಗಿ ಮಾಡುವನು. ದುರ್ಬಲನನ್ನು ಬಲವಂತನನ್ನಾಗಿ ಮಾಡುವನು. ದುರ್ದಶೆಯಲ್ಲಿರುವ ಹಿಂದುಗಳು ಇನ್ನು ಮುಂದೆಯಾದರೂ ಅಭಿವೃದ್ಧಿಗೆ ಬರಬಹುದು."

ಶಿವಾಜಿಯೂ ಸಂಭಾಜಿಯೂ ಶಿಬಿರದಲ್ಲಿ ಕುಳಿತುಕೊಂಡಿರಲು ರಕ್ಷಕಭಟನೊಬ್ಬನು ಬಂದು, 'ಮಹಾರಾಜಾ! ಜಯಸಿಂಹರ ಮಕ್ಕಳಾದ ರಾಮಸಿಂಹರವರು ಒಬ್ಬ ಸೈನಿಕನನ್ನು ಹಿಂದೆ ಕರೆದುಕೊಂಡು ಚಕ್ರವರ್ತಿಯ ಅಪ್ಪಣೆಯ ಪ್ರಕಾರ ತಮ್ಮನ್ನು ಆಹ್ವಾನಿಸುವುದಕ್ಕೆ ಬಂದಿರುವರು." ಎಂದು ಹೇಳಿದನು.

ಶಿವಾಜಿ—ಆತನನ್ನು ಗೌರವದಿಂದ ಕರೆದುಕೊಂಡು ಬಾ.

ಅಪ್ಪಾ, "ಆಹ್ವಾನಮಾಡುವುದಕ್ಕೆ ಔರಂಗಜೇಬನು ಇಬ್ಬರನ್ನು ಮಾತ್ರ ಕಳುಹಿಸಿರುವನೆ?" ಎಂದು ಉಗ್ರಸ್ವಭಾವದವನಾದ ಸಂಭಾಜಿಯು ತಂದೆಯನ್ನು ಕೇಳಿದನು

ಚಕ್ರವರ್ತಿಯು ಮಾಡಿದ ಅಪಮಾನಕ್ಕೆ ಕೋಪಹೊಂದಿದ್ದರೂ ಶಿವಾಜಿಯು ಕ್ರೋಧವನ್ನು ಹೊರಗೆ ತೋರ್ಪಡಿಸಲಿಲ್ಲ. ಅಷ್ಟರಲ್ಲಿಯೇ ರಾಮಸಿಂಗನು ಗುಡಾರದೊಳಗೆ ಪ್ರವೇಶಿಸಿದನು. ರಾಜಪುತ್ರನು ತಂದೆಯಂತೆಯೇ ತೇಜಸ್ವಿಯೂ ಸತ್ಯಪ್ರಿಯನೂ ಆಗಿರುವನೆಂದು ಬುದ್ಧಿಯುಳ್ಳ ಶಿವಾಜಿಯು ಅವನ ಮುಖವನ್ನು ನೋಡಿದ ಕೂಡಲೆ ಗ್ರಹಿಸಿದನು. ಆದರೆ, ಔರಂಗಜೇಬನು ಏನಾದರೂ ಕುತಂತ್ರವನ್ನು ಮಾಡಿರುವನೋ ಇಲ್ಲವೋ ಡಿಲ್ಲೀನಗರವನ್ನು ಪ್ರವೇಶಿಸಿದರೆ ಯಾವ ಅಪಾಯವು ಸಂಭವಿಸುವುದೋ ಏನೋ ಎಂದು ಶಂಕಿತನಾದರೂ ರಾಮಸಿಂಹನ ಮಾತುಗಳಿಂದ ವಿಷಯವನ್ನು ಗ್ರಹಿಸಬಹುದೆಂದು ಭಾವಿಸಿದನು. ರಾಮಸಿಂಹನು ತಂದೆಯಿಂದ ಶಿವಾಜಿಯ ಮಹಾತ್ಮೆಯನ್ನು ಕೇಳಿದ್ದನು. ಈಗ ಮಹಾರಾಷ್ಟ್ರವೀರನನ್ನು ವಿಸ್ಮಯದಿಂದ ನೋಡಿದನು.' ಶಿವಾಜಿಯು ರಾಮಸಿಂಹನನ್ನು ಆಲಿಂಗಿಸಿಕೊಂಡು ಪೀಠದಮೇಲೆ ಕುಳ್ಳಿರಿಸಿದನು.

ಕುಳಿತುಕೊಂಡಮೇಲೆ ರಾಮಸಿಂಹನು ಹೀಗೆಂದನು.—"ತಮ್ಮನ್ನು ಈವರೆಗೆ ಎಂದಿಗೂ ಸಂದರ್ಶಿಸಿರಲಿಲ್ಲ. ಆದರೆ ನಮ್ಮ ತಂದೆಯವರು ತಮ್ಮ ಯಾವತ್ ವೃತ್ತಾಂತವನ್ನೂ ಅಪ್ಪಣೆಕೊಡಿಸಿರುವರು. ತಮ್ಮಂತಹ ಸ್ವದೇಶಾಭಿಮಾನಿಗಳನ್ನೂ, ಧರ್ಮಪರಾಯಣರನ್ನೂ, ಮಹಾವೀರರನ್ನೂ ದರ್ಶನಮಾಡಿದುದರಿಂದ ಇಂದು ನಾನು ಧನ್ಯನಾದೆನು."

ಶಿವಾಜಿ—ನನಗೂ ಪರಮಸಂತೋಷ. ನಿಮ್ಮ ಜನಕನಂತಹ ನ್ಯಾಯವಿಚಕ್ಷಕರೂ, ಸತ್ಯಪ್ರಿಯರೂ, ವೀರಪುರುಷರೂ, ನ್ಯಾಯಾಸ್ಥಾನದಲ್ಲಿಯೂ ವಿರಳ. ಡಿಲ್ಲಿಗೆ ಬಂದುದರಿಂದ ಅವರ ಮಗನನ್ನು ನೋಡಿದೆನು. ಇದು ಸುಲಕ್ಷಣವೇ! ಸಂದೇಹವಿಲ್ಲ.

ರಾಮ—ತಾವು ಡಿಲ್ಲೀನಗರಕ್ಕೆ ದಯಮಾಡಿಸುವಿರೆಂದು ಕೇಳಿ ಚಕ್ರವರ್ತಿಯು ನನ್ನನ್ನು ತಮ್ಮ ಸನ್ನಿಧಿಗೆ ಕಳುಹಿಸಿರುವನು. ಯಾವಾಗ ನಗರದಲ್ಲಿ ಪ್ರವೇಶ?

ಶಿವಾ—ಪ್ರವೇಶಮಾಡುವುದರಲ್ಲಿ ನಿಮ್ಮ ಉಪದೇಶವೇನು?

ರಾಮ—ಈಗಲೇ ಪ್ರವೇಶಿಸುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ. ಆಲಸ್ಯವಾದರೆ ಗ್ರೀಷ್ಮಋತುವು ದುಸ್ಸಹವಾಗುವುದು.

ಶಿವಾಜಿ—(ಮಂದಹಾಸದಿಂದ) ಅದು ಸರಿಯೆ, ಈಗ ನೀವು ಡಿಲ್ಲಿಯಲ್ಲಿ ವಾಸ ಮಾಡುತ್ತಿರುವಿರಿ. ಅಲ್ಲಿಯ ವೃತ್ತಾಂತವು ನಿಮಗೆ ತಿಳಿದಿರಬಹುದು; ನಾನು ನಗರವನ್ನು ಪ್ರವೇಶಮಾಡುವುದು ಉಚಿತವೋ, ಅಲ್ಲವೋ ನೀವು ಹೇಳಿ.

ನಿಷ್ಕಪಟಹೃದಯನಾದ ರಾಮಸಿಂಹನು ಶಿವಾಜಿಯ ಅಭಿಪ್ರಾಯವನ್ನು ಗ್ರಹಿಸಿ, ಮಂದಹಾಸದಿಂದ "ಮಹಾರಾಜಾ! ಕ್ಷಮಿಸಿರಿ; ನಿಮ್ಮ ಅಭಿಪ್ರಾಯವನ್ನು ಮೊದಲು ನಾನು ತಿಳಿದುಕೊಳ್ಳದೆ ಹೋದೆನು. ನಾನು ನಿಮ್ಮ ರೀತಿಯಂತೆಯೇ ಎಲ್ಲಕಾಲದಲ್ಲಿಯೂ ಪರ್ವತಗಳಲ್ಲಿ ವಾಸವಿಡುವೆನು. ಕತ್ತಿಯನ್ನೇ ನಂಬಿರುವೆನು. ಕತ್ತಿಯಂತೆ ಹತ್ತಿರಕ್ಕೆ ಬರುವ ಬಂಧುಗಳಿಲ್ಲ; ಆದರೂ ಈ ಸಂದರ್ಭದಲ್ಲಿ ನಾನು ಕೇವಲ ಅಜ್ಞನು. ನಮ್ಮ ತಂದೆಯವರು ನಿನ್ನ ಸಂಗಡ ಡಿಲ್ಲಿಗೆ ಹೋಗಬೇಕೆಂದು ಹೇಳಿದಾಗ ತಾವು ಬರುವುದೇ ಮೇಲು, ಅವರ ಆಲೋಚನೆಯು ಎಂದಿಗೂ ವ್ಯರ್ಥವಾಗದು" ಎಂದು ಹೇಳಿದನು.

ಶಿವಾಜಿ—ಆಹುದು. ನಿಮ್ಮ ತಂದೆಯವರು ನನ್ನನ್ನು ಇಲ್ಲಿಗೆ ಕಳುಹಿಸಿರುವರು. ಅವರು ನನಗೆ ಮಾಡಿದ ವಾಗ್ದಾನವು ತಮಗೆ ಗೊತ್ತೇ ಇರುವುದೆಂದು ನಂಬುವೆನು.

ರಾಮ—ತಿಳಿದಿದೆ. ಡಿಲ್ಲಿಗೆ ಬಂದರೆ ತಮಗೆ ಯಾವ ಅಪಾಯವೂ ಉಂಟಾಗದು. ಆ ವಿಷಯವಾಗಿ ಅವರು ನಿಮಗೆ ವಾಗ್ದಾನಮಾಡಿರುವುದೂ ಅಲ್ಲದೆ ನನಗೂ ಅಪ್ಪಣೆ ಮಾಡಿರುವರು.

ಶಿವಾಜಿ—ಆ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?

ರಾಮ—ತಂದೆಯ ಅಪ್ಪಣೆಯನ್ನು ಶಿರಸಾವಹಿಸಿ ನಡೆಯಿಸುವೆನು. ರಾಜಪುತ್ರರು ಆಡಿದ ಮಾತನ್ನು ತಪ್ಪದೆ ನಡೆಯಿಸುವರು. ತಾವು ಸುರಕ್ಷಿತವಾಗಿ ಸ್ವರಾಜ್ಯಕ್ಕೆ ಹಿಂತಿರುಗಿ ಹೋಗಬಹುದು. ಆ ವಿಷಯದಲ್ಲಿ ಈ ನಿಮ್ಮ ದಾಸನು ಸಾಧ್ಯವಾಗುವವರೆಗೂ ಸಹಾಯಮಾಡುವನು.

ಶಿವಾಜಿಯ ಮನಸ್ಸು ಶಾಂತವಾಯಿತು. ಅನುಮಾನವನ್ನು ಬಿಟ್ಟು ಕಿರುನಗೆಯಿಂದ ಅವನು "ಒಳ್ಳೆಯದು, ನಿಮ್ಮ ಆಲೋಚನೆಯಂತೆ ನಡೆಯುವೆನು; ಈಗಲೇ ಹೊರಡುವೆನು" ಎಂದು ಹೇಳಿದನು. ತರುವಾಯ ಸ್ವಲ್ಪಹೊತ್ತಿನಮೇಲೆ ಅವರೆಲ್ಲರೂ ಡಿಲ್ಲೀನಗರಾಭಿಮುಖವಾಗಿ ಹೊರಟರು.

ದಾರಿಯು ಹಿಂದಿನ ಮುಸಲ್ಮಾನ ಪ್ರಭುಗಳ ಜೀರ್ಣಮಂದಿರಗಳಿಂದ ತುಂಬಿದ್ದಿತು. ಅವರು ದೇಹಲಿಯನ್ನು ಜಯಿಸಿ, ಪೃಥ್ವೀರಾಯನ ದುರ್ಗದ ಹತ್ತಿರ ತಮ್ಮ ರಾಜಧಾನಿಯನ್ನು ನಿರ್ಮಿಸಿಕೊಂಡರು; ಆದುದರಿಂದ ಮೊದಲಿನ ಬಾದಶಹರ ಗೋರಿಗಳೂ ಮಸೀದಿಗಳೂ ಅರಮನೆಗಳೂ ನಾಮಾವಶೇಷವಾಗಿದ್ದುವು. ಜಗದ್ವಿಖ್ಯಾತವಾದ ಕುತುಬ್ ಮಿನಾರ್ ಎಂಬುದು ಅಲ್ಲಿಯದೇ. ಕಾಲಕ್ರಮೇಣ ನೂತನ ಪ್ರಭುಗಳು ಹೊಸಹೊಸದಾಗಿ ಕಟ್ಟಡಗಳನ್ನು ಕಟ್ಟಿಸಲಾರಂಭಿಸಿದರು; ಕ್ರಮೇಣ ನಗರವು ಉತ್ತರದಿಕ್ಕಿಗೆ ವ್ಯಾಪಿಸಿತು. ಹೀಗೆ ಹೋಗುತ್ತ ಇರುವಾಗ ಕೆಲವು ಮಸೀದಿಗಳೂ ಮೀನಾರಗಳೂ ಸ್ತಂಭಗಳೂ ಸಮಾಧಿಗಳೂ ಜೀರ್ಣವಾಗಿ ಕಂಡವು. ಅವುಗಳನ್ನು ಎಣಿಸುವುದಕ್ಕೆ ಶಕ್ತಿಸಾಲದು. ರಾಮಸಿಂಹನು ಶಿವಾಜಿಗೆ ಆಯಾ ಸ್ಥಳಗಳ ವೃತ್ತಾಂತಗಳನ್ನು ತಿಳಿಯಪಡಿಸುತ್ತಿದ್ದನು. ಇಬ್ಬರೂ ಪ್ರತಿಯೊಬ್ಬರ ಸ್ವಭಾವವನ್ನು ಗ್ರಹಿಸುತ್ತಿದ್ದರು. ದಿಲ್ಲಿಯಲ್ಲಿ ಯಾವುದಾದರೂ ವಿಪತ್ತು ಸಂಭವಿಸಿದರೆ ಒಬ್ಬ ಮಿತ್ರನಾದರೂ ಇರುವನೆಂದು ಶಿವಾಜಿಯು ತಿಳಿದುಕೊಂಡನು.

ಮಾರ್ಗಮಧ್ಯದಲ್ಲಿ ಲೋದೀವಂಶದ ಚಕ್ರವರ್ತಿಗಳ ಗೋರಿಗಳು ಕಾಣಿಸಿದುವು. ಒಬ್ಬೊಬ್ಬ ಬಾದಶಹನ ಗೋರಿಯಮೇಲೆ ಒಂದು (ಗಂಬಜ್) ಶಿಖರವು ಕಟ್ಟಲ್ಪಟ್ಟಿದ್ದಿತು. ಅಫ್‌ಘಾನರ ಅಧಿಕಾರವು ಮುಗಿದಾಗ ದಿಲ್ಲಿಯು ಆ ಪ್ರದೇಶದಲ್ಲಿದ್ದಿತು. ಅನಂತರ ಉತ್ತರಕ್ಕೆ ವ್ಯಾಪಿಸಿತು.

ಅಲ್ಲಿಂದ ಮುಂದೆ ಹುಮಾಯೂನನ ದೊಡ್ಡಗೋರಿಯೂ 'ಚೌಸಟ್ ಖಂಬಾ' ಅಂದರೆ ಬಿಳಿಯಕಲ್ಲಿನಿಂದ (ಅಮೃತಶಿಲೆ) ಕಟ್ಟಲ್ಪಟ್ಟ ಇಪ್ಪತ್ತನಾಲ್ಕು ಕಂಬಗಳ ಮೇಲೆ ಹಾಕಿದ್ದ ದೊಡ್ಡಮಂದಿರವೂ ಅದರ ಹಿಂದೆ ಲೆಕ್ಕವಿಲ್ಲದಷ್ಟು ಗೋರಿಗಳೂ ಕಾಣಿಸಿದವು. ಪೃಥ್ವೀಸಾರ್ವಭೌಮನ ದುರ್ಗದಿಂದ ಈದಿನ ದಿಲ್ಲಿಯವರೆಗೂ ಬರುಬರುತ್ತಾ ಆ ದಾರಿಯು ಭರತಖಂಡದ ಪೂರ್ವಚರಿತ್ರೆಯನ್ನು ತೋರ್ಪಡಿಸುತ್ತಿತ್ತು. ಒಂದೊಂದು ಅರಮನೆಯೂ, ಚರಿತ್ರೆಯ ಒಂದೊಂದು ಪತ್ರವೂ ಗೋರಿಯ ಅಕ್ಷರಗಳೂ, ಆ ಚರಿತ್ರೆಯನ್ನು ರಚಿಸಿದ ಕವಿಯೂ ಇಲ್ಲದಿದ್ದರೆ ಆ ವರ್ಣನೆಗಳಿಂದ ಇತಿಹಾಸವು ಹೇಗೆ ಲಿಖಿಸಲ್ಪಡುತ್ತಿದ್ದಿತು ?

ಅವರು ಇನ್ನೂ ಮುಂದಕ್ಕೆ ನಡೆಯುತ್ತಾ ಬಂದರು. ದಿಲ್ಲಿಯ ಪ್ರಾಕಾರವನ್ನು ಸಮೀಪಿಸಿದ ಕೂಡಲೇ ರಾಮಸಿಂಹನು ಸಗರ್ವದಿಂದ ಶಿವಾಜಿಗೆ ಒಂದು

ದೊಡ್ಡಮಂದಿರವನ್ನು ತೋರಿಸಿ, ಹೀಗೆಂದನು. ಮಹಾರಾಜಾ ! ಇಲ್ಲಿ ಕಾಣಿಸುವ ಮಂದಿರವನ್ನು ನಮ್ಮ ತಂದೆಯವರು ವಿದ್ವಾಂಸರಿಗಾಗಿ ಕಟ್ಟಿಸಿರುವರು. ನಾನಾ ದೇಶದ ವಿದ್ವಾಂಸರು ನಮ್ಮ ಮಂದಿರಕ್ಕೆ ಬಂದು, ಖಗೋಳ ಶಾಸ್ತ್ರವನ್ನು ಪರೀಕ್ಷಿಸಿ ತರ್ಕಿಸುವರು.

ಶಿವಾಜಿ—ನಿಮ್ಮ ತಂದೆಯವರು ವೀರರಾಗಿರುವರಲ್ಲದೆ ವಿಜ್ಞಾನ ಶಾಸ್ತ್ರಜ್ಞರು ಕೂಡ ಆಗಿರುವರು. ಅಂತಹ ಸಕಲಗುಣಸಂಪನ್ನರು ಲೋಕದಲ್ಲಿ ಮತ್ತಾರೂ ಇರುವುದಿಲ್ಲ. ಪವಿತ್ರಕ್ಷೇತ್ರವಾದ ವಾರಣಾಶಿ (ಕಾಶಿ) ಯಲ್ಲಿ ಇಂತಹ ನಕ್ಷತ್ರ ಶಾಲೆಯೊಂದನ್ನು ಅವರು ಸ್ಥಾಪಿಸಿರುವರೆಂದು ಕೇಳಿದೆನು.

ಡಿಲ್ಲಿಯ ಪ್ರಾಕಾರವನ್ನು ಪ್ರವೇಶಿಸಿದಾಗ ಗುಂಡಿಗೆಯು ತಟತಟನೆ ಹೊಡೆದು ಕೊಳ್ಳಲು ಶಿವಾಜಿಯು ತನ್ನ ಕುದುರೆಯನ್ನು ತಟ್ಟಿ ಹಿಂತಿರುಗಿ ನೋಡಿದನು. ಈಗಲೂ ಸ್ವಾತಂತ್ರ್ಯವಿರುವುದು, ಇನ್ನೊಂದು ಕ್ಷಣದಲ್ಲಿ ತಾನು ಬಂದಿಯಾಗಬಹುದೆಂದು ತೋರಿತು. ತತ್‌ಕ್ಷಣವೇ ತಾನು ಜಯಸಿಂಹನ ಬಳಿಯಲ್ಲಿ ಮಾಡಿದ ವಾಗ್ದಾನವು ಜ್ಞಾಪಕಕ್ಕೆ ಬಂದಿತು. ಆಗ ಜಯಸಿಂಹನ ಪುತ್ರನ ಉದಾರ ಮುಖಮಂಡಲವನ್ನು ನೋಡಿ, ಒರೆಯಲ್ಲಿದ್ದ 'ಭವಾನಿ' ಖಡ್ಗದಕಡೆ ದೃಷ್ಟಿಯನ್ನು ನಿಲ್ಲಿಸಿ ಡಿಲ್ಲಿಯ ದ್ವಾರವನ್ನು ಪ್ರವೇಶಿಸಿದನು.

ಪರಮ ಸ್ವತಂತ್ರನಾದ ಮಹಾರಾಷ್ಟ್ರವೀರನು ಆ ನಿಮಿಷದಲ್ಲಿಯೇ ಬಂದಿ ಯಾದನು.

---

## ಹದಿನಾರನೆಯ ಪ್ರಕರಣ.

---

### (ದೆಹಲಿನಗರ)

ದೆಹಲಿನಗರವು ಮನೋಹರವಾಗಿ ಅಲಂಕರಿಸಲ್ಪಟ್ಟಿದ್ದಿತು. ಔರಂಗಜೇಬನು ವಿಲಾಸಪ್ರಿಯನಲ್ಲ; ಆದರೆ ಸಮಯಬಂದಾಗ ಬೇಕಾದಹಾಗೆ ಆಡಂಬರವನ್ನು ತೋರಿ ಸುತ್ತಿದ್ದನು. ಬಡ ಮಹಾರಾಷ್ಟ್ರದಿಂದ ಐಶ್ವರ್ಯದೊಡಗೂಡಿರುವ ಮೊಗಲರ ರಾಜ

ಧಾನಿಗೆ ಶಿವಾಜಿಯು ಬಂದಿರುವನು; ಆದುದರಿಂದ ಮೊಗಲರ ಐಶ್ವರ್ಯವನ್ನು ನೋಡಿ, ತನ್ನ ಹೀನಸ್ಥಿತಿಯನ್ನು ತಿಳಿದುಕೊಂಡು, ಅವನು ಯುದ್ಧಮಾಡುವುದನ್ನು ನಿಲ್ಲಿಸಿಬಿಡುವನೆಂದು ತಿಳಿದು ಚಕ್ರವರ್ತಿಯು ತನ್ನ ನಗರವನ್ನು ನೇತ್ರಾನಂದಕರವಾಗಿ ಅಲಂಕರಿಸಬೇಕೆಂದು ಸೇವಕರಿಗೆ ಆಜ್ಞಾಪಿಸಿದನು. ಚಕ್ರವರ್ತಿಯ ಅಪ್ಪಣೆಯ ಮೇರೆಗೆ ರಾಜಧಾನಿಯು ಉತ್ಸವದಿನಗಳಂತೆ ಅಪೂರ್ವವೇಷವನ್ನು ತಳೆದಿದ್ದಿತು.

ಶಿವಾಜಿಯೂ ರಾಮಸಿಂಹನೂ ಜೊತೆಯಾಗಿ ಹೋಗುತ್ತಿದ್ದರು. ದಾರಿಯುದ್ದಕ್ಕೂ ಲೆಕ್ಕವಿಲ್ಲದಷ್ಟು ಕುದುರೆಯ ಸವಾರರೂ, ಕಾಲಾಳುಗಳೂ ಅಲ್ಲಲ್ಲಿ ನಿಂತಿದ್ದರು; ನಗರವು ಜನಭರಿತವಾಗಿದ್ದಿತು. ಅಂಗಡಿಗಳಲ್ಲಿ ವರ್ತಕರು ಸಾಮಾನುಗಳನ್ನು ರಾಶಿರಾಶಿಯಾಗಿ ಇಟ್ಟುಕೊಂಡಿದ್ದರು. ಬೆಲೆಯುಳ್ಳ ವಸ್ತ್ರಗಳನ್ನೂ, ಚಿನ್ನ ಬೆಳ್ಳಿಯ ಒಡವೆಗಳನ್ನೂ, ವಿಚಿತ್ರವಾದ ಗೃಹೋಪಕರಣಗಳನ್ನೂ, ತಿನ್ನುವ ಪದಾರ್ಥಗಳನ್ನೂ ನೋಡುತ್ತಾ, ಅವರು ದೊಡ್ಡಮಾರ್ಗದಲ್ಲಿ ಹೋಗುತ್ತಿದ್ದರು. ಕೆಲವು ಸ್ಥಳಗಳಲ್ಲಿ ಕೆಲವು ಮನೆಗಳ ಮೇಲೆ ಧ್ವಜಪಟಗಳು ಹಾರಾಡುತ್ತಿದ್ದುವು; ಕೆಲವು ಸ್ಥಳಗಳಲ್ಲಿ ಗೃಹಸ್ಥರು ಬಿಳಿಯ ದುಕೂಲಗಳನ್ನು ಧರಿಸಿ ನಿಂತಿದ್ದರು. ಕೆಲವೆಡೆಗಳಲ್ಲಿ ಕುಲಕಾಮಿನಿಯರು ಗವಾಕ್ಷಿಗಳಿಂದ ಸುಪ್ರಸಿದ್ಧನಾದ ಮಹಾರಾಷ್ಟ್ರವೀರನನ್ನು ನೋಡುತ್ತಿದ್ದರು. ದಾರಿಯಲ್ಲಿ ಬಂಡಿಗಳಲ್ಲಿಯೂ, ಮೇನಾಗಳಲ್ಲಿಯೂ, ಕುದುರೆಗಳ ಮೇಲೆಯೂ, ಆನೆಗಳಮೇಲೆಯೂ ಅನೇಕ ರಾಜರೂ, ಮನ್ಸಬದಾರರೂ, ಷೇಖರೂ, ಉಮ್ರಾವುಗಳೂ ಬರುತ್ತಾ ಹೋಗುತ್ತಿದ್ದರು. ಆಶ್ವಿಕರವೇಗದಿಂದ ನಗರವು ಅಲ್ಲ ಕಲ್ಲೋಲವಾಗಿದ್ದಿತು. ಬಿಳಿಯದಾದ ವಸ್ತ್ರಗಳಿಂದ ಅಲಂಕರಿಸಲ್ಪಟ್ಟ ಆನೆಗಳು ಸೊಂಡಿಲನ್ನು ಆಡಿಸುತ್ತಾ ಮಂದಗಮನದಿಂದ ಹೋಗುತ್ತಿದ್ದುವು, ಓಂಕಾರನಾದಗಳಿಂದ ಮೇನಾಗಳನ್ನು ಹೊರುತ್ತಾ ಬೋಯಿಗಳು ನಡೆಯುತ್ತಿದ್ದರು. ಶಿವಾಜಿಯು ಇಂತಹ ನಗರವನ್ನು ಎಂದೂ ನೋಡಿರಲಿಲ್ಲ. ರಾಜಗಡ, ಪೂನಾ ನಗರಗಳೆಲ್ಲಿ ?— ದಿಲ್ಲೀನಗರವೆಲ್ಲಿ ?

ರಾಮಸಿಂಹನು ಮೂರು ಮಸೀದಿಗಳನ್ನು ತೋರಿಸಿ—"ನೋಡಿದಿರಾ? ಅದು ಜುಮ್ಮಾ ಮಸೀದಿ. ಷಹಾಜಹಾನ ಚಕ್ರವರ್ತಿಯು ಪ್ರಪಂಚದ ಹಣವನ್ನು ಒಂದು ಕಡೆ ಸೇರಿಸಿ, ಪ್ರಶಸ್ತವಾದ ಆ ಮಂದಿರವನ್ನು ಕಟ್ಟಿಸಿದ್ದಾನೆ. ಅಂತಹ ಮಸೀದಿಯು ಪ್ರಪಂಚದಲ್ಲಿ ಮತ್ತೊಂದು ಇಲ್ಲವೆಂದು ಪ್ರಸಿದ್ಧವಾಗಿರುವುದು." ಎಂದು ಹೇಳಿದನು.

ಆಶ್ಚರ್ಯದಿಂದ ಕಣ್ಣುಗಳು ಅರಳಲು, ಶಿವಾಜಿಯು ಅದನ್ನು ನೋಡಿದನು, ಕೆಂಪುಕಲ್ಲಿನಿಂದ ಕಟ್ಟಲ್ಪಟ್ಟ ಪ್ರಾಕಾರದಗೋಡೆಯು ಬಹುದೂರ ವ್ಯಾಪಿಸಿ, ಬಹಳ ಶೋಭಾಯಮಾನವಾಗಿತ್ತು. ಅದರೊಳಗೆ ಅಮೃತಶಿಲೆಗಳಿಂದ ನಿರ್ಮಿಸಲ್ಪಟ್ಟ ಮೂರು ಮಸೀದಿಗಳೂ, ಎರಡು ಪಕ್ಕಗಳಲ್ಲಿ ಎರಡು ಮಿನಾರುಗಳೂ ಗಗನವನ್ನು ಭೇದಿಸಿಕೊಂಡು ಹೋದಂತೆ ಇದ್ದುವು.

ಅದರ ಇದಿರಿಗೆ ಶೋಣಶಿಲಾನಿರ್ಮಿತವಾದ ದುರ್ಗಪ್ರಾಕಾರವು ಕಾಣಲ್ಪಟ್ಟಿತು. ದುರ್ಗದ ಹಿಂದೆ ಯಮುನಾನದಿ ಇರುವುದು. ಮುಂದುಗಡೆ ರಾಜಮಾರ್ಗವಿರುವುದು. ಪ್ರಾಕಾರದಮೇಲೆ ನೂರಾರು ಧ್ವಜಪಟಗಳು ವಾಯುಪಥದಲ್ಲಿ ಹಾರಾಡುತ್ತಾ, ಮೊಗಲಾಯಿ ಚಕ್ರವರ್ತಿಯ ಕೀರ್ತಿಯನ್ನು ತೋರ್ಪಡಿಸುತ್ತಿದ್ದುವು. ದುರ್ಗದ್ವಾರದ ಪಕ್ಕದಲ್ಲಿ ಒಬ್ಬ ಮನ್ಸಬದಾರನ ಶಿಬಿರವಿದ್ದಿತು. ಅವನು ದ್ವಾರರಕ್ಷಕನು. ಸಿಂಹದ್ವಾರದ ಇದಿರಿಗೆ ಸೈನಿಕರು, ಆಯುಧಗಳನ್ನು ಧರಿಸಿ ನಿಂತಿದ್ದರು. ಬಂದೂಕುಗಳಲ್ಲಿ ಸೇರಿಸಿರುವ ಸನ್ನಿಗಳು ಸೂರ್ಯನ ಕಾಂತಿಯಿಂದ ಥಳಥಳನೆ ಹೊಳೆಯುತ್ತಿದ್ದುವು; ಅವುಗಳಿಗೆ ಕಟ್ಟಿರುವ ಕೆಂಪುದಾರಗಳು ಗಾಳಿಯಲ್ಲಿ ಹಾರಾಡುತ್ತಿದ್ದುವು. ರಾಜವೀಧಿಯ ಪಕ್ಕಗಳಲ್ಲಿ ನಾನಾವಿಧ ವಸ್ತುಗಳು ಮಾರಲ್ಪಡುತ್ತಿದ್ದುವು. ದುರ್ಗಪ್ರಾಕಾರದಿಂದ ಮೊದಲು ಮಸೀದಿಯ ಗೋಡೆಯವರೆವಿಗೂ ಜನಸಂದಣಿಯು ನಿಂತಿದ್ದಿತು. ಅಶ್ವಾರೋಹಿಗಳೂ, ಗಜಾರೋಹಿಗಳೂ, ಶಿಬಿರಾರೋಹಿಗಳೂ ಮೊದಲಾದ ಪ್ರಧಾನ ರಾಜಪುರುಷರು ಕೆಲವರು ಸಪರಿವಾರ ದುರ್ಗದೊಳಕ್ಕೆ ಹೋಗುತ್ತಿರಲು, ಮತ್ತೆ ಕೆಲವರು ಹೊರಗೆ ಬರುತ್ತಿದ್ದರು. ಅವರವರ ವೇಷಭೂಷಣಾದಿಗಳು ಕಣ್ಣುಗಳನ್ನು ಮುಚ್ಚಿಸುವಂತೆ ಹೊಳೆಯುತ್ತಿದ್ದವು. ಗದ್ದಲವನ್ನು ಅಡಗಿಸಲು ನಡುನಡುವೆ ದುರ್ಗದ ಮಧ್ಯದಿಂದ ಫಿರಂಗಿಗಳ ಶಬ್ದವು ನಗರವನ್ನು ಭೇದಿಸುವಂತೆ ಮಾಡುತ್ತಿದ್ದಿತು. ರಾಜಾಧಿರಾಜನಾದ ಆಲಂಘೀರ್ ಬಾದಶಹನ—ಎಂದರೆ—ಸಾರ್ವಭೌಮನ ಐಶ್ವರ್ಯವು ಆಕಾಶವನ್ನು ಮುಟ್ಟುತ್ತಿದ್ದಿತು.

ಶಿವಾಜಿಯು ರಾಮಸಿಂಹನೊಡನೆ ದುರ್ಗದೊಳಕ್ಕೆ ಪ್ರವೇಶಿಸಿದನು. ಅಲ್ಲಲ್ಲಿ ಇರುವ ವಸ್ತುಗಳನ್ನು ನೋಡಿ ಮತ್ತಷ್ಟು ವಿಸ್ಮಯಹೊಂದಿದನು. ದೊಡ್ಡ ಕಾರಖಾನೆಗಳಲ್ಲಿ ಬಹುಮಂದಿ ಶಿಲ್ಪಿಗಳು ನಾನಾವಿಧ ವಸ್ತುಗಳನ್ನು ಮಾಡುತ್ತಿದ್ದರು. ವಿಚಿತ್ರವಾದ ಚಿನ್ನ ಬೆಳ್ಳಿಯ ಸರಿಗೆಗಳಿಂದ ಹೆಣೆಯಲ್ಪಟ್ಟ ವಸ್ತುಗಳೂ, ಮಖಮಲ್,

ಮಸ್ಲಿನಗ್, ನವರುಬಟ್ಟೆಗಳು, ಚಾಂದಿನೀಲು, ಗುಡಾರಗಳು, ಪರದೆಗಳು, ಪಾಗುಗಳು, ಶಾಲುಗಳು, ಅಂಗಿಗಳು, ಬೇಗಮ್ಮರಿಗಾಗಿ ಸುವರ್ಣರತ್ನಾದಿ ಭೂಷಣಗಳು, ವಿವಿಧ ಬಣ್ಣಗಳುಳ್ಳ ಚಿತ್ರವಿಚಿತ್ರ ವಸ್ತುಗಳು——ಇವೇ ಮೊದಲಾದ ಅನೇಕ ಪದಾರ್ಥಗಳನ್ನು ಮಾಡುತ್ತಿದ್ದರು. ಭರತ ಖಂಡದಲ್ಲಿರುವ ಒಳ್ಳೆಯ ಕೆಲಸಗಾರರು ತಿಂಗಳಗಟ್ಟಳೆ ಸಂಬಳವನ್ನು ತೆಗೆದುಕೊಳ್ಳುತ್ತಾ, ಚಕ್ರವರ್ತಿಯ ಆಜ್ಞಾನುಸಾರ, ಪ್ರತಿದಿನವೂ ದುರ್ಗದಲ್ಲಿ ಕೆಲಸಮಾಡುತ್ತಿದ್ದರು. ಔರಂಗಜೇಬನಿಗಾಗಿಯೂ, ವಿಲಾಸ ಪ್ರಿಯರಾದ ಬೇಗಮರಿಗಾಗಿಯೂ ಮತ್ತು ಉಳಿದ ಅಂತಃಪುರದ ಜನರಿಗಾಗಿಯೂ ಅವಶ್ಯಕಗಳಾದ ವಿವಿಧ ವಸ್ತುಗಳು ಅಲ್ಲಿ ತಯಾರಾಗುತ್ತಿದ್ದುವು.

ಅಷ್ಟರೊಳಗೆ ಶಿವಾಜಿಯು "ದಿವಾನ್" ಎಂಬ ಅರಮನೆಯನ್ನು ಸಮೀಪಿಸಿದನು. ಸಾಧಾರಣವಾಗಿ ಚಕ್ರವರ್ತಿಯು ಆ ಮಂದಿರದಲ್ಲಿಯೇ ವಾಸಮಾಡುತ್ತಿರುವನು; ಆದರೆ, ಶಿವಾಜಿಗೆ ತನ್ನ ಐಶ್ವರ್ಯವನ್ನು ತೋರ್ಪಡಿಸಲುದ್ದೇಶಿಸಿ, ಸ್ವಚ್ಛ ಶಿಲಾನಿರ್ಮಿತವೂ, ನಾನಾವಿಧ ವಿಚಿತ್ರಪದಾರ್ಥಮಂಡಿತವೂ ಅದ್ವಿತೀಯವೂ ಆದ 'ದಿವಾನ್‌ಖಾಸ್' ಎಂಬ ಅರಮನೆಯಲ್ಲಿ ಅನೇಕ ಮಣಿಗಳಿಂದ ಕೆತ್ತಲ್ಪಟ್ಟ ಸೂರ್ಯಕಾಂತಿ ಪ್ರತಿಬಿಂಬಿತವಾದ ಮಯೂರ ಸಿಂಹಾಸನದಮೇಲೆ ಕುಳಿತಿದ್ದನು. ಅವನಿಗೆ ನಾಲ್ಕು ಕಡೆಗಳಲ್ಲಿಯೂ ಬೆಳ್ಳಿಯ ಕಂಬಗಳಿದ್ದುವು. ಆ ಆಸನಕ್ಕೆ ಮುಂಭಾಗದಲ್ಲಿ ದೊಡ್ಡದೊಡ್ಡ ಪ್ರಭುಗಳೂ, ಮುನ್ಸಬ್‌ದಾರರೂ, ಉಮ್ರಾವುಗಳೂ, ಸೇನಾಪತಿಗಳೂ ನಿಶ್ಶಬ್ದವಾಗಿ ನಿಂತಿದ್ದರು. ರಾಮಸಿಂಹನು ಶಿವಾಜಿಯ ವಿಷಯವನ್ನು ರಕ್ಷಕ ಭಟರಿಗೆ ತಿಳಿಯಪಡಿಸಿ, ಸಭಾಭವನಕ್ಕೆ ಪ್ರವೇಶಮಾಡಿದನು.

ಡಿಲ್ಲೀನಗರದ ವೈಭವವನ್ನು ನೋಡಿ ಶಿವಾಜಿಯು ಅನುಮಾನ ಪಡತೊಡಗಿದನು; ರಾಜಸಭೆಗೆ ಹೋದ ತರುವಾಯ ಚಕ್ರವರ್ತಿಯ ಉದ್ದೇಶವು ಅವನಿಗೆ ಸ್ಪಷ್ಟವಾಗಿ ತಿಳಿಯಿತು: ಇಪ್ಪತ್ತುವರುಷಗಳಕಾಲ ಯಾರು ಸ್ವಾತಂತ್ರ್ಯವನ್ನು ನಿಲ್ಲಿಸಿಕೊಳ್ಳುವುದಕ್ಕೆ ತನ್ನ ಸಂಗಡ ಯುದ್ಧಮಾಡಿ ಕೊನೆಗೆ ತನಗೆ ಅಧೀನನಾಗಿ ಬಹಳ ಸಹಾಯಮಾಡಿದನೋ, ಮಹಾರಾಷ್ಟ್ರದಿಂದ ಡಿಲ್ಲೀನಗರಕ್ಕೆ ತನ್ನನ್ನು ಯಾರು ನೋಡಲು ಬಂದಿರುವನೋ ಅಂಥವನನ್ನು ಚಕ್ರವರ್ತಿಯು ಯಾವರೀತಿಯಲ್ಲಿ ಸನ್ಮಾನಿಸಿದನು ! ಶಿವಾಜಿಯು ಸಾಮಾನ್ಯನಂತೆ ಸಭಾಭವನದಲ್ಲಿ ನಮ್ರನಾಗಿ ನಿಂತಿರುವನು ! ಅವನ ಮುಖದಲ್ಲಿ ಬೆಚ್ಚಗಿರುವ ಬೆವರು ಪ್ರವಹಿಸತೊಡಗಿತು. ಆದರೆ ಉಪಾಯವಿಲ್ಲ ;

ಸಾಧಾರಣ ಸೇವಕರಂತೆ ಸಮ್ರಾಟನಿಗೆ ಸಲಾಂಮಾಡಿ ಶಿವಾಜಿಯು ಪದ್ಧತಿಯಂತೆ ನಜರುಮಾಡಿದನು. ಔರಂಗಜೇಬನ ದುರುದ್ದೇಶವು ಸಫಲವಾಯಿತು—"ಸಭೆಯು ತಿಳಿದುಕೊಂಡಿತು; ಶಿವಾಜಿಯು ತಿಳಿದುಕೊಂಡನು. ಶಿವಾಜಿ—ಔರಂಗಜೇಬ ಇವರಿಬ್ಬರೂ ಸ್ಪರ್ಧಿಗಳಲ್ಲ. ದಾಸನು ಪ್ರಭುವಿನ ಸಂಗಡಲೂ, ದುರ್ಬಲನು ಬಲವಂತನ ಸಂಗಡಲೂ ಯುದ್ಧಮಾಡುವುದು ಹುಚ್ಚುತನ !

ಈ ಉದ್ದೇಶವನ್ನು ತೋರ್ಪಡಿಸುವುದಕ್ಕಾಗಿ ಚಕ್ರವರ್ತಿಯು ನಜರನ್ನು ಸ್ವೀಕರಿಸಿ ವಿಶೇಷ ಆದರವನ್ನು ತೋರಿಸದೆ, ಶಿವಾಜಿಗೆ "ಪಾಂಚಹಜಾರಿ" ಎಂದರೆ ಪಂಚಸಹಸ್ರ ಸೇನಾಪತಿಗಳ ನಡುವೆ ಕುಳ್ಳಿರಿಸಿದನು. ಆಗ ಕಣ್ಣುಗಳಲ್ಲಿ ಬೆಂಕಿಯ ಕೆಂಡಗಳು ಸುರಿಯುವಂತಿರಲು, ಶರೀರವು ಕ್ರೋಧದಿಂದ ನಡುಗುತ್ತಿರಲು, ಹಲ್ಲುಗಳನ್ನು ಕಡಿಯುತ್ತ ಶಿವಾಜಿಯು ಅಸ್ಫುಟಸ್ವರದಿಂದ—"ಏನು ! ಪಾಂಚ್‌ಹಜಾರಿ ! ಚಕ್ರವರ್ತಿಯು ಮಹಾರಾಷ್ಟ್ರಕ್ಕೆ ಬಂದಾಗ ಶಿವಾಜಿಯ ರಾಷ್ಟ್ರದಲ್ಲಿ ಎಷ್ಟು ಮಂದಿ ಪಾಂಚ್‌ಹಜಾರಿಗಳಿರುವರೋ ನೋಡಬಹುದು; ಮತ್ತು ಅವರು ದುರ್ಬಲರಲ್ಲವೆಂದು ಸಹಜವಾಗಿ ತಿಳಿಯಬಹುದು!" ಎಂದು ಹೇಳಿದನು.

ನಡೆಯಬೇಕಾದ ಕೆಲಸಗಳು ಮುಗಿದ ತರುವಾಯ ದರ್ಬಾರು ಮುಗಿಯಿತು. ಚಕ್ರವರ್ತಿಯು ಎದ್ದು ಪಕ್ಕದಲ್ಲಿ ಬೇಗಂಮಹಲಿಗೆ ಹೋದನು. ಆಗ ನದಿಯ ಪ್ರವಾಹದಂತೆ ಜನಪ್ರವಾಹವು ಹೊರಗೆ ಓಡಿಬಂದು ಅವರವರ ನಿವಾಸಗಳಿಗೆ ಹೊರಟು ಹೋದರು. ಸಮುದ್ರದಂತಹ ದಿಲ್ಲೀನಗರದಲ್ಲಿ ಜನಪ್ರವಾಹವು ಲೀನವಾಗಿ ಹೋಯಿತು.

ಶಿವಾಜಿಯ ವಾಸಕ್ಕಾಗಿ ಒಂದು ಮನೆಯು ನಿರ್ದೇಶಿಸಲ್ಪಟ್ಟಿತು. ಮಹಾರೋಷದಿಂದ ಅವನು ಸಾಯಂಕಾಲ ಆ ಮನೆಯಲ್ಲಿ ಒಬ್ಬನೇ ಏನನ್ನೋ ಚಿಂತಿಸುತ್ತ ಕುಳಿತನು.

ಸ್ವಲ್ಪಹೊತ್ತಿಗೆ ಚಕ್ರವರ್ತಿಯ ಅಪ್ಪಣೆಯು ಈ ರೀತಿಯಾಗಿ ಬಂದಿತು. "ಇಂದು ಸಾರ್ವಭೌಮನ ಇದಿರಿಗೆ ಕುಪಿತನಾಗಿ ಶಿವಾಜಿಯು ಹೇಳಿದ ಮಾತುಗಳು ಬಾದಶಹನಿಂದ ಕೇಳಲ್ಪಟ್ಟಿವೆ. ಆದರೆ ಚಕ್ರವರ್ತಿಯು ಶಿವಾಜಿಯನ್ನು ಶಿಕ್ಷಿಸಲು ಉದ್ದೇಶಿಸಿಲ್ಲ ಇನ್ನು ಮುಂದೆ ಮಹಾರಾಷ್ಟ್ರನಿಗೆ ಬಾದಶಹನ ದರ್ಶನವು ಆಗಲಾರದು."

ಮುಂದೆ ತನಗೆ ಅಪಾಯವಿರದೆಂದು ಶಿವಾಜಿಯು ಯೋಚಿಸಿದನು. ಬೇಟೆಗಾರನು ಸಿಂಹವನ್ನು ಹಿಡಿದುಕೊಳ್ಳುವದಕ್ಕೆ ಬಲೆಯನ್ನು ಹೆಣೆಯುವಂತೆ, ಕ್ರೂರನೂ ದುರ್ಬುದ್ಧಿಯವನೂ ಆದ ಚಕ್ರವರ್ತಿಯು ಶಿವಾಜಿಯನ್ನು ನಿರ್ಬಂಧದಲ್ಲಿಡುವುದಕ್ಕೆ ತಾಂತ್ರಿಕರನ್ನು ಪ್ರೇರೇಪಿಸುತ್ತಿದ್ದನು. ಶಿವಾಜಿಯು ತನ್ನ ಮನಸ್ಸಿನಲ್ಲಿ ಹೀಗೆಂದು ಯೋಚಿಸತೊಡಗಿದನು.— "ಈ ಬಲೆಯನ್ನು ಹರಿದು ಪುನಃ ಸ್ವತಂತ್ರನಾಗುವೆನೆ? ಹಾ! ಸೀತಾಪತಿ! ನಿನ್ನ ಉಪದೇಶವು ಎಷ್ಟು ಒಳ್ಳೆಯದು? ನಿನ್ನ ಅಮೋಘವಾದ ವಾಕ್ಯಗಳು ನನ್ನ ಕಿವಿಯಲ್ಲಿ ಈಗಲೂ ಮೊರೆಯುತ್ತಿವೆ. ಔರಂಗಜೇಬ್! ಜಾಗರೂಕನಾಗಿರು. ಇಷ್ಟು ಕಾಲವೂ ಶಿವಾಜಿಯು ನಿನ್ನ ಬಳಿ ಸರಿಯಾಗಿ ಪ್ರವರ್ತಿಸಿರುವನು. ಅವನ ಸಂಗಡ ಮೋಸಮಾಡುವುದನ್ನು ಕಟ್ಟಿಡು; ಏಕೆಂದರೆ, ಶಿವಾಜಿಯು ಆ ವಿದ್ಯೆಯಲ್ಲಿ ನಿನಗಿಂತ ಎರಡುಪುಸ್ತಕಗಳನ್ನು ಹೆಚ್ಚಾಗಿ ಓದಿರುವನು. ನೀನು ಮೋಸಮಾಡಿದರೆ ಭವಾನೀದೇವಿಯು ಕಾಪಾಡಲಿಕ್ಕೆ ಸಿದ್ಧಳಾಗಿರುವಳು! ಮಹಾರಾಷ್ಟ್ರದಲ್ಲಿ ಪ್ರಜ್ವಲಿಸುವ ಯುದ್ಧಾಗ್ನಿಯಲ್ಲಿ ನಿನ್ನ ಡಿಲ್ಲೀನಗರವೂ, ವಿಸ್ತೀರ್ಣ ಸಾಮ್ರಾಜ್ಯವೂ ಒಂದೇ ಸಾರಿಗೆ ದಗ್ಧವಾಗಿ ಹೋಗುವುದು!"

---

## ಹದಿನೇಳನೆಯ ಪ್ರಕರಣ.

---

(ಆಗಂತುಕ)

ಶಿವಾಜಿಯು ಇನ್ನು ಮಹಾರಾಷ್ಟ್ರದೇಶಕ್ಕೆ ಹೋಗಕೂಡದೆಂದು ಚಕ್ರವರ್ತಿಯ ಅಭಿಪ್ರಾಯ. ಅವನ ಕಪಟವರ್ತನೆಯನ್ನು ನೋಡಿ ಶಿವಾಜಿಯು ಕೋಪಗೊಂಡನು. ಆದರೂ, ರೋಷವನ್ನು ಅಡಗಿಸಿಕೊಂಡು ಡಿಲ್ಲಿಯಿಂದ ಹೊರಹೊರಡುವ ಉಪಾಯವನ್ನು ಆಲೋಚಿಸತೊಡಗಿದನು.

ರಘುನಾಥಪಂತ ನ್ಯಾಯಶಾಸ್ತ್ರಿಯು ನಾನಾವಿಧವಾಗಿ ಯೋಚಿಸತೊಡಗಿದನು. ಕೊನೆಗೆ ಚಕ್ರವರ್ತಿಯ ಅಂಗೀಕಾರವನ್ನು ಪಡೆಯುವುದು ಮೇಲೆಂದೂ, ಅವನು ಅನುಮತಿಕೊಡದ ಪಕ್ಷದಲ್ಲಿ ಮತ್ತೊಂದು ದಾರಿಯನ್ನು ಅವಲಂಬಿಸಬೇಕೆಂದೂ ಹೇಳಿದನು.

ನ್ಯಾಯಶಾಸ್ತ್ರಿಯು ವಿದ್ವಾಂಸನು; ವಾಚಾಳಿಯು; ಆತನು ರಾಜಸಭೆಗೆ ವಿಜ್ಞಾಪನಾ ಪತ್ರಿಕೆಯನ್ನು ತೆಗೆದುಕೊಂಡು ಹೋದನು. ಶಿವಾಜಿಯು ಚಕ್ರವರ್ತಿಗೆ ಮಾಡಿದ ಉಪಕಾರವೂ, ಅವನು ದೆಹಲಿಗೆ ಬಂದ ಕಾರಣವೂ, ಬಾದಶಹನು ಮಾಡಿದ ವಾಗ್ದಾನವೂ ಮೊದಲಾದ ಸಂಗತಿಗಳು ಅದರಲ್ಲಿ ವಿವರಿಸಲ್ಪಟ್ಟಿದ್ದುವು. ಅದರಲ್ಲಿ ಶಿವಾಜಿಯು ಈ ರೀತಿಯಾಗಿ ಔರಂಗಜೇಬನಿಗೆ ಬಿನ್ನವಿಸಿದನು;—"ನಾನು ಯಾವ ಕಾರ್ಯಗಳನ್ನು ಸಾಧಿಸುವೆನೆಂದು ಅಂಗೀಕರಿಸಿದೆನೊ, ಅವುಗಳನ್ನು ನಿರ್ವಹಿಸುವದಕ್ಕೆ ಈಗಲೂ ಸಿದ್ಧನಾಗಿರುವೆನು. ಬಿಜಾಪುರ, ಗೋಲ್ಕೊಂಡ ರಾಜ್ಯಗಳನ್ನು ಸ್ವಾಮಿಯವರಿಗೆ ಸ್ವಾಧೀನವಾಗಿರುವಂತೆ ಪ್ರಯತ್ನಿಸುವೆನು. ಪ್ರಭುಗಳಿಗೆ ನನ್ನ ಸಹಾಯವು ಆವಶ್ಯವಿಲ್ಲದಿದ್ದರೆ, ಅಪ್ಪಣೆಕೊಡಿರಿ; ನನ್ನ ಜಹಗೀರಿಗೆ ಹೊರಟು ಹೋಗುವೆನು. ಇಲ್ಲಿಯ ಹವಾ—ನೀರು ನನಗೂ ನನ್ನ ಸೇನೆಗೂ ಎಷ್ಟುಮಾತ್ರವೂ ಸರಿಪಡಲಿಲ್ಲ. ಆದುದರಿಂದ ನಾವು ಇಲ್ಲಿ ಇರುವುದು ಒಳ್ಳೆಯದಲ್ಲ."

ಚಕ್ರವರ್ತಿಯು ಪ್ರತ್ಯುತ್ತರವನ್ನು ಕಳುಹಿಸಿದನು; ಆದರೆ ಅದರಲ್ಲಿ ವಿವಿಧ ವಿಷಯಗಳಿದ್ದರೂ, ಮಹಾರಾಷ್ಟ್ರವೀರನು ಸ್ವದೇಶಕ್ಕೆ ಹಿಂತಿರುಗಿ ಹೋಗುವ ಮಾತೇ ಇಲ್ಲ! ತುರುಷ್ಕನ ಉದ್ದೇಶವು ಸ್ಪಷ್ಟವಾಯಿತು. ಅಂದಿನಿಂದಲೂ ಶಿವಾಜಿಯು ಓಡಿಹೋಗಲು ಪ್ರಯತ್ನಿಸಿದನು.

ಒಂದು ದಿನ ಸಾಯಂಕಾಲ ಶಿವಾಜಿಯು ಚಿಂತಾಮಗ್ನನಾಗಿ ಗವಾಕ್ಷಿಯ ಪಕ್ಕದಲ್ಲಿ ಕುಳಿತಿದ್ದನು. ಸೂರ್ಯನು ಅಸ್ತಮಿಸಿದನು. ರಾಜಮಾರ್ಗದಲ್ಲಿ ಜನ ಸಮೂಹವು ವಿರಾಮವಿಲ್ಲದೆ ತಿರುಗಾಡುತ್ತಿದ್ದಿತು. ಹಿಂದುಗಳೂ, ಮೊಗಲರೂ ಅಫ್ಘನ್ನರೂ, ತಾರ್ತರರೂ, ತುರುಕರೂ, ಪಾರಸೀಕರೂ, ಅರಬ್ಬಿಯವರೂ, ಸಿದ್ಧಿಯವರೂ ಮೊದಲಾದ ವಿವಿಧಜಾತಿಯವರು ಹೋಗುತ್ತಿದ್ದರು. ರಾಜರೂ, ಉಮ್ರಾಗಳೂ ಮನ್ಸಬದಾರರೂ ವರ್ತಕರೂ, ಯಾತ್ರಿಕರೂ, ಸೈನಿಕರೂ, ಅಂತಃಪುರದವರೂ ಹೋಗುತ್ತಿದ್ದರು.

ಕ್ರಮಕ್ರಮವಾಗಿ ಜನಸಂಚಾರವು ಕಡಿಮೆಯಾಗುತ್ತ ಬಂದಿತು. ಅಂಗಡಿಯವರು ತಮ್ಮ ವ್ಯಾಪಾರವನ್ನು ನಿಲ್ಲಿಸಿ, ಬಾಗಿಲುಗಳನ್ನು ಮುಚ್ಚತೊಡಗಿದರು. ನಗರದ ಗದ್ದಲವು ಕ್ರಮವಾಗಿ ತಗ್ಗಿಹೋಯಿತು. ಮನೆಗಳಿಂದ ದೀಪದಕಾಂತಿಯು

ಕಾಣಿಸಿತು. ಆಕಾಶದಲ್ಲಿ ನಕ್ಷತ್ರಗಳು ಮಿಣುಗುತ್ತಿದ್ದುವು. ಯಮುನಾ ನದಿಯು ಶಾಂತವಾಗಿ ಪ್ರವಹಿಸುತ್ತಿದ್ದಿತು.

ಅಷ್ಟರೊಳಗೆ ಜುಮ್ಮಾಮಸೀದಿಯಿಂದ ನಮಾಜುಮಾಡುವ ಧ್ವನಿಯು ಕೇಳಬಂದಿತು. ಆ ಮಸೀದಿಯ ಶಿಖರಗಳು ನೀಲಾಂಬರ ಪಟಗಳಿಂದ ಸ್ಪಷ್ಟವಾಗಿ ಕಾಣಿಸುತ್ತಿದ್ದುವು. ಅದರ ಸುತ್ತಲೂ ಇರುವ ಗೋಡೆಗಳು ಪರ್ವತಶ್ರೇಣಿಯಂತೆ ಅಸ್ಫುಟವಾಗಿ ಕಾಣುತ್ತಿದ್ದವು. ಉಳಿದ ನಗರಂಭಾಗವು ಕತ್ತಲೆಯಾಗಿದ್ದಿತು.

ಇನ್ನೂ ಸ್ವಲ್ಪ ಹೊತ್ತಿದ್ದಿತು. ಶಿವಾಜಿಯ ಚಿಂತಾತಂತುವು ಇನ್ನೂ ಭಿನ್ನವಾಗಿರಲಿಲ್ಲ. ಹಿಂದಿನ ವೃತ್ತಾಂತವು ಅವನ ಮಾನಸ ಚಕ್ಷುವಿಗೆ ಗೋಚರವಾಗತೊಡಗಿತು; ಬಾಲ್ಯಸ್ನೇಹಿತರೂ ಅಪೇಕ್ಷೆಗಳೂ, ಪ್ರಯತ್ನಗಳೂ ; ಅನಂತರ ದುರ್ಗವಿಜಯವೂ ತಂದೆಯೂ ದಾದಾಜಿಯೂ ನೆನಪಿಗೆ ಬಂತು ; ಬಾಲ್ಯದಲ್ಲಿ ವೀರರ ಚರಿತ್ರೆಗಳನ್ನು ಹೇಳಿ ಯೌವನದಲ್ಲಿ ಸಾಹಸವನ್ನು ಉಂಟುಮಾಡಿ, ವಿಪತ್ಸಮಯಗಳಲ್ಲಿ ಧೈರ್ಯಹೇಳಿ ಯುದ್ಧಕಾಲದಲ್ಲಿ ಉತ್ಸಾಹವನ್ನು ಉಂಟುಮಾಡಿದ ತಾಯಿಯು ಅವನ ಜ್ಞಾಪಕಕ್ಕೆ ಬಂದಳು. ಅನಂತರ ಯೌವನಕಾಲದ ಪ್ರಯತ್ನಗಳೂ, ದುರ್ಗವಿಜಯವೂ, ದೇಶವಿಜಯವೂ, ಆಪತ್ತಿನವೇಳೆ ಆಪತ್ತುಗಳೂ, ಯುದ್ಧಗಳೂ ದೋರ್ದಂಡಪ್ರತಾಪವೂ ಸ್ಮೃತಿಗೆ ಬಂದುವು. ಯೋಚಿಸಿ ನೋಡಲು ಕಳೆದ ಇಪ್ಪತ್ತುವರುಷಗಳಲ್ಲಿ ಅಪೂರ್ವವಿಜಯಗಳಿಂದಲೂ ಸಾಹಸ ಕಾರ್ಯಗಳಿಂದಲೂ, ಭೀಕರ ಯುದ್ಧಗಳಿಂದಲೂ ಅಂಕಿತವಾಗದ ವರ್ಷವು ಇಲ್ಲದಿದ್ದಿತು! ಇದೆಲ್ಲವೂ ಸ್ಮೃತಿಪಥದಲ್ಲಿ ಕಾಣಿಸಿಕೊಂಡ ಬಳಿಕ ಸದ್ಯಃಸ್ಥಿತಿಯ ವಿಚಾರವು ಹೃದ್ಗತವಾಯಿತು:- "ಮುಸಲ್ಮಾನರ ಸಾಮ್ರಾಜ್ಯವು ಅಂತರಿಸುವುದೆ? ಭಾರತೀಯ ಸಾರ್ವಭೌಮನ ಮಸ್ತಕದಮೇಲೆ ಪುನಃ ಶ್ವೇತಚ್ಛತ್ರವು ತೂಗಾಡುವುದೆ?" ಎಂದು ಶಿವಾಜಿಯು ಚಿಂತಿಸುತ್ತಿರಲು, ಘಂಟಾಧ್ವನಿಯು ಕಿವಿಗೆ ಬಿದ್ದಿತು. ಆ ನಾದವು ದುರ್ಗದಲ್ಲಿರುವ 'ನಗಾರ್‌ಖಾನಾ' ದಿಂದ ಹೊರಟು ವಾಯುಪಥದಲ್ಲಿ ವ್ಯಾಪಿಸಿತು. ನಗರವು ನಿಶ್ಶಬ್ದವಾಗಿರುವುದರಿಂದ ಬಹುದೂರ ಕೇಳಿಸಿತು. ಜನಗಳ ಸದ್ದು ಅಡಗುವುದಕ್ಕೆ ಮೊದಲೇ ಕಿಟಕಿಯ ಬಾಗಿಲನ್ನು ಥಟ್ಟನೆ ತೆರೆದುಕೊಂಡು ಓರ್ವನು ಮನೆಯಲ್ಲಿ ಪ್ರವೇಶಿಸಿದನು.

ಶಿವಾಜಿಯು ಬಾಗಿಲನ್ನು ಅರ್ಧತೆರೆದು ನೋಡಿದನು. ಆಗಂತುಕನು ಲೆಕ್ಕಿಸದೆ ಒಳಕ್ಕೆ ಬಂದೇಬಿಟ್ಟನು.

ವ್ಯಕ್ತಿಯ ತಲೆಯ ತುಂಬ ಜಡೆಗಳೂ, ಶರೀರದಲ್ಲೆಲ್ಲಾ ಭಸ್ಮವೂ ಇದ್ದಿತು ಅವನ ಕೈಯಲ್ಲಿ ಯಾವ ಆಯುಧವೂ ಇಲ್ಲ. ಹಾಗಾದರೆ ಅವನು ಶತ್ರುವಾಗಿ ಕಾಣಲಿಲ್ಲ. ಮತ್ತಾರು ?

ಕತ್ತಲೆಯಲ್ಲಿ ಕೂಡ ಶಿವಾಜಿಯನ್ನು ನೋಡಿ ಆತನು, "ಮಹಾರಾಜನಿಗೆ ಜಯವಾಗಲಿ" ಎಂದು ಹೇಳಿದನು. ಅಂಧಕಾರದಲ್ಲಿ ಶಿವಾಜಿಯು ಅವನನ್ನು ಗುರ್ತಿಸಲಾರದೆ ಹೋದರೂ, ಧ್ವನಿಮಾತ್ರದಿಂದ ಅವನನ್ನು ಕಂಡುಹಿಡಿದನು. ಲೋಕದಲ್ಲಿ ವಿಶ್ವಾಸಕ್ಕಾಗಿ ಬರುವ ಮಿತ್ರರು ಬಹಳ ಅಪೂರ್ವ. ಅದರಲ್ಲಿಯೂ ಕಷ್ಟಕ್ಕೆ ಸಿಲುಕಿರುವ ವೇಳೆ, ಇಂತಹ ಮಿತ್ರರು ದೊರೆತರೆ ಹೃದಯವು ತಾಂಡವವಾಡುವುದು. ಶಿವಾಜಿಯು ಸೀತಾಪತಿಗೆ ನಮಸ್ಕರಿಸಿ, ಆತನನ್ನು ಆಲಿಂಗಿಸಿಕೊಂಡನು. ತರುವಾಯ ಒಂದು ದೀಪವನ್ನು ಹತ್ತಿಸಿ, ಆತನನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿ, ಆತುರದಿಂದ ಹೀಗೆಂದನು:-ಮಿತ್ರಶ್ರೇಷ್ಠ ! ರಾಜಗಡದ ಸಮಾಚಾರವೇನು? ನೀವು ಎಂದು ಅಲ್ಲಿಂದ ಬಂದಿರಿ ? ಯಾವ ಕೆಲಸದಿಂದ ಇಷ್ಟು ದೂರ ಬಂದಿರುವಿರಿ ? ಅರ್ಧರಾತ್ರಿಯಲ್ಲಿ ಕಿಟಕಿಯ ಮೂಲಕ ನನ್ನ ಹತ್ತಿರಕ್ಕೆ ಬರಲು ಕಾರಣವೇನು ?

ಸೀತಾ—ಮಹಾರಾಜಾ ! ರಾಜಗಡದಲ್ಲಿ ಎಲ್ಲವೂ ಸರಿಯಾಗಿದೆ. ಆದರೆ ಮಹಾರಾಜರ ಸಂಗತಿಯು ಹೆಚ್ಚಾಗಿ ತಿಳಿಯದು. ತಾವು ದೇಶವನ್ನು ಬಿಟ್ಟತರುವಾಯ ನಾನು ಕೂಡ ಅಲ್ಲಿ ಬಹುದಿನಗಳಿರಲಿಲ್ಲ. ತೀರ್ಥಯಾತ್ರೆಯನ್ನು ಮಾಡಿಕೊಂಡು ಬರಲು ಹೊರಡುವೆನೆಂದು ತಮಗೆ ಹಿಂದೆಯೇ ಹೇಳಿದ್ದೆನಲ್ಲವೆ ? ಮಥುರೆ ಮೊದಲಾದ ಪುಣ್ಯಸ್ಥಳಗಳನ್ನು ಸಂದರ್ಶಿಸಿ, ತರುವಾಯ ದಿಲ್ಲೀನಗರಕ್ಕೆ ಬಂದೆನು. ತಮ್ಮ ದರ್ಶನವನ್ನು ಮಾಡಿದಾಗಲೇ ನನಗೆ ಶುಭಸಮಯವು. ಹಗಲಾದರೇನು ? ರಾತ್ರಿಯಾದರೇನು ?

ಶಿವಾಜಿ—ಆದರೆ, ಯಾವುದೋ ವಿಶೇಷ ಕಾರಣವಿರಬಹುದು. ಆದುದರಿಂದಲೇ ಕತ್ತಲೆಯ ವೇಳೆಯಲ್ಲಿ ಕಿಟಕಿಯ ಮೂಲಕ ದಯಮಾಡಿಸಿದಿರಿ. ಅನುಗ್ರಹಿಸಿ, ಕಾರಣವೇನೋ ತಿಳಿಸಿರಿ.

ಸೀತಾ—ವಿಜ್ಞಾಪಿಸುವೆನು. ಆದರೆ, ಮೊದಲು ಒಂದು ವಿಷಯವನ್ನು ಕೇಳಬೇಕಾಗಿದೆ. ಇಲ್ಲಿಗೆ ಬಂದುದು ಮೊದಲು ಪ್ರಭುಗಳಿಗೆ ಸುಖವೆ ?

ಶಿವಾಜಿ—ಶತ್ರುಗಳ ಮಧ್ಯದಲ್ಲಿ ನಮ್ಮ ಕ್ಷೇಮಲಾಭವು ಎಷ್ಟು ದಿನ ನಿಂತಿರುವುದು ?

ಸೀತಾ—ಚಕ್ರವರ್ತಿಯು ನಮ್ಮ ಸಂಗಡ ಸಂಧಿಮಾಡಿಕೊಂಡಿರಲು, ಶತ್ರುಗಳೆಲ್ಲಿ ?

ಶಿವಾಜಿ—ಹಾವಿಗೂ, ಕಪ್ಪೆಗೂ ಸಂಧಿ ಎಷ್ಟು ಕಾಲವಿರುವುದು ! ಸೀತಾಪತೀ ! ಎಲ್ಲಾ ವರ್ತಮಾನವನ್ನು ತಿಳಿದುಕೊಂಡು, ನನ್ನನ್ನು ಕೇಳುತ್ತಿರುವಿರಿ. ರಾಜಗಡದುರ್ಗದಲ್ಲಿ ನಿಮ್ಮ ಹಿತೋಪದೇಶವನ್ನು ಅನುಸರಿಸಿದ್ದ ಪಕ್ಷದಲ್ಲಿ ಈಗಲೂ ಕೊಂಕಣಪ್ರಾಂತದಲ್ಲಿ ಸ್ವತಂತ್ರನಾಗಿರುತ್ತಿದ್ದೆನು. ಆದರೆ, ವಂಚಕನ ಮಾತನ್ನು ನಂಬಿ ಬಂದು ಡಿಲ್ಲೀನಗರದಲ್ಲಿ ಬಂದಿಯಾಗಿರುವೆನಲ್ಲ !

ಸೀತಾ—ತಾವು ಆತ್ಮತಿರಸ್ಕಾರವನ್ನು ಮಾಡಿಕೊಳ್ಳಬೇಡಿರಿ. ಮನುಷ್ಯಸಾಮಾನ್ಯವೇ ಭ್ರಾಂತಿಪಡುತ್ತಿರುವುದು. ಜಗತ್ತೇ ಮಿಥ್ಯವಲ್ಲವೆ ? ಆ ವಿಷಯದಲ್ಲಿ ತಮ್ಮ ದೋಷವು ಎಷ್ಟುಮಾತ್ರವೂ ಇಲ್ಲ. ಸಂಧಿಮಾತುಗಳನ್ನು ನಂಬಿ ತಾವು ಇಲ್ಲಿಗೆ ಬಂದಿರಿ. ವಿಶ್ವಾಸಘಾತಕನಾದ ಆ ಧೂರ್ತನನ್ನು ಭಗವಂತನು ತಪ್ಪದೆ ಶಿಕ್ಷಿಸುವನು. ದೇವಾ ! ಅಧರ್ಮಕ್ಕೆ ಜಯವುಂಟಾಗದು. ಈಗ ನಿಮ್ಮನ್ನು ಬಂದಿಯಾಗಿ ಮಾಡಿದ ಪಾಪದಿಂದ ಚಕ್ರವರ್ತಿಯು ಸಪರಿವಾರ ನಾಶವಾಗುವನು. ಮಹಾರಾಜಾ ! ರಾಜಗಡದಲ್ಲಿ ತಾವು ಹೇಳಿದ ಮಾತುಗಳನ್ನು ಮಹಾರಾಷ್ಟ್ರದಲ್ಲಿ ಈಗಲೂ ಯಾರೂ ಮರೆತಿಲ್ಲ. ಔರಂಗಜೇಬನು ಅಕ್ರಮಕಾರ್ಯಗಳನ್ನು ಮಾಡಿದರೆ ಮಹಾರಾಷ್ಟ್ರದಲ್ಲಿ ಪ್ರಜ್ವಲಿಸುವ ಯುದ್ಧಾಗ್ನಿಯಲ್ಲಿ ಮೊಗಲ್ ಸಾಮ್ರಾಜ್ಯವು ದಗ್ಧವಾಗಿ ಹೋಗುವುದು !

ಉತ್ಸಾಹದಿಂದ ಕಣ್ಣುಗಳು ಪ್ರಕಾಶಹೊಂದಲು, ಶಿವಾಜಿಯು ಹೀಗೆಂದನು. "ಸೀತಾಪತೀ ! ಆ ನಂಬಿಕೆಯು ಇನ್ನೂ ಹೋಗಿಲ್ಲ. ನಮ್ಮವರ ಬಲವನ್ನು ಅವನು ನೋಡಿರುವನು. ಆದರೆ, ಅಯ್ಯೋ ! ನಮ್ಮ ಸುಭಟರಿಗೂ ಮೊಗಲ್ ಸೈನಿಕರಿಗೂ ಯುದ್ಧವಾಗುತ್ತಿರಲು, ನಾನು ದೂರ ಪ್ರದೇಶದಲ್ಲಿ ಸೆರೆಮನೆಯಲ್ಲಿರಲೆ ?"

ಸೀತಾ—ಚಕ್ರವರ್ತಿಯು ಸರ್ವತೋಮುಖವಾದ ವಾಯುವನ್ನು ತನ್ನ ಬಲೆಯಲ್ಲಿ ಕಟ್ಟಿ ಹಿಡಿದುಕೊಂಡಿರಲು ಶಕ್ತನಾದಾಗ, ತಮ್ಮನ್ನು ಡಿಲ್ಲೀಪ್ರಾಕಾರದ ನಡುವೆ ಬಂದಿಯಾಗಿಡಬಲ್ಲನು ; ಅದಕ್ಕೆ ಮೊದಲು ಅವಕಾಶವಿರದು.

ಶಿವಾಜಿ—(ಮೆಲ್ಲನೆ) ಆದರೆ ತಲೆತಪ್ಪಿಸಿಕೊಂಡು ಹೋಗುವುದಕ್ಕೆ ಉಪಾಯವನ್ನು ಕಂಡು ಹಿಡಿರಿ. ಅದನ್ನು ನನಗೆ ತಿಳಿಸುವುದಕ್ಕೆ ಗುಪ್ತವಾಗಿ ಈ ರಾತ್ರಿಯ ವೇಳೆ ಇಲ್ಲಿಗೆ ಬರಬಹುದೆಂದು ನಂಬುವೆನು!

ಸೀತಾ—ತಮ್ಮದು ತೀಕ್ಷ್ಣ ಬುದ್ಧಿ. ಯಾವುದನ್ನಾದರೂ ತಮಗೆ ತಿಳಿಸದೆ ಮರೆಮಾಚುವುದು ದುಶ್ಶಕ್ಯ.

ಶಿವಾಜಿ—ಆ ಉಪಾಯವೇನು ?

ಸೀತಾ—ಛದ್ಮವೇಷವನ್ನು ಧರಿಸಿ, ಕತ್ತಲೆಯಲ್ಲಿ ತಾವು ಅನಾಯಾಸವಾಗಿ ಈ ಮನೆಯಿಂದ ಹೋಗಬಹುದು. ನಗರದ ಪ್ರಾಕಾರದ ಪೂರ್ವದಿಕ್ಕಿನಲ್ಲಿ ಕಬ್ಬಿಣದ ಶಂತಿಯೊಂದಿರುವುದು ; ಅದನ್ನು ಒಗ್ಗಿಸಿ, ಗೋಡೆಯನ್ನು ದಾಟುವುದು ಮಹಾರಾಷ್ಟ್ರವೀರನಿಗೆ ಅಸಾಧ್ಯವಲ್ಲ. ಪಕ್ಕದಲ್ಲಿ ಯಮುನಾನದಿ. ಅದರಲ್ಲಿ ಒಂದು ದೋಣಿಯು ಸಿದ್ಧವಾಗಿ ನಿಂತಿರುವುದು. ಎಂಟುಜನ ನಾವಿಕರೂ ಸಿದ್ಧರಾಗಿರುವರು. ಕೆಲವು ನಿಮಿಷಗಳಲ್ಲಿ ತಾವು ಮಧುರೆಯನ್ನು ಸೇರಬಹುದು ಅಲ್ಲಿ ತಮಗೆ ಅನೇಕ ಮಿತ್ರರಿರುವರು. ಅಲ್ಲಿಂದ ಸುರಕ್ಷಿತವಾಗಿ ಮಹಾರಾಜರು ಸ್ವದೇಶಕ್ಕೆ ಹೋಗ ಒಲ್ಲರು.

ಶಿವಾಜಿ—ನೀವು ಮಾಡಿದ ಏರ್ಪಾಡುಗಳಿಗೆ ಸಂತೋಷಿಸಿದೆನು. ಈಗಿನ ಕಾಲಕ್ಕೆ ತಾನೇ ಬಂಧುಗಳು. ಆದರೆ, ಗೋಡೆಯಿಂದ ಧುಮುಕುವಾಗ ಯಾರಾದರೂ ನನ್ನನ್ನು ನೋಡಿದ ಪಕ್ಷದಲ್ಲಿ ಓಡಿಹೋಗುವುದು ಕಷ್ಟವಾಗುವುದು. ಔರಂಗಜೇಬನ ಕೈಯಲ್ಲಿ ನನಗೆ ಮರಣವುತಪ್ಪದು.

ಸೀತಾ—ಸಮೀಪದಲ್ಲಿ ಹತ್ತುಮಂದಿ ಸೈನಿಕರು ಛದ್ಮವೇಷದಿಂದ ಅಡಗಿರುವರು. ಯಾರಾದರೂ ಶತ್ರುಗಳು ಪ್ರಭುಗಳ ಸುಳಿವನ್ನು ಕಂಡುಹಿಡಿದರೆ, ಅಥವಾ ಅಡ್ಡಿಮಾಡಿದರೆ ಅವರಿಗೂ ಮರಣವುತಪ್ಪದು.

ಶಿವಾಜಿ—ಒಳ್ಳೆಯದು. ನಾವೆಯು ಹತ್ತಿರ ಹೋದಾಗ, ನದೀತೀರದಲ್ಲಿ ಅಂಬಿಗನು ಸಂಶಯಹೊಂದಿ ನಾವೆಯಲ್ಲಿ ಕುಳ್ಳಿರಿಸಿಕೊಳ್ಳದಿದ್ದರೋ ?

ಸೀತಾ—ಅಲ್ಲಿರುವವರು ಕೂಡ ತಮ್ಮ ಸೈನಿಕರೇ ; ಅವರು ಅಂಗಿಗಳನ್ನು ತೆಟ್ಟಿರುವರು. ನಾವೆಯನ್ನು ಯಾರೂ ಅಡ್ಡಿ ಮಾಡರು !

ಶಿವಾಜಿ—ಮಧುರಾನಗರವನ್ನು ಸೇರಿದಮೇಲೆ ಮಿತ್ರರು ಸಿಕ್ಕದಿದ್ದಪಕ್ಷದಲ್ಲಿ ?

ಸೀತಾ—ತಮ್ಮ ಪೇಷ್ವೆಯ ಭಾವಮೈದುನನು ಮಧುರೆಯಲ್ಲಿರುವನು. ಅವನು ನಂಬುಗೆಗೆ ಅರ್ಹನು. ತಾವು ಅವನನ್ನು ನೋಡಿರಬಹುದೆಂದು ತಿಳಿಯುತ್ತೇನೆ. ಅಲ್ಲಿ ಎಲ್ಲವೂ ಸಿದ್ಧವಾಗಿದೆ. ಅವನು ಬರೆದ ಪತ್ರವು ಇದೇ !"

ಎಂದು ಗೋಸಾಯಿಯು ತನ್ನ ಬಟ್ಟೆಯಕೊನೆಯಲ್ಲಿ ಕಟ್ಟಿದ್ದ ಪತ್ರವನ್ನು ಬಿಚ್ಚಿ ಶಿವಾಜಿಗೆ ಒಪ್ಪಿಸಿದನು. ಅವನು ಕಿರುನಗೆಯಿಂದ ಪುನಃ ಸೀತಾಪತಿಗೆ ಕೊಟ್ಟು—"ಓದಿರಿ" ಎಂದು ಹೇಳಿದನು. ಗೋಸಾಯಿಯು ಪತ್ರವನ್ನು ಓದಿದನು.

ಶಿವಾಜಿ—ಗೋಸಾಯಿಜಾ! ತಾವು ಪರೋಪಕಾರಗಳಲ್ಲಿಯೇ ಜೀವಿತವನ್ನು ವಿನಿಯೋಗಿಸುತ್ತಿರುವಿರೆಂದು ನಾನು ಇದುವರೆಗೆ ನಂಬಿರಲಿಲ್ಲ. ನನ್ನ ಮಂತ್ರಿಗಳು ಕೂಡ ತಮ್ಮಷ್ಟು ಉಪಾಯಗಾರರಲ್ಲ. ಆದರೂ ನನ್ನ ಮನಸ್ಸು ಸಂದೇಹಗೊಳ್ಳುತ್ತಿದೆ; ನಾನು ತಪ್ಪಿಸಿಕೊಳ್ಳುವೆನೆನ್ನಿರಿ; ನನ್ನ ಮಗನೂ, ಮಂತ್ರಿಯಾದ ರಘುನಾಥಪಂತ ನ್ಯಾಯಶಾಸ್ತ್ರಿಯೂ, ಪ್ರಿಯಮಿತ್ರನಾದ ತಾನಾಜಿಯೂ—ಇವರು ಹೇಗೆ ತಪ್ಪಿಸಿಕೊಂಡು ಬರುವರು? ನನ್ನ ಸೈನಿಕರು ಔರಂಗಜೇಬನ ಕೋಪಾಗ್ನಿಯಿಂದ ಹೇಗೆ ತಪ್ಪಿಸಿಕೊಳ್ಳುವರು?

ಸೀತಾ—ತಮ್ಮ ಮಗನೂ, ಪ್ರಿಯಮಿತ್ರನೂ, ಮಂತ್ರಿಯೂ ಈ ಮೂವರೂ ತಮ್ಮ ಹಿಂದೆಯೇ ಹಿಂದಿನ ರಾತ್ರಿ ಹೊರಟು ಬಿಡಬೇಕು. ಸೈನಿಕರು ಡಿಲ್ಲಿಯಲ್ಲಿದ್ದರೂ ನಷ್ಟವಿಲ್ಲ. ಔರಂಗಜೇಬನು ಅವರಿಗೆ ಹಿಂಸೆಮಾಡನು; ನಿಜವಾಗಿಯೂ ಬಿಟ್ಟೇ ಬಿಡುವನು!

ಶಿವಾಜಿ—ಆರ್ಯ! ತಾವು ಅವನ ವಿಷಯವನ್ನು ತಿಳಿದಿಲ್ಲ. ಅಣ್ಣ ತಮ್ಮಂದಿರನ್ನು ಕೊಲ್ಲಿಸಿ, ಸಿಂಹಾಸನವನ್ನು ಹತ್ತಿರುವನು!

ಸೀತಾ—ಒಂದುವೇಳೆ, ಚಕ್ರವರ್ತಿಯು ನಮ್ಮ ಸೈನಿಕರಿಗೆ ಕಠಿಣಶಿಕ್ಷೆ ವಿಧಿಸಿದರೂ ತಾವು ಸಂರಕ್ಷಿತರಾಗಿರುವಿರೆಂಬ ವರ್ತಮಾನವನ್ನು ಕೇಳಿದಪಕ್ಷದಲ್ಲಿ ಸಾನಂದವಾಗಿ ಪ್ರಾಣವನ್ನು ಅರ್ಪಿಸದ ಮಹಾರಾಷ್ಟ್ರನಿರುವನೆ?

ಶಿವಾಜಿ—(ಚಿಂತಿಸಿ) ಮಹಾತ್ಮಾ! ನಾನು ನಿಮಗೆ ವಿಧೇಯನು! ಆದರೆ, ವಿಶ್ವಾಸಯೋಗ್ಯರಾದ ಸೇವಕರನ್ನು ವಿಪತ್ತಿನಲ್ಲಿ ಸಿಕ್ಕಿಸಿ ನಾನು ಮಾತ್ರ ಕ್ಷೇಮವಾಗಿದ್ದರೆ ಲಾಭವೇನು? ಅಂತಹ ಕೆಲಸವನ್ನು ಎಂದಿಗೂ ಮಾಡೆನು. ಉಪಾಯಾಂತರವನ್ನು ಆಲೋಚಿಸಿರಿ. ಇಲ್ಲದಿದ್ದರೆ ನಿಮ್ಮ ಪ್ರಯತ್ನವು ವ್ಯರ್ಥವಾಗುವುದು.

ಸೀತಾ—ಬೇರೊಂದು ಉಪಾಯವಿಲ್ಲ.

ಶಿವಾಜಿ—ಹಾಗಾದರೆ ಕೆಲವು ದಿನಗಳನ್ನು ಇಲ್ಲಿ ಕಳೆಯಬೇಕು. ಶಿವಾಜಿಗೆ ಇದೇನೂ ಮೊದಲನೆಯ ತೊಂದರೆಯಲ್ಲ! ಉಪಾಯವನ್ನು ಹುಡುಕುವುದರಲ್ಲಿ ಶಿವಾಜಿಯು ಕಡಮೆಯಾದವನಲ್ಲ!

ಸೀತಾ—ಕಾಲವಿಳಂಬವು ಒಳ್ಳೆಯದಲ್ಲ. ಈ ರಾತ್ರಿ ಪಲಾಯನಮಾಡುವುದಕ್ಕೆ ಅನುಕೂಲವಾಗಿದೆ. ನಾಳಿನಮಾತು ಹೇಗಿರುವುದೊ ?

ಶಿವಾಜಿ—ಕ್ಷಮಿಸಬೇಕು. ನಿಮ್ಮ ಮಾತು ಯುಕ್ತವಾದುದು. ಆದರೆ ಆಶ್ರಿತರನ್ನು ಸಂಕಟದಲ್ಲಿ ಸಿಲ್ಕಿಸಿ, ಶಿವಾಜಿಯು ತನ್ನ ಆತ್ಮವನ್ನು ಮಾತ್ರ ಸಂರಕ್ಷಿಸಿಕೊಳ್ಳುವವನಲ್ಲ. ಆರೀತಿ ಪ್ರವರ್ತಿಸುವುದು ಕ್ಷತ್ರಿಯ ಧರ್ಮವಲ್ಲ.

ಸೀತಾ—ದೇವಾ ! ವಿಶ್ವಾಸಘಾತಕರನ್ನು ಶಿಕ್ಷಿಸುವುದು ಕ್ಷತ್ರಿಯ ಧರ್ಮ. ಆದುದರಿಂದ ಮಹಮ್ಮದೀಯರಿಗೆ ತಕ್ಕ ಶಿಕ್ಷೆಯನ್ನು ಮಾಡಿರಿ.

ಶಿವಾಜಿ—ದುರ್ಮಾರ್ಗಿಗಳನ್ನು ಭಗವಂತನೇ ಶಿಕ್ಷಿಸುವನು. ಅದಕ್ಕೆ ಕಾಲವನ್ನು ನಿರೀಕ್ಷಿಸಬೇಕಾಗಿಲ್ಲ.

ಸೀತಾ—ದೇವಾ ! ಚೆನ್ನಾಗಿ ಯೋಚಿಸಿ ನೋಡಿ ! ನಾಳೆ ವಿಮರ್ಶಿಸಲು ಅವಕಾಶವಿರದು, ಸೆರೆಮನೆಯಲ್ಲಿರುವಿರಿ.

ಶಿವಾಜಿ—ಆಗಲಿ, ಆಶ್ರಿತರನ್ನು ಬಿಡುವುದಕ್ಕೆ ಅವಕಾಶವಿಲ್ಲ. ಶಿವಾಜಿಯ ಪ್ರತಿಜ್ಞೆಯು ದೃಢವಾದುದು !

ಸೀತಾಪತಿಯು ಸುಮ್ಮನಿದ್ದನು. ಅವನ ಕಣ್ಣುಗಳಲ್ಲಿ ಸುರಿಯುತ್ತಿದ್ದ ಆನಂದಬಾಷ್ಪವನ್ನು ನೋಡಿ, ಶಿವಾಜಿಯು ಗೋಸಾಯಿಯ ಹಸ್ತವನ್ನು ಸ್ನೇಹಪೂರ್ವಕವಾಗಿ ಹಿಡಿದುಕೊಂಡು “ ಆರ್ಯಾ ! ಕ್ಷಮಿಸಿರಿ. ನಿಮಗೆ ನನ್ನಲ್ಲಿರುವ ಅನುರಾಗವೂ, ನೀವು ನನಗಾಗಿ ಪಟ್ಟಿರುವ ಕಷ್ಟವೂ ಮರೆಯದಂತಿದೆ. ರಾಜಗಡದಲ್ಲಿ ನೀವು ಕೊಟ್ಟ ಉಪದೇಶವೂ, ದಿಲ್ಲಿಯಲ್ಲಿ ನೀವು ಮಾಡಿದ ಪ್ರಯತ್ನವೂ, ನನ್ನ ಹೃದಯದಲ್ಲಿ ದೃಢವಾಗಿ ನಟ್ಟಿದೆ. ನೀವು ನನ್ನ ಹತ್ತಿರವೇ ಇರತಕ್ಕುದು. ನಿಮ್ಮ ಆಲೋಚನೆಯ ಬಲದಿಂದ ಎಲ್ಲರನ್ನೂ ಉದ್ಧರಿಸಬಹುದು.” ಎಂದು ಹೇಳಿದನು.

ಸೀತಾ—ದೇವಾ ! ನಿಮ್ಮ ಮಧುರವಾಕ್ಯಗಳಿಂದ ಸನ್ಮಾನಿತನಾದೆನು. ನಿಮ್ಮ ಸನ್ನಿಧಿಯಲ್ಲಿ ಇರಬೇಕೆಂಬುದೇ ನನ್ನ ಕೋರಿಕೆ. ಆದರೆ ನನ್ನ ವ್ರತದಿಂದ ಇಲ್ಲಿರುವುದಕ್ಕೆ ಅವಕಾಶವಿಲ್ಲ.

ಶಿವಾಜಿ—ಏತಕ್ಕಾಗಿ ಈ ಕಠಿಣ ವ್ರತವನ್ನು ಅವಲಂಬಿಸಿರುವಿರಿ ?

ಸೀತಾ—ಈಗ ಯಾವ ವೃತ್ತಾಂತವನ್ನೂ ತಿಳಿಸಲಾರೆ. ಹಗಲಿನಲ್ಲಿ ರಾಜಸಂದರ್ಶನವು ನಿಷಿದ್ಧ. ಇದು ನನ್ನ ವ್ರತದಲ್ಲಿ ಒಂದು ಅಂಗ

ಶಿವಾಜಿ—ಓಹೋ ! ಯಾವ ಅಭಿಪ್ರಾಯದಿಂದ ಈ ವ್ರತವನ್ನು ಅನುಷ್ಠಿಸುತ್ತಿರುವಿರಿ ?

ಸೀತಾ—(ಸ್ವಲ್ಪ ಹೊತ್ತು ಚಿಂತಿಸಿ) ನನ್ನ ಹಣೆಯಲ್ಲಿ ಒಂದು ಅಮಂಗಳ ರೇಖೆ ಇರುವುದು. ನನ್ನ ಇಷ್ಟದೇವತೆ—ಬಾಲ್ಯದಿಂದ ನಾನು ಯಾವ ದೇವತೆಯನ್ನು ಪೂಜಿಸುತ್ತಾ ನಾಮಸ್ಮರಣೆ ಮಾಡುತ್ತಿದ್ದೆನೊ-ಅವಳಿಗೆ, ನನ್ನ ಮೇಲೆ ನಿರ್ದಯವುಂಟಾಗಿದೆ. ಅಶುಭವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಈ ವ್ರತವನ್ನು ಕೈಕೊಂಡೆನು.

ಶಿವಾಜಿ—ಅಮಂಗಳ ರೇಖೆಯಿರುವುದೆಂದೂ ಮತ್ತು ಈ ವ್ರತವನ್ನು ಅವಲಂಬಿಸಬೇಕೆಂದೂ ಹೇಳಿದವರು ಯಾರು ?

ಸೀತಾ—ಕಾರ್ಯಕ್ರಮದಿಂದ ನಾನೇ ಅದನ್ನು ಅವಲಂಬಿಸಿದೆನು. ಈಶಾನೀ ಮಂದಿರದಲ್ಲಿ ಒಬ್ಬರು ನನಗೆ ಈ ವ್ರತವನ್ನು ಬೋಧಿಸಿದರು. ಮನೋರಥವು ಈಡೇರಿದರೆ, ಎಲ್ಲಸಂಗತಿಯನ್ನೂ ತಮಗೆ ವಿಜ್ಞಾಪಿಸುವೆನು. ಇಲ್ಲದಿದ್ದರೆ ಈ ತುಚ್ಛ ಪ್ರಾಣವನ್ನು ಬಿಡುವೆನು. ಯಾವ ದೇವತೆಯನ್ನು ಪೂಜೆಸಿ, ಜೀವಿಸಿರುವೆನೋ ಆ ದೇವತೆಗೆ ನನ್ನಲ್ಲಿ ಅನುಗ್ರಹವಾಗದೆ ಹೋದರೆ, ಈ ಜೀವಿತದಿಂದ ಏನು ಪ್ರಯೋಜನ?

ಶಿವಾಜಿ—ನಿಜ ! ಪ್ರಾಣದಮೇಲೆ ಆಶೆಯಿಡದೆ ಯಾರಿಗಾಗಿ ಸಕಲ ಕಷ್ಟಗಳಿಗೆ ಒಳಗಾಗುವೆವೋ ಅವರ ಅಸಂತುಷ್ಟಿಗಿಂತ ಹೆಚ್ಚು ಮರ್ಮಭೇದಿಯಾದ ದುಃಖವಿಲ್ಲ. ಆ ವ್ಯಥೆಯನ್ನು ಒಂದು ಸಾರಿ ನೋಡಿದೆನು.

ಸೀತಾ—ದೇವಾ ! ಯಾವಾಗ ?

ಶಿವಾಜಿ—ನಾನು ಒಬ್ಬ ನಿರ್ದೋಷಿಗೆ ಯಾತನೆಯನ್ನು ಉಂಟುಮಾಡಿದೆನು. ಅವನ ಮಾತು ಜ್ಞಾಪಕಕ್ಕೆ ಬಂದಾಗ ದುಃಖವುಂಟಾಗುವುದು.

ಸೀತಾ—ಆ ದೀನನ ಹೆಸರೇನು ?

ಶಿವಾಜಿ—ರಘುನಾಥಸಿಂಹ !

ಹಟಾತ್ತಾಗಿ ಮನೆಯಲ್ಲಿ ದೀಪವು ಆರಿಹೋಯಿತು. ಶಿವಾಜಿಯು ಪುನಃ ದೀಪವನ್ನು ಹಚ್ಚಿಸಲು ಪ್ರಯತ್ನಿಸಿದನು. ಸೀತಾಪತಿಯು ಅವನೊಡನೆ, "ದೇವಾ ! ದೀಪವನ್ನು ಹಚ್ಚಿಸಬೇಡಿರಿ, ಅನಂತರ ನಡೆದ ವೃತ್ತಾಂತವನ್ನು ಕೇಳಬೇಕಾಗಿದೆ."

ಶಿವಾಜಿ—ಇನ್ನೇನಿದೆ ? ಅವನು ನನ್ನಲ್ಲಿ ಮೂರು ವರುಷಗಳಿದ್ದನು ; ಆ ಕಾಲದಲ್ಲಿ ತನ್ನ ಕೆಲಸಗಳನ್ನು ಸರಿಯಾಗಿ ನೆರವೇರಿಸುತ್ತಿದ್ದನು. ನೋಡುವುದಕ್ಕೆ ಅವನು ನಿಮ್ಮಂತೆಯೇ ಇದ್ದನು. ನೀವು ದರ್ಶನಕೊಟ್ಟಾಗಲೆಲ್ಲಾ ಅವನು ಜ್ಞಾಪಕಕ್ಕೆ ಬರುವನು.

ಸೀತಾ—ತರುವಾಯ ?

ಶಿವಾಜಿ—ನೋಡುತ್ತಲೇ ಅವನು ವೀರನೆಂದು ತೋರಿತು. ತರುವಾಯ ಅವನನ್ನು ನನ್ನ ಸ್ವಂತವಿಚಾರಣೆಯಲ್ಲಿ ಇಟ್ಟುಕೊಂಡು ಸ್ವಂತ ಖಡ್ಗವನ್ನು ಕೊಟ್ಟೆನು. ಅವನು ಆ ಖಡ್ಗಕ್ಕೆ ಕಳಂಕವನ್ನು ತರಲಿಲ್ಲ. ವಿಪತ್ಸಮಯಗಳಲ್ಲಿ ಅವನು ಯಾವಾಗಲೂ ನೆರಳಿನಂತೆ ನನ್ನ ಹಿಂದೆ ಇರುತ್ತಿದ್ದನು. ಅವನ ವೀರಾಕೃತಿಯೂ ಕಪ್ಪು ಕೂದಲೂ ಕಾಂತಿಯುಕ್ತವಾದ ಕಣ್ಣುಗಳೂ ಈಗಲೂ ನನ್ನ ಕಣ್ಣುಗಳಿಗೆ ಕಟ್ಟಿದಂತೆ ಇರುವುವು.

ಸೀತಾ—ಅನಂತರ ?

ಶಿವಾಜಿ—ಇನ್ನು ನನ್ನನ್ನು ಕೇಳುವಿರೇಕೆ ? ಒಂದುಸಾರಿ ನಾನು ಭ್ರಾಂತಿ ಹೊಂದಿ, ಆ ಸೇವಕನನ್ನು ಅವಮಾನಪಡಿಸಿ, ಸೈನ್ಯದಿಂದ ಹೊರಡಿಸಿದೆನು. ರಘುನಾಥನು ಒಂದು ಮಾತನ್ನೂ ಆಡದೆ ನನ್ನ ಮುಖವನ್ನು ನೋಡಿ, ತಲೆಯನ್ನು ಬಗ್ಗಿಸಿ, ನಿಶ್ಶಬ್ದನಾಗಿ ಹೊರಟು ಹೋದನು. (ಶಿವಾಜಿಗೆ ಕೊರಳು ಕಟ್ಟಿದಂತಾಗಿ, ಸ್ವರವು ಹೊರಡದೆ ಹೋಯಿತು. ಕಣ್ಣುಗಳಿಂದ ಎರಡು ಹನಿ ನೀರು ಬಂದಿತು. ಸ್ವಲ್ಪ ಹೊತ್ತಿನವರೆಗೆ ಇಬ್ಬರೂ ಸುಮ್ಮನಿದ್ದರು. ಕೊನೆಗೆ ಸೀತಾಪತಿಯು ಶಿವಾಜಿಯೊಡನೆ) "ದ್ರೋಹಿಯನ್ನು ದಂಡಿಸುವುದು ರಾಜಧರ್ಮವಲ್ಲವೆ ? ಅದರಲ್ಲಿ ನಿಮ್ಮ ಭ್ರಾಂತಿಯೇನು ?'' ಎಂದು ಹೇಳಿದನು.

ಶಿವಾಜಿ—ರಘುನಾಥನು ದ್ರೋಹಿಯೆ ? ಅಲ್ಲ, ಅವನು ರಣರಂಗಕ್ಕೆ ಬರುವುದು ಸ್ವಲ್ಪ ತಡವಾಯಿತು. ಆ ಕಾರಣದಿಂದ ಅವನು ದ್ರೋಹಿಯೆಂದು ಭಾವಿಸಿದೆನು. ಮಹಾನುಭಾವನಾದ ಜಯಸಿಂಹನು ಆ ಸಂಗತಿಯನ್ನು ವಿಚಾರಿಸಿ, ಯುದ್ಧಕ್ಕೆ ಮೊದಲು ರಘುನಾಥನು ಜನಾರ್ದನದೇವನೆಂಬ ಬ್ರಾಹ್ಮಣನ ಆಶೀರ್ವಾದ ಪಡೆದು ಬರಲು ಹೋಗಿದ್ದನೆಂದು ತಿಳಿದು ಬಂದಿತು. ರಘುನಾಥನು ರಾಜದ್ರೋಹಿಯಲ್ಲ.

ಆ ನಿರ್ದೋಷಿಯನ್ನು ಅವಮಾನಪಡಿಸಿದೆನು. ಆ ಅವಮಾನದಿಂದ ಅವನು ಮೃತ ಪಟ್ಟನೆಂದೂ ಕೇಳಿದೆನು.

ಶಿವಾಜಿಗೆ ವಾಕ್ಯಶಕ್ತಿಯು ಕಡಿಮೆಯಾಯಿತು. ಅನಂತರ ಅವನು "ಸೀತಾ ಪತಿ !" ಎಂದು ಕೂಗಿದನು.

ಪ್ರತ್ಯುತ್ತರವಿಲ್ಲ. ಶಿವಾಜಿಯು ವಿಸ್ಮಿತನಾದನು. ದೀಪವನ್ನು ಹತ್ತಿಸಿ ನೋಡಿದನು. ಗೋಸಾಯಿ ಸೀತಾಪತಿ ಇರಲಿಲ್ಲ !

---

## ಹದಿನೆಂಟನೆಯ ಪ್ರಕರಣ.

---

### (ಔರಂಗಜೇಬ)

ಮರುದಿನ ಬೆಳಿಗ್ಗೆ ಒಂದು ಜಾವದಹೊತ್ತು ; ಶಿವಾಜಿಗೆ ನಿದ್ರಾಭಂಗವಾಯಿತು. ರಾಜಮಾರ್ಗದಲ್ಲಿ ಕೋಲಾಹಲವೆದ್ದಿತು. ಎದ್ದು ನೋಡಿದನು. ಅಲ್ಲಿಯ ಸಂಗತಿಯು ವಿಷಾದಕರವಾಗಿದ್ದಿತು.

ಆ ಮನೆಗೆ ನಾಲ್ಕು ದಿಕ್ಕುಗಳಲ್ಲಿಯೂ ಶಸ್ತ್ರಪಾಣಿಗಳಾದ ಭಟರು ಜಾಗರೂಕರಾಗಿ ನಿಂತಿದ್ದರು. ಅವರ ಅನುಮತಿಯಿಲ್ಲದೆ ಒಳಗಿನವರು ಹೊರಗೂ ಹೊರಗಿನವರು ಒಳಕ್ಕೂ ಪ್ರವೇಶಿಸಲು ಅವಕಾಶವಿಲ್ಲ. ಶಿವಾಜಿಗೆ ಸೀತಾಪತಿಯ ಮಾತು ಜ್ಞಾಪಕಕ್ಕೆ ಬಂದಿತು. ಕಳೆದ ರಾತ್ರಿ ಹೋಗುವುದಕ್ಕೆ ಅನುಕೂಲವಾಗಿದ್ದಿತು. ಈಗ ಶಿವಾಜಿಯು ಬಂದಿಯಾಗಿರುವನು !

ಶಿವಾಜಿಯು ಪ್ರಾರ್ಥನಾ ಪತ್ರಿಕೆಯನ್ನು ಕಳುಹಿಸಿದುದು ಮೊದಲು ಚಕ್ರವರ್ತಿಯು ಸಂಶಯಗ್ರಸ್ತನಾಗಿ, ಮಹಾರಾಷ್ಟ್ರಪ್ರಭುವು ವಾಸಮಾಡುತ್ತಿದ್ದ ಮನೆಗೆ ನಾಲ್ಕು ಕಡೆಗಳಲ್ಲಿಯೂ ಕಾವಲುಗಾರರನ್ನು ಇಡಿಸಿದನು. ಶಿವಾಜಿಯು ಮನೆಯಿಂದ ಹೊರಗೆ ಹೊರಟರೆ, ಅವನಹಿಂದೆ ಕೆಲವು ಸೇವಕರು ಹೋಗುತ್ತಿರಬೇಕೆಂದು ಕೊತ್ವಾಲನಿಗೆ ಆಜ್ಞಾಪಿಸಿದನು. ಈ ಸಂಗತಿಯನ್ನು ಯಾವರೀತಿಯಿಂದಲೋ ಗ್ರಹಿಸಿ,

ಸೀತಾಪತಿಯು ಶಿವಾಜಿಯ ಒಳಿಗೆ ಬಂದಿದ್ದನು ಅಲ್ಲಿಂದ ಓಡಿಹೋಗುವುದಕ್ಕೆ ಎಲ್ಲವನ್ನೂ ಸಿದ್ಧಮಾಡಿ, ಮಧ್ಯರಾತ್ರಿಯಲ್ಲಿ ಅವನ ಹತ್ತಿರಕ್ಕೆ ಹೋದನು. ಅದನ್ನು ಹಿಂದಿನ ಪ್ರಕರಣದಲ್ಲಿ ವಿವರಿಸಿರುವೆವು. ಶಿವಾಜಿಯು ಗೋಸಾಯಿಗೆ ಮನಸ್ಸಿನಲ್ಲಿಯೇ ನಮಸ್ಕಾರಮಾಡಿದನು.

ಔರಂಗಜೇಬನ ಕಪಟವರ್ತನೆಯು ಈಗ ಸ್ಪಷ್ಟವಾಯಿತು. ಅವನು ಶಿವಾಜಿಗೆ ಮೊದಲು ಗೌರವದಿಂದ ಆಹ್ವಾನಪತ್ರಿಕೆಯನ್ನು ಕಳುಹಿಸಿದನು; ಶಿವಾಜಿಯು ಬಂದಕೂಡಲೆ ಅವನನ್ನು ಸಭಾಭವನದಲ್ಲಿ ಅವಮಾನಮಾಡಿದನು; ತರುವಾಯ ಸಭಾಮಂದಿರಕ್ಕೆ ಬರಕೂಡದೆಂದು ಅಪ್ಪಣೆ ಮಾಡಿದನು; ಕೊನೆಗೆ ಬಂದಿಯಿಟ್ಟನು. ಬಂದಾನೊಂದು ಜಾತಿಯ ಸರ್ಪವು ಒಂದು ಪ್ರಾಣಿಯನ್ನು ತಿನ್ನುವುದಕ್ಕೆ ಮೊದಲು ತನ್ನ ದೇಹವನ್ನು ಬಳಸಿ, ಸಿಕ್ಕಿದ ಪ್ರಾಣಿಯ ಶರೀರವನ್ನು ಸುತ್ತಲೂ ಆವರಿಸಿಕೊಂಡು, ಸಂಪೂರ್ಣವಾಗಿ ತನ್ನ ವಶದಲ್ಲಿ ಇಟ್ಟುಕೊಳ್ಳುವುದು. ಕ್ರಮಕ್ರಮವಾಗಿ ಅದನ್ನು ನುಂಗುವುದು. ಅದೇ ರೀತಿಯಲ್ಲಿ ಕ್ರೂರನಾದ ಚಕ್ರವರ್ತಿಯು ಮೋಸದ ಕುರುಹುಗಳನ್ನು ತೋರ್ಪಡಿಸಿ, ಶಿವಾಜಿಯನ್ನು ಸಂಪೂರ್ಣವಾಗಿ ತನ್ನ ಕೈಯಲ್ಲಿ ಸಿಕ್ಕಿಸಿಕೊಂಡು, ನಾಶಮಾಡಲು ಸಂಕಲ್ಪಿಸಿದನು! ಶಿವಾಜಿಯು ಶತ್ರುವಿನ ಗುಪ್ತಉದ್ದೇಶವನ್ನು ಗ್ರಹಿಸಿ, ಮಹೋಗ್ರನಾದನು. ವೇಗವಾಗಿ ನಡಿಗೆಯನ್ನು ಹಾಕುತ್ತ, "ಔರಂಗಜೇಬ್! ಜಾಗರೂಕನಾಗಿರು. ನೀನು ಶಿವಾಜಿಯ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿಲ್ಲ. ಮೋಸವಿದ್ಯೆಯಲ್ಲಿ ನಿನಗಿಂತಲೂ ಎರಡು ಪುಸ್ತಕಗಳನ್ನು ಹೆಚ್ಚಾಗಿ ಓದಿರುವನು. ಈ ಸಾಲವನ್ನು ಬಡ್ಡಿಯೊಡನೆ ಒಂದುದಿನ ತೀರಿಸುವನು." ಎಂದು ಹೇಳಿ ಸ್ವಲ್ಪ ಹೊತ್ತು ಏನನ್ನೋ ಯೋಚಿಸುತ್ತಾ ಕುಳಿತಿದ್ದು ಅನಂತರ ರಘುನಾಥಪಂತನನ್ನು ಕರೆಯಿಸಿದನು. ನ್ಯಾಯಶಾಸ್ತ್ರಿಯು ಪ್ರಭುವಿನ ಸನ್ನಿಧಿಗೆ ಬಂದು, ಮೌನವಾಗಿನಿಂತನು.

ಶಿವಾಜಿ—ಪಂಡಿತಶ್ರೇಷ್ಠ! ತಾವು ಮುಸಲ್ಮಾನರ ಚೇಷ್ಟೆಗಳನ್ನು ನೋಡುತ್ತಿರುವಿರಲ್ಲವೆ? ಈ ಆಟಗಳನ್ನು ಸಾವು ಕೂಡ ನೋಡಬೇಕು. ಇಂದು ನಾವೆಲ್ಲರೂ ಬಂದಿಗಳಾಗುವೆವೆಂದು ರಾತ್ರಿಯೇ ನನಗೆ ತಿಳಿಯಿತು. ಆದರೂ ಅನುಚರರನ್ನು ರಕ್ಷಿಸದೆ ನಾನು ತಪ್ಪಿಸಿಕೊಂಡು ಹೋಗಲು ಇಷ್ಟಪಡಲಿಲ್ಲ. ಇನು ಮುಂದೆ ಮಾಡಬೇಕಾದ ಕೆಲಸವೇನು?

ನ್ಯಾಯಶಾಸ್ತ್ರಿ—(ಆಲೋಚಿಸುತ್ತಾ) ನಮ್ಮ ಅನುಚರರನ್ನು ಸ್ವದೇಶಕ್ಕೆ ಕಳುಹಿಸಿಕೊಡಬೇಕೆಂದು ಚಕ್ರವರ್ತಿಗೆ ವಿಜ್ಞಾಪನಾ ಪತ್ರಿಕೆಯನ್ನು ಕಳುಹಿಸಬೇಕು. ನಮ್ಮ ಪರಿವಾರವು ಎಷ್ಟು ಕಡಿಮೆಯಾದರೆ, ಅವನು ಅಷ್ಟು ಸಂತೋಷಪಡುವನು. ನಿಸ್ಸಂಶಯವಾಗಿ ಅವನು ನಮ್ಮ ಕೋರಿಕೆಯನ್ನು ನಡೆಯಿಸುವನು.

ಶಿವಾ—ಆರ್ಯಾ! ನಿಮ್ಮ ಅಭಿಪ್ರಾಯವು ಯುಕ್ತವಾದುದು ಆ ಧೂರ್ತನು ಈ ವಿಷಯದಲ್ಲಿ ಅಡ್ಡಿ ಹೇಳುವುದಿಲ್ಲವೆಂದು ನನಗೂ ತೋರುತ್ತದೆ."

ಆದರಂತೆಯೇ ವಿಜ್ಞಾಪನಾ ಪತ್ರಿಕೆಯು ಚಕ್ರವರ್ತಿಯ ಕೈಸೇರಿತು. ಶಿವಾಜಿಯು ತಿಳಿದಿದ್ದಂತೆಯೇ ನಡೆಯಿತು ಮಹಾರಾಷ್ಟ್ರರು ಡಿಲ್ಲೀನಗರವನ್ನು ಬಿಡುವರೆಂದು ಔರಂಗಜೇಬನು ತುಂಬ ಸಂತೋಷಪಟ್ಟನು. ಅವರಿಗೆ ಬೇರೆಬೇರೆಯಾಗಿ ಅಂಗೀಕಾರ ಪತ್ರಿಕೆಗಳನ್ನು ಕೊಟ್ಟನು. ಆ ಪತ್ರಿಕೆಗಳು ಶಿವಾಜಿಗೆ ಎರಡು ಮೂರು ದಿನಗಳಮೇಲೆ ಸೇರಿತು. ಈಗ ಅವನು ತನ್ನಲ್ಲಿ ಹೀಗೆಂದು ಯೋಚಿಸಿದನು- "ಮೂರ್ಖಾ! ಶಿವಾಜಿಯನ್ನು ಕಟ್ಟಿಹಾಕುವೆಯಾ? ಈಗ ನಾನು ಒಬ್ಬ ಪರಿಚಾರಕನ ವೇಷಹಾಕಿಕೊಂಡು ಡಿಲ್ಲಿಯಿಂದ ಹೊರಟುಹೋದರೆ ನೀನು ಏನು ಮಾಡಬಲ್ಲೆ! ಏನಾದರೂ ಆಗಲಿ! ಸೇವಕರು ತೊಂದರೆಯಿಲ್ಲದಂತೆ ಹೊರಡಲಿ! ತನ್ನನ್ನು ಕಾಪಾಡಿಕೊಳ್ಳುವುದರಲ್ಲಿ ಶಿವಾಜಿಯು ಸಮರ್ಥನಾಗಿರುವನು.

ವಾಚಕ ಮಹಾಶಯ! ಯಾವನು ಬುದ್ಧಿ ಕೌಶಲತೆಯಿಂದಲೂ, ಯುದ್ಧ ಪಾಂಡಿತ್ಯದಿಂದಲೂ ನಿಜ ಸಹೋದರರನ್ನು ಓಡಿಸಿ, ತಂದೆಯನ್ನು ಸೆರೆ ಯಲ್ಲಿಡಿಸಿ, ಮಯೂರ ಸಿಂಹಾಸನವನ್ನು ಹತ್ತಿದನೋ, ಯಾವನು ಕಾಶ್ಮೀರ ಮೊದಲು ವಂಗದೇಶದ ವರೆಗೂ ಭೂಮಿಯನ್ನು ಪಾಲಿಸುತ್ತಾ, ದಕ್ಷಿಣದೇಶವನ್ನು ಕೂಡ ಜಯಿಸಲು ಸಂಕಲ್ಪಿಸಿದ್ದನೋ. ಆ ಕಪಟಿಯಾದ ಔರಂಗಜೇಬನ ಅರಮನೆಯನ್ನು ನೋಡಿ ಅವನ ನಡತೆಯನ್ನು ಪರೀಕ್ಷಿಸಬೇಕಲ್ಲವೆ?

ರಾಜಕಾರ್ಯ್ಯಗಳನ್ನು ನೆರವೇರಿಸಿ ಔರಂಗಜೇಬನು "ಗೋಸಲ್‌ಖಾನಾ" ಎಂಬ ಮಂದಿರದಲ್ಲಿ ಕುಳಿತಿದ್ದನು. ಆ ಮಂದಿರವು ಮಂತ್ರಿಗಳೊಡನೆ ರಹಸ್ಯಾಲೋಚನೆ ಮಾಡುವಸ್ಥಳವು. ಆದರೆ ಈ ದಿನ ಅವನು ಒಂಟಿಯಾಗಿ ಕುಳಿತಿರುವನು ಒಂದು ಕಾಲದಲ್ಲಿ ಅವನ ಮುಖದಲ್ಲಿ ಚಿಂತಾರೇಖೆಗಳು ಕಾಣುತ್ತಿದ್ದುವು. ಮತ್ತೊಂದು ಸಾರಿ ಕಣ್ಣುಗಳು ಜಾಜ್ವಲ್ಯಮಾನಗಳಾಗುತ್ತಿದ್ದುವು; ಮನೋರಥವು ಸಫಲವಾದು

ದಕ್ಕಾಗಿಯೇ ಹೀಗಾಗಿರಬಹುದಲ್ಲವೆ ? ಅವನು ಏನು ಮಾಡುತ್ತಿರುವನು ? ಹಿಂದೂ ಧರ್ಮವನ್ನು ಇನ್ನೂ ನಾಶಮಾಡಬೇಕೆಂದಾಗಲಿ, ಅಥವಾ ರಾಜಪುತ್ರರನ್ನೂ ಮಹಾರಾಷ್ಟ್ರರನ್ನೂ ಗೆಲ್ಲಬೇಕೆಂದಾಗಲಿ ಸಂಕಲ್ಪಿಸುತ್ತಿರುವನೊ ! ಏನೊ ! ಯಾರು ಬಲ್ಲರು ? ಅವನು ತನ್ನ ಮಂತ್ರಿಗಳನ್ನೇ ನಂಬಲಾರದಿದ್ದನು. ಭರತಖಂಡದಲ್ಲಿ ಅವನನ್ನು ನಂಬಿದವರಿಲ್ಲ. ತನ್ನ ಅಭಿಪ್ರಾಯವನ್ನು ಇತರರ ಸಂಗಡ ಹೇಳನು. ತನ್ನ ಬುದ್ಧಿಬಲದಿಂದ ಎಲ್ಲರನ್ನೂ ಮಣ್ಣು ಬೊಂಬೆಗಳಂತೆ ಆಡಿಸುತ್ತಾ ಇದ್ದನು ದೇಶವನ್ನು ಸ್ವತಂತ್ರವಾಗಿ ಆಳಬೇಕೆಂದು ಅವನ ಆಶೆ.

ಸ್ವಲ್ಪಹೊತ್ತಿಗೆ ಒಬ್ಬ ಸೇವಕನು ಬಂದು, "ಜಹಾಪನಾ ! ದಾನೇಶಪಂತರವರು ತಮ್ಮ ದರ್ಶನಾರ್ಥವಾಗಿ ಬಂದಿರುವರು" ಎಂದು ವಿಜ್ಞಾಪಿಸಿದನು. ಸಾರ್ವಭೌಮನು, "ದಾನೇಶಪಂತರು ಬರಬಹುದು" ಎಂದು ಹೇಳಿ, ವಿಚಾರವನ್ನು ಬಿಟ್ಟು, ಮುಖದಲ್ಲಿ ಕಿರುನಗೆಯನ್ನು ತಂದು, ದರ್ಪದಿಂದಿರುವಂತೆ ಕುಳಿತುಕೊಂಡನು.

ದಾನೇಶಪಂತನು ಮಂತ್ರಿಯಲ್ಲ. ರಾಜಕಾರ್ಯಗಳಲ್ಲಿ ವಿಶೇಷ ಸಂಬಂಧವನ್ನು ಉಂಟು ಮಾಡಿಕೊಳ್ಳುವವನಲ್ಲ. ಆದರೆ ಅವನು ಅರಾಬಿ, ಫಾರಸಿ, ಭಾಷೆಗಳಲ್ಲಿ ಪಂಡಿತನು ; ಆದುದರಿಂದ ಚಕ್ರವರ್ತಿಯ ಗೌರವಕ್ಕೆ ಅರ್ಹನಾಗಿದ್ದನು. ಅಡಿಗಡಿಗೆ ಕರೆಯಿಸಿ, ಏನಾದರೂ ಕೇಳುತ್ತಿದ್ದನು. ಉದಾರ ಹೃದಯನಾದ ದಾನೇಶಪಂತನು ಮಾಯೋಪಾಯಗಳನ್ನು ಅರಿತವನಲ್ಲ. ಚಕ್ರವರ್ತಿಗೆ ಹಿತೋಪದೇಶ ಮಾಡುತ್ತಿದ್ದನು. ಔರಂಗಜೇಬನ ಅಣ್ಣನಾದ ದಾರಾ ಎಂಬುವನು ಕೈ ಸೆರೆಯಲ್ಲಿರುವಾಗ, ಅವನನ್ನು ಬಿಟ್ಟುಬಿಡುವುದು ಒಳ್ಳೆಯದೆಂದು ದಾನೇಶಪಂತನು ಚಕ್ರವರ್ತಿಗೆ ಬೋಧನೆ ಮಾಡಿದನು. ನ್ಯಾಯವಾದ ಬೋಧನೆಯು ತನಗೆ ರುಚಿಸದೆ ಹೋದುದರಿಂದ, ಸಾರ್ವಭೌಮನು ಅಂತರಂಗದಲ್ಲಿ ನಗುತ್ತಾ, ದಾನೇಶನು ದೂರದರ್ಶಿಯಲ್ಲವೆಂದೂ, ತಿಳಿವಳಿಕೆಯಿಲ್ಲದವನೆಂದೂ ಭಾವಿಸಿದನು. ಆದರೂ ವಿದ್ಯಾಧನ ಗೌರವಗಳಿಂದ ಅವನನ್ನು ಸನ್ಮಾನಿಸುತ್ತಾ ಇದ್ದನು.

ಮುದುಕನು ಚಕ್ರವರ್ತಿಗೆ ಪ್ರಣಾಮಮಾಡಿ ಕುಳಿತನು.

ದಾನೇಶ—ಈ ಸಮಯದಲ್ಲಿ ದಾಸನು ತಮ್ಮ ಸನ್ನಿಧಿಗೆ ಬಂದುದು ಕೇವಲ ಹುಚ್ಚುತನ; ಏಕೆಂದರೆ, ರಾಜಕಾರ್ಯಗಳನ್ನು ಮುಗಿಸಿ ತಾವು, ಈಗ ವಿಶ್ರಾಂತಿ

ಯನ್ನು ತೆಗೆದುಕೊಳ್ಳುವಕಾಲ. ಆದರೂ ನನ್ನ ಆಗಮನವು ತಮ್ಮ ಅನುಗ್ರಹ ದಿಂದಲೇ! ಫಾರಸೀ ಕವಿಯು ಈ ರೀತಿಯಾಗಿ ಉಲ್ಲೇಖಿಸಿರುವನು:—

"ಸೂರ್ಯನಿಗಾಗಿ ಸಮಸ್ತ ಪ್ರಾಣಿಗಳೂ ನಿರೀಕ್ಷಿಸುತ್ತಿರುವುವು. ಸೂರ್ಯನು ಕಾಂತಿಯನ್ನು ಕೊಟ್ಟು ಎಲ್ಲರನ್ನೂ ಸಂತೋಷಪಡಿಸುವನು. ಎಂದಮೇಲೆ ಬೆಳಕನ್ನು ಕೊಡದಿರುವನೆ?"

ಔರಂಗ—(ಮಂದಹಾಸದಿಂದ) ದಾನೇಶಪಂತ್! ಇತರರ ವಿಷಯವು ಹೇಗಾದರೂ ಇರಲಿ,-ತಾವು ಯಾವ ವೇಳೆಯಲ್ಲಿಯೂ ಮಾನಾರ್ಹರೇ.

ಈರೀತಿ ಉತ್ತರ ಪ್ರತ್ಯುತ್ತರಗಳು ನಡೆದುವು. ತರುವಾಯ ದಾನೇಶಪಂತನು ಹೀಗೆಂದನು. "ಜಹಾಪನಾ! 'ಆಲಂಘೀರ್' ಎಂಬ ಹೆಸರನ್ನು ಸಾರ್ಥಕಪಡಿಸಬೇಕು. ಹಿಂದೂಸ್ಥಾನವೆಲ್ಲ ತಮ್ಮ ಆಡಳಿತದಲ್ಲಿದೆ. ಇನ್ನು ದಖ್ಖಣ ದೇಶವು ಕೂಡ ಕೆಲವು ದಿನಗಳಲ್ಲಿ ತಮ್ಮ ಸ್ವಾಧೀನವಾಗುವುದು." ಎಂದು ಹೇಳಿದನು.

ಔರಂಗ—ಏನು? ನಿಮಗೆ ಹೇಗೆ ತಿಳಿಯಿತು?

ದಾನೇಶ—ದಕ್ಷಿಣ ದೇಶದ ಮುಖ್ಯ ವೈರಿಯು ತಮ್ಮ ಕೈಯಲ್ಲಿರುವನು.

ಔರಂಗ—ಶಿವಾಜಿಯ ವಿಷಯವನ್ನು ಹೇಳುತ್ತಿರುವಿರಾ? ಅಹುದು; ಇಲಿಯು ಬೋನಿನಲ್ಲಿ ಬಿದ್ದಿತು.—ಎಂದು ಪುನಃ ಏನೋ ಹೇಳಿ ತನ್ನ ಅಭಿಪ್ರಾಯವನ್ನು ಮರೆಮಾಚುವುದಕ್ಕಾಗಿ ಹೀಗೆಂದನು—"ದಾನೇಶಪಂತ್! ತಾವು ನನ್ನ ಉದ್ದೇಶವನ್ನು ಚೆನ್ನಾಗಿ ಬಲ್ಲಿರಿ. ದೇಶದಲ್ಲಿರುವ ಮಹಾ ಪುರುಷರನ್ನು ಯಾವಾಗಲೂ ಸನ್ಮಾನಿಸುವುದೇ ನನ್ನ ಅಭಿಮತ. ಶಿವಾಜಿಯು ಧೂರ್ತನೂ—ರಾಜದ್ರೋಹಿಯೂ ಆದರೂ—ಯೋಧನಲ್ಲವೆ? ಆದುದರಿಂದ ಅವನನ್ನು ಗೌರವಿಸುವುದಕ್ಕೆ ಡಿಲ್ಲಿಗೆ ಬರಮಾಡಿಕೊಂಡೆನು. ರಾಜಸಭೆಯಲ್ಲಿ ಆತನನ್ನು ಉಚಿತವಾಗಿ ಗೌರವಿಸಬೇಕೆಂದು ನನ್ನ ಅಭಿಪ್ರಾಯವಿದ್ದಿತು; ಅವನು ಹಾಗೆ ಸುಮ್ಮನಿರಲಿಲ್ಲ. ಆದರೂ ನಾನು ಅವನನ್ನು ಶಿಕ್ಷಿಸದೆ ಸಭಾರಂಗಕ್ಕೆ ಮಾತ್ರ ಬರಕೂಡದೆಂದು ಅಪ್ಪಣೆ ಮಾಡಿದೆನು. ಈಗ ಅವನು ನಮ್ಮ ನಗರದಲ್ಲಿ ಅನೇಕ ಸನ್ಯಾಸಿಗಳೊಡನೆಯೂ ರಾಜದ್ರೋಹಿಗಳೊಡನೆಯೂ ಆಲೋಚನೆ ಮಾಡುತ್ತಿರುವಂತೆ ತಿಳಿದು ಬಂದಿತು. ಅದರಿಂದ ಅವನು ನಮಗೆ ಕೇಡನ್ನು ಮಾಡದಂತೆ ಇರುವುದಕ್ಕಾಗಿ ನೋಡಿಕೊಂಡಿರುವುದಕ್ಕೆ ಕೊತ್ವಾಲನನ್ನು ನೇಮಿಸಿದ್ದೇನೆ. ಕೆಲವು ದಿನಗಳ ನಂತರ ಸನ್ಮಾನಪೂರ್ವಕವಾಗಿ ಶಿವಾಜಿಯನ್ನು ಕಳುಹಿಸಿ ಕೊಡುವೆನು.

ದಾನೇಶ—ಪ್ರಭುಗಳ ಉದ್ದೇಶವನ್ನು ಕೇಳಿ ತುಂಬ ಸಂಕೋಚಿಸುತ್ತೇನೆ.

ಔರಂಗ—ಯಾವ ಕಾರಣದಿಂದ ?

ನಿಷ್ಕಪಟಿಯಾದ ದಾನೇಶನು ಹೀಗೆಂದನು "ತಮಗೆ ಆಲೋಚನೆ ಹೇಳಲು ನಾನು ಶಕ್ತನಲ್ಲ. ಆದರೆ ಜಹಾಪನಾ ! ಶಿವಾಜಿಯು ವಿಷಯದಲ್ಲಿ ಸರಿಯಾಗಿ ಪ್ರವರ್ತಿಸದೆ ಹೋದರೂ ಬಹುಕಾಲ ಸೆರೆಯಲ್ಲಿಟ್ಟರೆ ಮೂಢಮತಿಗಳಾದ ಲೋಕದ ಜನರು ನಾನಾವಿಧವಾಗಿ ಮಾತನಾಡುವರು. ಚಕ್ರವರ್ತಿಗಳು ಶಿವಾಜಿಯನ್ನು ಸೆರೆಮಾಡಿ ಕಾರಾಗೃಹದಲ್ಲಿ ಇಡುವುದು ನ್ಯಾಯವಲ್ಲವೆನ್ನುವರು."

ಔರಂಗಜೇಬನು ತನಗುಂಟಾದ ಕೋಪವನ್ನು ಅಡಗಿಸಿಕೊಂಡು, ಕಿರುನಗೆಯಿಂದ "ದಾನೇಶಪಂತ್ ! ಮೂಢರು ಆಡುವ ಮಾತಿನಿಂದ ಡಿಲ್ಲೀಶನಿಗೆ ನಷ್ಟವಿಲ್ಲ. ನ್ಯಾಯವೂ, ದಯೆಯೂ ಸಿಂಹಾಸನಕ್ಕೆ ಕೀರ್ತಿಯನ್ನು ತರುವುವು" ಎಂದು ಪ್ರತ್ಯುತ್ತರವಿತ್ತನು.

ದಾನೇ—ಬಾದಶಹರವರ ಮುತ್ತಾತರಾದ ಅಕ್ಬರಶಹನು ಈರೀತಿಯಾಗಿಯೇ ದೇಶವನ್ನು ಆಳಿದನು. ತಾವು ಅವರಂತೆಯೇ ರಾಜ್ಯಪರಿಪಾಲನೆ ಮಾಡಿ ಕೀರ್ತಿಯನ್ನು ಸಂಪಾದಿಸ—|

ಔರಂಗ—ಹಾಗೆಂದರೆ ಏನು ?

ದಾನೇ—ತಮಗೆ ತಿಳಿಯದಿರುವುದೇನಿದೆ ? ಲಾಲಿಸಬೇಕು. ಅಕ್ಬರಶಹನು ಸಿಂಹಾಸನವನ್ನೇರಿದಾಗ ರಾಜಾಸ್ಥಾನ ಬಿಹಾರ ವಂಗ ದಕ್ಷಿಣದೇಶ ಮೊದಲಾದ ಕಡೆಗಳಲ್ಲೆಲ್ಲಾ ಅನೇಕ ಶತ್ರುಗಳಿದ್ದರು. ಇಷ್ಟೇಕೆ ? ಡಿಲ್ಲೀನಗರದ ಸಮೀಪದಲ್ಲಿಯೇ ಕಳ್ಳರು ಅಡ್ಡಿಯಿಲ್ಲದೆ ಸಂಚರಿಸುತ್ತಿದ್ದರು. ಅವರು ಮೃತರಾಗುವಾಗ ಸಾಮ್ರಾಜ್ಯವು ನಿಷ್ಕಂಟಕವಾಗಿದ್ದಿತು. ಪರಮ ಶತ್ರುಗಳಾಗಿದ್ದ ರಾಜಪುತ್ರರೇ ಬಾದಶಹರ ಜತೆಯನ್ನು ಸೇರಿ ಕಾಬೂಲು ಮೊದಲುಗೊಂಡು ವಂಗದೇಶದವರೆಗೂ ಡಿಲ್ಲೀಶ್ವರನ ವಿಜಯ ಪತಾಕೆಗಳನ್ನು ನೆಟ್ಟರು. ವಿಜಯವು ಯಾವ ಕಾರಣದಿಂದ ಉಂಟಾಯಿತು ? ಬಾಹುಬಲದಿಂದಲೆ ? ಕೇವಲ ಸಾಹಸದಿಂದಲೆ ? ತೈಮೂರಲಂಗನ ವಂಶದಲ್ಲಿ ಬಾಹುಬಲವಾಗಲಿ, ಸಾಹಸವಾಗಲಿ, ಇಲ್ಲದವನು ಇರಲಿಲ್ಲ. ಆದರೆ ಅಕ್ಬರು ಹೊರತು ಮಿಕ್ಕವರು ಯಾರಾದರೂ ಅಂಥ ವಿಜಯವನ್ನು ಪಡೆದರೆ ? ಇಲ್ಲ; ಜಹಾಪನಾ ! ಸತ್ಪ್ರವರ್ತನೆಯಿಂದಲೇ ಆ ಅಭ್ಯುದಯವುಂಟಾಯಿತು. ಅವರು ತಮ್ಮ

ಹಗೆಗಳನ್ನು ಸನ್ಮಾನಿಸುತ್ತಿದ್ದರು; ತಮ್ಮ ಕೈ ಕೆಳಗಿನ ಹಿಂದುಗಳನ್ನು ನಂಬುತ್ತಿದ್ದರು. ಅವರೂ ವಿಶ್ವಾಸ ಪಾತ್ರರಾಗಲು ಪ್ರಯತ್ನಿಸುತ್ತಿದ್ದರು. ಮಾನಸಿಂಗ, ತೋಡರ ಮಲ್ಲ, ಬೀರಬಲ ಮೊದಲಾದ ಹಿಂದುಗಳೇ ಮೊಗಲ್‌ಸಾಮ್ರಾಜ್ಯಕ್ಕೆ ಸ್ತಂಭಗಳಾಗಿದ್ದರು. ಉತ್ತಮರಲ್ಲಿ ಅವಿಶ್ವಾಸವನ್ನು ತೋರಿಸಬಾರದು. ಹೀನನಾದರೂ ದಯೆಯಿಂದ ನೋಡುವಾಗ ಅವನು ಕ್ರಮವಾಗಿ ವಿಶ್ವಾಸಯೋಗ್ಯನಾಗುವನು. ದಕ್ಷಿಣ ದೇಶದ ಯುದ್ಧಗಳಲ್ಲಿ ಶಿವಾಜಿಯು ನಮಗೆ ಬಹಳ ಸಹಾಯ ಮಾಡಿರುವನು. ಜಹಾಪನಾ ! ಶಿವಾಜಿಯನ್ನು ಸನ್ಮಾನಿಸಿದ ಪಕ್ಷದಲ್ಲಿ ಅವನು ನಮಗೆ ಮುಖ್ಯ ಸ್ನೇಹಿತನಾಗುವನು”

ದಾನೇಶಪಂತನು ಚಕ್ರವರ್ತಿಯನ್ನು ಸಂದರ್ಶಿಸಲು ಬಂದ ವಿಷಯವು ವಾಚಕ ವರ್ಗಕ್ಕೆ ಈವರೆಗೆ ತಿಳಿದೇ ಇದೆ. ಔರಂಗಜೇಬನು ಮಾಡಿದ ಕೆಲಸಕ್ಕೆ ಮುಸಲ್ಮಾನ ಸಭಿಕರು ಲಜ್ಜೆಪಡುತ್ತಿದ್ದರು. ಗೌರವದಿಂದ ಶಿವಾಜಿಯನ್ನು ಸ್ವಸ್ಥಾನಕ್ಕೆ ಕಳುಹಿಸಬೇಕೆಂದು, ಚಕ್ರವರ್ತಿಗೆ ಹೇಳುವುದಕ್ಕೆ ದಾನೇಶನು ಬಂದಿದ್ದನು. ಕೈಯಿಂದ ಪರ್ವತವನ್ನು ಅಲ್ಲಾಡಿಸಬಹುದು. ಆದರೆ ಔರಂಗಜೇಬನ ಪ್ರತಿಜ್ಞೆಯನ್ನು ಯಾವ ಹಿತಬೋಧೆಯಿಂದಲೂ ಬದಲಾಯಿಸುವುದು ಅಸಾಧ್ಯವು. ಚಕ್ರವರ್ತಿಯು ಮಂದಹಾಸದಿಂದ “ದಾನೇಶಪಂತ್ ! ನೀನು ಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವನು. ದಕ್ಷಿಣ ದೇಶದಲ್ಲಿ ಶಿವಾಜಿಯು ಸ್ತಂಭವನ್ನು ನಿಲ್ಲಿಸುವೆನು ; ರಾಜಸ್ಥಾನದಲ್ಲಿ ರಾಜಪುತ್ರರು ಈವರೆಗೆ ಸ್ತಂಭಗಳಾಗಿರುವರು ; ಉತ್ತರದಲ್ಲಿ ಕಾಶ್ಮೀರಕ್ಕೆ ಪುನಃ ಸ್ವಾತಂತ್ರ್ಯವನ್ನು ಕೊಟ್ಟಿರುವೆನು ; ವಂಗದೇಶಕ್ಕೆ ಪಠಾಣರನ್ನು ಪುನಃ ಗೌರವದಿಂದ ಕರೆಯಿಸುವೆನು. ಈ ನಾಲ್ಕು ಸ್ತಂಭಗಳ ಮೇಲೆ ಮೊಗಲ್‌ಸಾಮ್ರಾಜ್ಯವು ಸ್ಥಿರವಾಗಿ ನಿಲ್ಲುವುದು ” ಎಂದು ನುಡಿದನು.

ಮುಖವನ್ನು ಒರಸಿಕೊಂಡು ದಾನೇಶಪಂತನು, “ತಮ್ಮ ತಂದೆಯವರು ಈ ದಾಸನಲ್ಲಿ ಅನುಗ್ರಹವಿಟ್ಟಿದ್ದರು; ತಾವು ನನ್ನಲ್ಲಿ ತುಂಬ ವಿಶ್ವಾಸವಿಟ್ಟಿರುವಿರಿ. ನನ್ನಲ್ಲಿ ತಮಗೆ ಅನುಗ್ರಹವಿರುವುದರಿಂದಲೇ ಮನಸ್ಸಿನಲ್ಲಿದ್ದ ಮಾತುಗಳನ್ನು ಹೇಳುತ್ತಿರುವೆನು; ಬಾದಶಹರವರಿಗೆ ಅಹಿತವನ್ನು ಹೇಳಬೇಕೆಂಬ ಇಚ್ಛೆಯಿಲ್ಲ.” ಎಂದು ಹೇಳಿದನು.

ದಾನೇಶನ ನಿಷ್ಕಾಪಟ್ಯವನ್ನು ನೋಡಿ ಚಕ್ರವರ್ತಿಯು ಅವನನ್ನು ಪ್ರೀತಿಸುತ್ತಿದ್ದನು. ಅವನಿಗೆ ಕಷ್ಟವು ತೋರಿತೆಂದು ಗ್ರಹಿಸಿ ಔರಂಗಜೇಬನು ಹೀಗೆಂದನು:-

ದಾನೇಶಪಂತ್ ! ಅಕ್ಬರ್‌ಶಹಾ ಬುದ್ಧಿವಂತನೇ—ನಾನು ಬುದ್ಧಿವಂತನೇ ? ಕಾಫರರನ್ನೂ ಮುಸಲ್ಮಾನರನ್ನೂ ಸಮದೃಷ್ಟಿಯಿಂದ ನೋಡುವುದು ಧರ್ಮಸಮ್ಮತವೆ ? ಇನ್ನೊಂದು ವಿಷಯ ; ಯಾವುದಾದರೂ ಒಂದು ಕೆಲಸವನ್ನು ತಾನು ಮಾಡುವಂತೆ ಮತ್ತೊಬ್ಬನು ಮಾಡನು ಈ ಸಂಗತಿಯನ್ನು ನಾವು ನಿತ್ಯಕೃತ್ಯಗಳಲ್ಲಿ ನೋಡುತ್ತಿರುವೆವು. ಸಾಮ್ರಾಜ್ಯಭಾರವನ್ನು ಇತರರಮೇಲೆ ಬಿಡುವುದಕ್ಕಿಂತ ನಾವೇ ನಿರ್ವಹಿಸುವುದು ಒಳ್ಳೆಯದಲ್ಲವೆ ? ನನ್ನ ಬಾಹುಬಲದಿಂದ ಹಿಂದೂ ದೇಶವನ್ನು ಆಳತೊಡಗಿದಾಗ ಏತಕ್ಕೆ ಆ ಹಾಳು ಕಾಫರರ ಸಹಾಯವನ್ನು ಅಪೇಕ್ಷಿಸಬೇಕು ? ಬಾಲ್ಯದಿಂದಲೂ ಔರಂಗಜೇಬನು ತನ್ನ ಖಡ್ಗವನ್ನೇ ನಂಬಿರುವನು. ಇತರರ ಸಹಾಯವನ್ನು ಅಪೇಕ್ಷಿಸನು.

ದಾನೇಶ—ಜಹಾಪನಾ ! ತಾವೇ ದಿನವಹಿ ಕಾರ್ಯಗಳನ್ನು ನಿರ್ವಹಿಸಬಹುದು; ಆದರೆ ವಿಸ್ತೀರ್ಣವಾದ ಸಾಮ್ರಾಜ್ಯವನ್ನು ಇತರರ ಸಹಾಯವಿಲ್ಲದೆ ಪರಿಪಾಲಿಸುವುದಕ್ಕೆ ಸಾಧ್ಯವೆ ? ಎಲ್ಲ ಭಾಗಗಳಲ್ಲಿಯೂ ಒಂದೇ ಕಾಲದಲ್ಲಿ ತಾವು ಇರುವುದು ಹೇಗೆ ? ಯಾರನ್ನಾದರೂ ನಿಯಮಿಸದಿದ್ದರೆ ರಾಜ್ಯದ ಆಡಳಿತವು ಯಾವ ರೀತಿ ನಡೆಯುವುದು ?

ಔರಂಗ—ಬೇಕಾದಷ್ಟು ಮಂದಿ ಸರಿಯಾದ ಸೇವಕರನ್ನು ನಿಯಮಿಸುವೆನು. ಆದರೆ, ಅವರು ಎಲ್ಲ ಕಾಲದಲ್ಲಿಯೂ ಸೇವಕರಂತೆ ಇರುವರು. ಈ ದಿನ ಒಬ್ಬನಿಗೆ ನಾನು ಅಧಿಕಾರಕೊಟ್ಟ ಪಕ್ಷದಲ್ಲಿ, ನಾಳೆ ಅವನು ಸ್ವತಂತ್ರನಾಗುವನು. ಒಬ್ಬನನ್ನು ನಂಬಿದರೆ ಅವನು ಬಹು ಬೇಗ ವಿಶ್ವಾಸ ಘಾತಕನಾಗುವನು. ಈ ಸಂದರ್ಭದಲ್ಲಿ ಅಧಿಕಾರ-ವಿಶ್ವಾಸಗಳನ್ನು ಇತರರಲ್ಲಿ ಇಟ್ಟುಕೊಳ್ಳುವುದಕ್ಕಿಂತ ತನ್ನಲ್ಲಿಯೇ ಇಟ್ಟುಕೊಳ್ಳುವುದು ಉತ್ತಮವಲ್ಲವೆ ? ದಾನೇಶಪಂತ್ ! ನೀವು ಕುದುರೆಯನ್ನು ಹತ್ತಿ ಕಡಿವಾಣದ ಮೂಲಕ ಅದನ್ನು ಸಂಪೂರ್ಣವಾಗಿ ವಶಪಡಿಸಿಕೊಂಡರೆ, ಅದು ನೀವು ತಿರುಗಿಸಿದಂತೆ ತಿರುಗುವುದಲ್ಲವೆ ? ಚಕ್ರವರ್ತಿಯು ಅದೇ ರೀತಿಯಾಗಿಯೇ ರಾಜ್ಯ ಪರಿಪಾಲನೆ ಮಾಡಬೇಕು. ಯಾರನ್ನೂ ನಂಬಬಾರದು. ಯಾರಿಗೂ ಅಧಿಕಾರ ಕೊಡಬಾರದು.— ಅಧಿಕಾರವನ್ನು ತನ್ನಲ್ಲಿಯೇ ಇಟ್ಟುಕೊಳ್ಳಬೇಕು; ಸೇನಾಪತಿಗಳನ್ನೂ, ಮಿಕ್ಕ ಸೇವಕರನ್ನೂ ಸಂಪೂರ್ಣವಾಗಿ ತನ್ನ ವಶದಲ್ಲಿಟ್ಟುಕೊಂಡು, ಅವರಿಂದ ಕೆಲಸಗಳನ್ನು ಮಾಡಿಸಬೇಕು.

ದಾನೇಶ--ದೇವಾ! ಮನುಷ್ಯನು ಕುದುರೆಯಂತೆ ಅಲ್ಲವಷ್ಟೆ! ಅವನಿಗೆ ಶಕ್ತಿ, ಸ್ವಾತಂತ್ರ್ಯ, ಆತ್ಮಗೌರವಗಳು ಇವೆ!

ಔರಂಗ--ಮನುಷ್ಯನು ಕುದುರೆಯಲ್ಲವೆಂಬ ಮಾತು ನಿಜ; ಕುದುರೆಗೆ ಲಗಾಮು ಹಾಕುವುದು; ಮನುಷ್ಯನಿಗೆ ಆಶೆಪಡಿಸಿ ಭಯವಿಟ್ಟು ಕೆಲಸಮಾಡಿಸುವುದು ಒಳ್ಳೆಯ ಕೆಲಸ ಮಾಡುವವರಿಗೆ ಬಹುಮಾನಕೊಡುವುದು, ತಪ್ಪುಮಾಡಿದವರನ್ನು ಶಿಕ್ಷಿಸುವುದು, ಹೀಗೆಮಾಡಿದರೆ ಬಹುಮಾನದ ಆಶೆಯಿಂದಲೂ ಶಿಕ್ಷೆಯ ಭಯದಿಂದಲೂ ಕೆಲಸ ಮಾಡುವರು.

ದಾನೇಶ--ಪ್ರಭೊ! ಮಾನವನ ಹೃದಯದಲ್ಲಿ ಇವುಗಳಲ್ಲದೆ ಇತರ ಭಾವನೆಗಳೂ ಇವೆ. ಶಿಕ್ಷೆಯ ಭಯದಿಂದ ಕೆಲಸ ಮಾಡುವವನು, ಯಾವುದೋ ವಿಧವಾಗಿ ಕೆಲಸವನ್ನು ಮುಗಿಸುವನು. ಆದರೆ ಯಾವನನ್ನು ತಾವು ಗೌರವಿಸುವಿರೋ, ಯಾರಿಗೆ ಅಧಿಕಾರ ಕೊಟ್ಟು ಅವನನ್ನು ನಂಬುವಿರೋ ಅವನು ತನ್ನ ಕೃತಜ್ಞತೆಯನ್ನು ತೋರ್ಪಡಿಸುವನು; ಪ್ರಭುಗಳ ಕಾರ್ಯದಲ್ಲಿ ಪ್ರಾಣವನ್ನಾದರೂ ಕೊಡುವನು. ಈ ವಿಷಯದಲ್ಲಿ ಅನೇಕ ಉದಾಹರಣೆಗಳಿವೆ.

ಔರಂಗ--ದಾನೇಶಪಂತ್! ನಾನು ನಿಮ್ಮಂತೆ ಶಾಸ್ತ್ರಜ್ಞನಲ್ಲ. ಪುಸ್ತಕದಲ್ಲಿರುವ ಮಾತುಗಳನ್ನು ನಂಬುವವನಲ್ಲ. ಲೋಕಾನುಭವವೇ ನನಗೆ ಶಾಸ್ತ್ರವಚನವು. ಮಾನವ ಶಕ್ತಿಯು ಬಹಳ ನೀಚವಾಗಿ ಕಾಣಲ್ಪಡುತ್ತಿದೆ. ದುರ್ವರ್ತನೆ, ವಂಚನೆ, ವಿಶ್ವಾಸಘಾತಕತನ ಮೊದಲಾದವುಗಳನ್ನು ಅವಲೋಕಿಸುತ್ತಿರುವೆನು. ಆದುದರಿಂದ ಅಧಿಕಾರವು ನನ್ನ ಕೈಯಲ್ಲಿಯೇ ಇರುವುದು. ಕಾಫರರಿಗೆ ಜಿಜಿಯಾ (ತಲೆಗಂದಾಯ) ವನ್ನು ವಿಧಿಸಿದೆನು. ದ್ರೋಹಿಗಳಾದ ರಾಜಪುತ್ರರನ್ನು ಶಿಕ್ಷಿಸುವೆನು. ಮಹಾರಾಷ್ಟ್ರರನ್ನು ದಂಡಿಸುವೆನು. ಬಿಜಾಪುರ, ಗೋಲ್ಕೊಂಡದೇಶಗಳನ್ನು ಜಯಿಸುವೆನು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಇರುವ ದೇಶವನ್ನು ಒಬ್ಬನೇ ಪಾಲಿಸುವೆನು.-ಯಾರ ಸಹಾಯವನ್ನೂ ಅಪೇಕ್ಷಿಸೆನು. ಆಲಮ್‌ಗೀರ್ ಬಾದಶಹನು ತನ್ನ ಹೆಸರನ್ನು ಸಾರ್ಥಕಪಡಿಸಿಕೊಳ್ಳುವನು.

ಉತ್ಸಾಹದಿಂದ ಅವನ ಕಣ್ಣುಗಳು ಬಿಗಿಹೋಗಿದ್ದುವು? ಅವನು ತನ್ನ ಗೂಢೋದ್ದೇಶವನ್ನು ಯಾರಿಗೂ ಪ್ರಕಾಶಪಡಿಸಿರಲಿಲ್ಲ. ಆದರೆ, ವರ್ತಿನ ಸಂದರ್ಭದಲ್ಲಿ ಇಂದು ಹಟಾತ್ತಾಗಿ ಅದನ್ನು ತೋರಡಿಸಿದನು. ದಾನೇಶಪಂತನು ತನ್ನ ಬಳಿ ಒಂದೆರಡು ಮಾತುಗಳನ್ನಾಡಿದರೂ ನಷ್ಟವಿಲ್ಲವೆಂದು ನಂಬಿದನು,

ತರುವಾಯ ಮಂದಹಾಸದಿಂದ ಚಕ್ರವರ್ತಿಯು "ಸರಳಹೃದಯನೆ! ಇಂದು ನನ್ನ ಯೋಚನೆಗಳು ಸ್ವಲ್ಪ ಸ್ವಲ್ಪವಾಗಿ ತಿಳಿದವೆ?" ಎಂದು ವೃದ್ಧನನ್ನು ಕೇಳಿದನು.

ಅಲಂಘೀರು ಬಾದಶಹನು ತನ್ನ ದುರಾಲೋಚನೆಗಳನ್ನು ಸ್ವಲ್ಪವಾದರೂ ತಗ್ಗಿಸಿ ದಾನೇಶಪಂತನು ಮಾಡಿದ ಹಿತೋಪದೇಶದಂತೆ ನಡೆದಿದ್ದರೆ ಮೊಗಲ್ ಸಾಮ್ರಾಜ್ಯವು ಅಷ್ಟು ಶೀಘ್ರವಾಗಿ ನಾಶವಾಗುತ್ತಿರಲಿಲ್ಲ.

ಅವರಿಬ್ಬರೂ ಸಂಭಾಷಿಸುವ ಸಮಯದಲ್ಲಿ ಸೈನಿಕನೊಬ್ಬನು ಬಂದು, ಬಗ್ಗಿ ಸಲಾಂಮಾಡಿ, "ಜಹಾಪನಾ! ರಾಮಸಿಂಗರವರು ತಮ್ಮ ದರ್ಶನಕ್ಕಾಗಿ ಬಂದಿರು ವರು." ಎಂದನು.

"ಬರಲಿ" ಎಂದು ಚಕ್ರವರ್ತಿಯು ಅವನಿಗೆ ಆಜ್ಞಾಪಿಸಿದನು. ಅನಂತರ ರಾಮಸಿಂಹನು ಮಹಲಿನೊಳಕ್ಕೆ ಬಂದನು.

ರಾಮ—ತಮ್ಮ ಸನ್ನಿಧಿಗೆ ಈ ವೇಳೆಯಲ್ಲಿ ಬರಲು ಸಕಾಲವಲ್ಲವಾದರೂ ನಮ್ಮ ತಂದೆಗಳಿಂದ ಅತಿ ಅಗತ್ಯವಾದ ರಾಜಕಾರ್ಯ ವೃತ್ತಾಂತವು ಬಂದುದರಿಂದ ಪ್ರಭುಗಳಿಗೆ ಅದನ್ನು ತಿಳಿಸಲು ಬಂದೆನು.

ಔರಂಗ—ನಿಮ್ಮ ತಂದೆಯವರಿಂದ ನನಗೂ ಈದಿನ ಪತ್ರಿಕೆ ಬಂದಿದೆ ಸಂಗತಿಗಳೂ ತಿಳಿದಿವೆ.

ರಾಮ—ನಮ್ಮ ತಂದೆಯವರು ಶತ್ರುಗಳನ್ನು ಓಡಿಸಿ, ಅವರ ರಾಜಧಾನಿಯಾದ ಬಿಜಾಪುರವನ್ನು ಆಕ್ರಮಿಸಿರುವರು ಆದರೆ, ಸೈನ್ಯವು ಕಡಿಮೆಯಾಗಿರುವುದರಿಂದ ಆ ನಗರವು ಈ ವರೆಗೂ ಅವರ ಕೈವಶವಾಗಲಿಲ್ಲ. ಮತ್ತು ಗೋಲ್ಕೊಂಡ ಸುಲ್ತಾನನು ಬಿಜಾಪುರಕ್ಕೆ ಸಹಾಯ ಮಾಡುವುದಕ್ಕೆ ನಿಕಾನಂಖಾನ್ ಎಂಬ ಸೇನಾಪತಿಯನ್ನು ಬಹಳ ಸೈನ್ಯದೊಡನೆ ಕಳುಹಿಸಿರುವನು.

ಔರಂಗ—ಅಹುದು.

ರಾಮ—ನಾಲ್ಕು ದಿಕ್ಕುಗಳಲ್ಲಿ ಶತ್ರುಗಳು ಮುತ್ತಿದ್ದರೂ, ನಮ್ಮ ತಂದೆಯವರು ಸ್ವಾಮಿಯವರ ಆಜ್ಞಾನುಸಾರ ಈಗಲೂ ಯುದ್ಧಮಾಡುತ್ತಿರುವರು. ಈ ಯುದ್ಧದಲ್ಲಿ ಜಯಪ್ರಾಪ್ತವಾಗುವುದಿಲ್ಲವೆಂದು ತೋರುತ್ತಿದೆ. ಆದುದರಿಂದ ಸ್ವಲ್ಪ ಸೇನೆಯನ್ನು ಕಳುಹಿಸಬೇಕೆಂದು ನಮ್ಮ ತಂದೆಯವರು ಪ್ರಭುಗಳಿಗೆ ಬಿನ್ನಹಿಸುತ್ತಿರುವರು.

ಔರಂಗ—ನಿಮ್ಮ ತಂದೆಯವರು ವೀರಾಗ್ರಗಣ್ಯರು. ತಮ್ಮ ಬಾಹು ಬಲದಿಂದ ಬಿಜಾಪುರವನ್ನು ಸ್ವಾಧೀನಮಾಡಿಕೊಳ್ಳದೆ ಹೋದರೇ ?

ರಾಮ—ಸಾಧ್ಯವಾಗುವವರೆಗೂ ಪ್ರಯತ್ನ ಮಾಡುವರು. ಈ ವರೆಗೂ ಜಯಿಸದೆ ಇದ್ದ ಶಿವಾಜಿ ಪ್ರಭುವನ್ನು ಓಡಿಸಿದರು, ಇದಕ್ಕೆ ಮೊದಲೇ ಆಕ್ರಮಿಸಲ್ಪಡದ ಬಿಜಾಪುರವನ್ನು ಜಯಿಸಿದರು ಈಗ ತಮ್ಮ ಸನ್ನಿಧಿಯಿಂದ ಕೆಲವು ಸೈನ್ಯವನ್ನು ಕಳುಹಲು ಬೇಡುತ್ತಿರುವರು. ಆ ಪ್ರಕಾರ ಮಾಡಿದರೆ ದಕ್ಷಿಣದೇಶವು ಮೊಗಲಾಯರ ವಶವಾಗುವುದು.

ಇಂತಹ ಸಂದರ್ಭದಲ್ಲಿ ಮತ್ತೆ ಯಾವ ಚಕ್ರವರ್ತಿಯಾದರೂ ತಕ್ಕ ಸೇನೆಯನ್ನು ಕಳುಹಿಸಿ, ದಕ್ಷಿಣದೇಶ ವಿಜಯವನ್ನು ಹೊಂದುತ್ತಿದ್ದನು. ತಾನು ಕುಶಾಗ್ರಬುದ್ಧಿಯವನೆಂದೂ, ದೂರದರ್ಶಿಯೆಂದೂ ಅವನ ಅಭಿಪ್ರಾಯ; ಔರಂಗಜೇಬನು ರಾಮಸಿಂಹನ ಸಂಗಡ ಹೀಗೆಂದನು. "ರಾಮಸಿಂಗ್ ! ನಿಮ್ಮ ತಂದೆಯವರು ನನಗೆ ಸ್ನೇಹಿತರು. ಅವರು ವಿಪದ್ದಶೆಯಲ್ಲಿರುವರೆಂದು ಚಿಂತಿಸುತ್ತೇನೆ. ಅವರಿಗೆ ಈ ರೀತಿಯಾಗಿ ಉತ್ತರವನ್ನು ಬರೆಯಿರಿ. ತಮ್ಮ ಅಸಾಧಾರಣ ಬಲದಿಂದ ಜಯವುಂಟಾಗುವುದೆಂದು ಚಕ್ರವರ್ತಿಯು ಭಾವಿಸುತ್ತಿರುವನು. ಆದರೆ, ಈಗ ಡಿಲ್ಲಿಯಲ್ಲಿ ಸೇನೆಗಳು ಕಡಿಮೆಯಾಗಿವೆ. ತಮ್ಮ ಸಹಾಯಕ್ಕೆ ಕಳುಹಿಸಲು ಅನುಕೂಲವಿಲ್ಲ."

ರಾಮಸಿಂಗ—ಜಹಾಪನಾ ! ನಮ್ಮ ತಂದೆಯವರು ಡಿಲ್ಲೀಪ್ರಭುಗಳಿಗೆ ಪುರಾತನ ಸೇವಕರು. ಷಹಜಹಾನ್ ಬಾದಶಹರವರ ಕಾಲದಲ್ಲಿಯೂ ತಮ್ಮ ಕಾಲದಲ್ಲಿಯೂ ಅನೇಕ ಯುದ್ಧಗಳನ್ನು ಮಾಡಿರುವರು. ಅನೇಕ ಕಾರ್ಯಗಳನ್ನು ಸರಿಪಡಿಸಿರುವರು. ಡಿಲ್ಲೀ ಪ್ರಭುವಿನ ಕೆಲಸ ಹೊರತು ಮತ್ತೊಂದು ಉದ್ದೇಶವು ಈ ಜನ್ಮದಲ್ಲಿಲ್ಲ. ಈ ಭಯಂಕರ ಸ್ಥಿತಿಯಲ್ಲಿ ತಾವು ಅವರಿಗೆ ಸಹಾಯಮಾಡದ ಪಕ್ಷದಲ್ಲಿ ಸಸೈನ್ಯವಾಗಿ ಅವರು ಹತರಾಗುವಂತೆ ತೋರುತ್ತದೆ." ಎಂದು ಹೇಳಿದನು.

ತನ್ನ ದೀನ ವಾಕ್ಯಗಳಿಂದ ತುರುಕನ ಎದೆಯು ಕರಗದೆಂದು ರಾಮಸಿಂಹನು ಅರಿಯನು ! ಚಕ್ರವರ್ತಿಯ ಗೂಢಾಭಿಪ್ರಾಯವೇನು? ರಾಜಾ ಜಯಸಿಂಹನು ಮಹಾಪರಾಕ್ರಮಿಯು; ಆತನಿಗೆ ಅನೇಕ ಸೇನೆಗಳಿವೆ. ಅವನ ಕೀರ್ತಿಯು ನಾನಾದಿಕ್ಕುಗಳಲ್ಲಿ ಹರಡಿದೆ. ಮೊದಲಿಂದಲೂ ಆತನು ಡಿಲ್ಲೀಬಾದಶಹನ ಕೈಕೆಳಗೆ ಇದ್ದವನು. ಆತನಿಗೆ ಇರುವ ಅಧಿಕಾರವು ಮತ್ತೆ ಯಾರಿಗೂ ಇಲ್ಲ. ಆದುದರಿಂದ ಸಾರ್ವಭೌಮನು ಜಯಸಿಂಹನನ್ನು ನಂಬಿದ್ದನು. ಈ ಯುದ್ಧದಲ್ಲಿ ಪರಾಜಯವಾದ ಪಕ್ಷ

ದಲ್ಲಿ ಜಯಸಿಂಹನಿಗೆ ಅಧಿಕಾರವೂ, ಕೀರ್ತಿಯೂ ಸ್ವಲ್ಪಮಟ್ಟಿಗೆ ಕಡಮೆಯಾಗುವುದು ; ಮರಣವೇ ಸಂಭವಿಸಿದರೆ ಚಕ್ರವರ್ತಿಯ ಹೃತ್ಕಂಟಕವು ಪರಿಹಾರವಾಗುವುದು. ಜೇಡರ ಹುಳವು ನೇಯುವ ಬಲೆಯಂತೆ ಔರಂಗಜೇಬನ ಕುಷ್ಪತಂತ್ರ ಜಾಲವು ವಿಸ್ತೀರ್ಣವಾದುದು. ಅದರಲ್ಲಿ ಜಯಸಿಂಗನೆಂಬ ಕೀಟವು ಸಗುಲಿಕೊಂಡಿದೆ. ಇನ್ನು ತಪ್ಪಿಸಿಕೊಂಡು ಹೋಗುವ ಮಾತಿಲ್ಲ. ಮಾಯಾಮರ್ಮಗಳನ್ನು ಅರಿಯದ ರಾಮಸಿಂಹನು ಕಣ್ಣೀರು ಬಿಟ್ಟಮಾತ್ರಕ್ಕೆ ಚಕ್ರವರ್ತಿಯು ತನ್ನ ಉದ್ದೇಶವನ್ನು ಬದಲಾಯಿಸುವನೆ ?

ಅನುರಾಗ, ದಯೆ, ಮೊದಲಾದ ಮನೋವೃತ್ತಿಗಳನ್ನು ಔರಂಗಜೇಬನು ನಂಬುವನಲ್ಲ. ಅದಕ್ಕೆ ಆತನು ತನ್ನ ಹೃದಯದಲ್ಲಿ ಸ್ಥಳಕೊಟ್ಟಿಲ್ಲ. ತನ್ನ ಮಾರ್ಗದಲ್ಲಿ ಅಡ್ಡ ಬಂದ ಹುಳುಗಳನ್ನೂ ಸೋದರರನ್ನೂ ಒಂದೇವಿಧವಾದ ಧೀರ ಭಾವದಿಂದ ತುಳಿದು ಹಾಕಿದನು. ತಂದೆಯನ್ನು ಪ್ರಾಣದಿಂದಿರಿಸುವುದು ಪ್ರೇಮದಿಂದಲ್ಲ. ಅಣ್ಣನನ್ನು ವಧಿಸಿದ್ದು ಕ್ರೋಧವಶದಿಂದಲ್ಲ. ಬಾಲಕರಿಗೆ ಉಚಿತವಾದ ವೃತ್ತಿಗಳು ಆತನಲ್ಲಿಲ್ಲ. ಆದುದರಿಂದ ಆತನು ಪ್ರಾಣದಿಂದ ಇರಬಹುದು. ಅಗ್ರಜನು ಬದುಕಿದ್ದರೆ ಮುಂದೆ ಸಿಂಹಾಸನಕ್ಕೆ ಪ್ರತಿಬಂಧಕನಾಗುವನು. 'ಜಲ್ಲಾದ್ ! ಆತನನ್ನು ವಧಿಸಿ ಆಲಂಘೀರುಬಾದಶಹನ ದಾರಿಯನ್ನು ನಿಷ್ಕಂಟಕಮಾಡು.'

(ಇನ್ನು ಜಯಸಿಂಹನು ಸೈನ್ಯಸಹಿತ ಸಾಯಬೇಕಾಗಿದೆ. ಅವನು ಒಳ್ಳೆಯವನೋ, ಕೆಟ್ಟವನೋ, ವಿಶ್ವಾಸಿಯೋ, ದ್ರೋಹಿಯೋ ತಿಳಿಯಬೇಕಾದ ಆಗತ್ಯವಿಲ್ಲ. ಬೇಕಾದುದು ಜಯಸಿಂಹನ ಮೃತ್ಯು ! ಆ ರೀತಿಯೇ ನಡೆಯಿತು ; ಕೆಲವುದಿನಗಳ ತರುವಾಯ ಜಯಸಿಂಹನು ಮೃತಪಟ್ಟನೆಂದು ತಿಳಿಯಬಂದಿತು. ಚಕ್ರವರ್ತಿಯ ಆಜ್ಞಾನುಸಾರ ರಹಸ್ಯವಾಗಿ ಅವನಿಗೆ ವಿಷಪ್ರಯೋಗ ಮಾಡಲ್ಪಟ್ಟಿತೆಂದು, ಆಗಿನ ಚರಿತ್ರಕಾರರು ಕೆಲವರು ಅಭಿಪ್ರಾಯ ಪಟ್ಟಿರುವರು. ಇಂಲಿ)

ಸ್ವಲ್ಪ ಹೊತ್ತಿನಮೇಲೆ ರಾಮಸಿಂಹನು ನಿಟ್ಟುಸಿರುಬಿಟ್ಟು "ದೇವಾ ! ಮತ್ತೊಂದು ವಿಜ್ಞಾಪನೆಯುಂಟು." ಎಂದು ಹೇಳಿದನು.

ಔರಂಗ—ವಿಜ್ಞಾಪಿಸಬಹುದು.

ರಾಮ—ಶಿವಾಜಿ ಛತ್ರಪತಿಯು ಡಿಲ್ಲಿಗೆ ಬಂದಾಗ ನಮ್ಮ ತಂದೆಯವರು ವಾಗ್ದಾನಮಾಡಿರುವರು.

ಔರಂಗ—ನಿಮ್ಮ ತಂದೆಯವರು ನನಗೆ ಆ ಸಂಗತಿಯನ್ನು ತಿಳಿಯಪಡಿಸಿರುವರು.

ರಾಮ—ವಾಗ್ದಾನಮಾಡಿ, ಅದನ್ನು ಪಾಲಿಸದಿರುವುದು ರಾಜಪುತ್ರರ ನಡತೆಗೆ ಬಹಳ ನಿಂದಾಸ್ಪದ. ನಮ್ಮ ಪ್ರಾರ್ಥನೆಯೇನಂದರೆ, ಶಿವಾಜಿಪ್ರಭುವು ಯಾವ ದೋಷವನ್ನು ಮಾಡಿದರೂ, ತಾವು ಆತನನ್ನು ಕ್ಷಮಿಸಿ, ಸ್ವಸ್ಥಾನಕ್ಕೆ ಕಳುಹಿಸಬೇಕು.

ಔರಂಗ—(ಕೋಪವನ್ನು ಅಡಗಿಸಿಕೊಂಡು ಮೆಲ್ಲನೆ) ಚಕ್ರವರ್ತಿಯು ತೋರಿದಂತೆ ಮಾಡುವನು. ನೀವು ಆ ವಿಷಯದಲ್ಲಿ ಚಿಂತಿಸಬೇಡಿರಿ.

(ಶಿವಾಜಿಯೆಂಬ ಎರಡನೆಯ ಹುಳುವು ಚಕ್ರವರ್ತಿಯ ದುರಾಲೋಚನೆಯೆಂಬ ಬಲೆಗೆ ಸಿಕ್ಕಿಕೊಂಡಿತು. ದಾನೇಶಪಂತ-ರಾಮಸಿಂಗರು ಅದನ್ನು ಉದ್ಧರಿಸಲು ಯತ್ನಿಸಿದರು. ಆದರೆ ಆ ಪ್ರಯತ್ನವು ನಿಷ್ಫಲವಾಯಿತು.)

ಜಯಸಿಂಗನ ದೋಷವು ಯಾವುದೋ ಶಿವಾಜಿಯ ದೋಷವೂ ಅದೇ! ಸಂಧಿ ನಡೆದ ತರುವಾಯ ಶಿವಾಜಿಯು ಬಹಳ ಶ್ರಮಪಟ್ಟು ದಿಲ್ಲೀ ಪ್ರಭುವಿಗೆ ದಕ್ಷಿಣ ದೇಶದಲ್ಲಿ ಸಹಾಯಮಾಡಿದನು. ಆದರೇನು? ಶಿವಾಜಿಯು ಪರಾಕ್ರಮಶಾಲಿ, ವಿಸ್ತೀರ್ಣವಾದ ರಾಜ್ಯಕ್ಕೆ ಪ್ರಭುವು; ಬಹಳ ಐಶ್ವರ್ಯವಂತನು. ಆದುದರಿಂದ ಚಕ್ರವರ್ತಿಯು ಅವನನ್ನು ನಂಬುವನೆ?

ನಾವು ಯಾರನ್ನು ನಂಬುವುದಿಲ್ಲವೋ ಅವರು ಕ್ರಮೇಣ ನಮ್ಮಲ್ಲಿರುವ ವಿಶ್ವಾಸವನ್ನು ಬಿಡುವರು. ರಾಜಪುತ್ರರು ಮಹಾರಾಷ್ಟ್ರರಿಗೆ ವಿರೋಧಿಗಳಾದುದರಿಂದಲೇ ಮೊಗಲ ಸಾಮ್ರಾಜ್ಯವು ಹಾಳಾಯಿತು.

---

## ಹತ್ತೊಂಭತ್ತನೆಯ ಪ್ರಕರಣ.

---

(ಅಸ್ವಸ್ಥತೆ)

ಶಿವಾಜಿಗೆ ವ್ಯಾಧಿಯುಂಟಾಗಿದೆಯೆಂದು ದಿಲ್ಲೀನಗರದಲ್ಲೆಲ್ಲ ಸುದ್ದಿ ಹಬ್ಬಿತು. ಹಗಲೂ ರಾತ್ರಿಯೂ ಅವನಿದ್ದ ಮನೆಯ ಬಾಗಿಲುಗಳೂ, ಕಿಟಿಕಿಗಳೂ

ಮುಚ್ಚಲ್ಪಟ್ಟಿದ್ದವು. ವಿರಾಮವಿಲ್ಲದಂತೆ ವೈದ್ಯರು ಬರುತ್ತಾ ಹೋಗುತ್ತಾ ಇದ್ದರು. ಆ ವ್ಯಾಧಿಯು ಗುಣವಾಗುವುದು ಕಷ್ಟವೆಂದೂ, ಶಿವಾಜಿಯು ಸಾಯುವನೆಂದೂ ಜನರು ಹೇಳಿಕೊಳ್ಳುತ್ತಿದ್ದರು; ಆದರೆ, ಪುನಃ ಅವನು ಜೀವಿಸಿರುವನೆಂಬ ವರ್ತಮಾನವು ತಿಳಿದು ಬರುತ್ತಿದ್ದಿತು. ಕುದುರೆಯ ಸವಾರರೂ, ಸೇನಾಪತಿಗಳೂ ಮಾರ್ಗದಲ್ಲಿ ಹೋಗುತ್ತಾ, ಶಿವಾಜಿಯು ವಾಸಮಾಡಿಕೊಂಡಿದ್ದ ಮನೆಯ ಹತ್ತಿರ ಸ್ವಲ್ಪ ಹೊತ್ತು ನಿಂತುಕೊಂಡು, ಕಾವಲುಗಾರರನ್ನು ಮಹಾರಾಷ್ಟ್ರಾಧೀಶನ ದೇಹಸ್ಥಿತಿಯ ವಿಷಯವಾಗಿ ಕೇಳುತ್ತಿದ್ದರು. ರಾಜರೂ, ಮನ್ಸಬದಾರರೂ, ದಾರಿಯಲ್ಲಿ ಹೋಗುತ್ತಾ, ಅವನ ಬಿಡಾರದ ಕಡೆ ದೃಷ್ಟಿಯನ್ನು ಬೀರುತ್ತಿದ್ದರು. ಔರಂಗಜೇಬನು ಅನೇಕ ಸಾರಿ ಶಿವಾಜಿಗೆ ಹೇಗಿರುವುದೋ ತಿಳಿದುಕೊಳ್ಳುವುದಕ್ಕೆ ಮನುಷ್ಯರನ್ನು ಕಳುಹುತಿದ್ದನು. ರಕ್ಷಕಭಟರು ಮೊದಲಿನಂತೆಯೇ ಜಾಗರೂಕರಾಗಿದ್ದರು. ಅವನ ರೋಗಕ್ಕೆ ನಾಲ್ವರ ಮುಂದೆ ವಿಚಾರವನ್ನು ನಟಿಸುತ್ತಾ, ತನ್ನಲ್ಲಿ "ಈ ರೋಗದಿಂದಲೇ ಶಿವಾಜಿಯು ಸತ್ತುಹೋದರೆ ವಿಶೇಷ ನಿಂದೆಯು ಉಂಟಾಗದು;—ಅನಾಯಾಸವಾಗಿ ಒಂದು ಕಂಟಕವು ಮುರಿದು ಹೋಗುವುದು." ಎಂದು ಔರಂಗಜೇಬನು ಭಾವಿಸುತ್ತಿದ್ದನು.

ಸಾಯಂಕಾಲ, ಒಬ್ಬ ವೃದ್ಧ ಮುಸಲ್ಮಾನ ವೈದ್ಯನು (ಹಕ್ಕೀಂ) ತಲೆಯನ್ನು ಅಲ್ಲಾಡಿಸುತ್ತಾ ಶಿವಾಜಿಯ ಮನೆ ಬಾಗಿಲ ಬಳಿ ನಿಂತನು. "ನೀವು ಶಿವಾಜಿಯವರನ್ನು ನೋಡಲು ಏಕೆ ಅಪೇಕ್ಷಿಸುತ್ತಿರುವಿರಿ?" ಎಂದು ರಕ್ಷಕಭಟರು ಆತನನ್ನು ಕೇಳಿದರು. "ಚಕ್ರವರ್ತಿಯವರ ಅಪ್ಪಣೆಯಂತೆ ರೋಗಿಗೆ ಚಿಕಿತ್ಸೆ ಮಾಡಲು ಬಂದಿರುವೆನು." ಎಂದು ಆತನು ಪ್ರತ್ಯುತ್ತರವಿತ್ತನು. ಕೂಡಲೇ ಅವರು ಆತನಿಗೆ ದಾರಿಯನ್ನು ಬಿಟ್ಟರು.

ಶಿವಾಜಿಯು ಮಂಚದ ಮೇಲೆ ಮಲಗಿದ್ದನು. ಸೇವಕನೊಬ್ಬನು ಬಂದು, ಆತನೊಡನೆ, "ಚಕ್ರವರ್ತಿಯು ಒಬ್ಬ ವೈದ್ಯನನ್ನು ಕಳುಹಿಸಿರುವನು." ಎಂದು ಹೇಳಿದನು. ದುರ್ಮಾರ್ಗನಾದ ಚಕ್ರವರ್ತಿಯು ತನಗೆ ವಿಷಪ್ರಯೋಗ ಮಾಡಿಸಲು ಈ ಉಪಾಯ ಮಾಡಿರುವನೆಂದು ನಂಬಿ, ಶಿವಾಜಿಯು, ತನ್ನ ಸೇವಕನ ಸಂಗಡ, 'ಹಕೀಮರಿಗೆ ಸಲಾಂಹೇಳು. ನಾನು ಹಿಂದುವಾದುದರಿಂದ, ಇತರರ ಚಿಕಿತ್ಸೆಗಳು ಕೆಲಸಕ್ಕೆ ಬಾರವೆಂದೂ, ಹಿಂದೂ ವೈದ್ಯರು ಚಿಕಿತ್ಸೆಮಾಡುತ್ತಿರುವರೆಂದೂ ಈ ಅನು

ಗೃಹವನ್ನು ತೋರಿಸಿದುದಕ್ಕೆ ಬಾದಶಹರವರಿಗೆ ಸಾವಿರ ಸಲಾಂಗಳನ್ನು ಒಪ್ಪಿಸಿದೆನೆಂಡೂ ಆತನ ಸಂಗಡ ಹೇಳು,' ಎಂದನು.

ಸೇವಕನು ಹೊರಗೆ ಬರುವುದಕ್ಕೆ ಮೊದಲೇ ವೈದ್ಯನು ಕರೆಯದೆಯೇ ಒಳಕ್ಕೆ ಬಂಡನು, ಶಿವಾಜಿಗೆ ಕೋಪವುಂಟಾಯಿತು ಆದರೆ ಅದನ್ನು ಅಡಗಿಸಿಕೊಂಡು, ಅವನು ಕ್ಷೀಣಸ್ವರದಿಂದ ವೃದ್ಧನಿಗೆ ಸಲಾಂಮಾಡಿ, ಕುಳಿತುಕೊಳ್ಳುವಂತೆ ನಿಯಮಿಸಿದನು. ಆ ವೃದ್ಧನು ಕುಳಿತುಕೊಂಡನು.

ಆಕಾರವನ್ನು ನೋಡಲು ವೈದ್ಯನಲ್ಲಿ ಯಾವ ಸಂದೇಹವೂ ಉಂಟಾಗುವುದಕ್ಕೆ ಅವಕಾಶವಿಲ್ಲ. ಆತನು ಎಷ್ಟು ವರ್ಷವೋ ಕಳೆದವನಂತೆ (ಮುದುಕನಂತೆ) ಇದ್ದನು. ಬೆಳ್ಳಗಿರುವ ಉದ್ದವಾದ ಗಡ್ಡವು ನೇತಾಡುತ್ತಿದ್ದಿತು. ತಲೆಯಮೇಲಿನ ದೊಡ್ಡ ರುಮಾಲು ಮುಖವನ್ನು ಮುಚ್ಚಿದ್ದಿತು. ಅವನ ಕಂಠಸ್ವರವು ಗಂಭೀರವಾಗಿದ್ದಿತು.

ವೈದ್ಯ—ಮಹಾಶಯಾ ! ಸೇವಕನ ಮೂಲಕ ತಾವು ಕಳುಹಿಸಿದ ವರ್ತಮಾನವನ್ನು ಕೇಳಿದೆನು. ತಾವು ನನ್ನನ್ನು ಅಪೇಕ್ಷಿಸದಿದ್ದರೂ, ಮನುಷ್ಯರನ್ನು ರಕ್ಷಿಸುವುದು ನನ್ನ ಧರ್ಮವಾದುದರಿಂದ ಈ ರೀತಿಯಾಗಿ ಬಂದಿರುವೆನು.

ಶಿವಾಜಿ—(ಕೋಪದಿಂದ ತನ್ನಲ್ಲಿ) ದೇವರೇ ! ಈ ಪೀಡೆಯು ನನ್ನನ್ನು ಎಲ್ಲಿಂದ ಆವರಿಸಿತು ?

ವೈದ್ಯ—ತಮಗೆ ಯಾವ ವ್ಯಾಧಿ ?

ಶಿವಾಜಿ—ಈ ಹಾಳು ರೋಗವೇನೋ ತಿಳಿಯಲಿಲ್ಲ. ಯಾವಾಗಲೂ ಶರೀರವು ಬೆಂಕಿಯಂತೆ ಉರಿಯುತ್ತಿರುವುದು." ಹೃದಯದಲ್ಲಿಯೂ ಎಲ್ಲಾ ಅವಯವಗಳಲ್ಲಿಯೂ ನೋವಾಗಿರುವುದು.

ವೈದ್ಯ—(ಧೈರ್ಯದಿಂದ) ವ್ಯಾಧಿಗಿಂತ ಶತ್ರುವನ್ನು ವಧಿಸಬೇಕೆಂಬ ಕೋರಿಕೆಯು ಶರೀರವನ್ನು ಬಾಧಿಸುತ್ತಿರುವುದು. ಅನೇಕ ವೇಳೆ ಹೃದಯ ವೇದನೆಯು ಮಾನಸಿಕ ಕ್ಲೇಶಗಳಿಂದ ಉಂಟಾಗುವುದು. ತಮಗೂ ಅದೇ ಬಾಧೆಯೋ ?

ವಿಸ್ಮಿತನೂ, ಶಂಕಿತನೂ ಆಗಿ ಶಿವಾಜಿಯು ಆ ವಿಚಿತ್ರ ವೈದ್ಯನಕಡೆ ನೋಡಿದನು. ಹಕೀಮನು ಶಿವಾಜಿಯ ಕೈಯನ್ನೂ ಶರೀರವನ್ನೂ ನೋಡಲು ಅಪೇಕ್ಷಿಸಿದನು. ಇನ್ನೂ ಭೀತನಾಗಿ ಶಿವಾಜಿಯು ವಿಧಿಯಿಲ್ಲದೆ ಹೇಳಿದಂತೆ ಮಾಡಿದನು.

ಸ್ವಲ್ಪ ಹೊತ್ತು ನಾಡಿಯನ್ನು ಪರೀಕ್ಷಿಸಿ, "ತಮ್ಮ ಕಂಠಸ್ವರದಂತೆ ನಾಡಿಯು ಕ್ಷೀಣವಾಗಿಲ್ಲ. ರಕ್ತವು ಚೆನ್ನಾಗಿ ಪ್ರವಹಿಸುತ್ತಿದೆ. ಮಾಂಸ ಖಂಡಗಳು ಹಿಂದಿನಂತೆಯೇ ಗಟ್ಟಿಯಾಗಿವೆ, ಇದೆಲ್ಲವೂ ಬರಿಯ ಕಪಟನಾಟಕವಲ್ಲವೆ?" ಎಂದು ಹಕೀಮನು ಶಿವಾಜಿಯನ್ನು ಕೇಳಿದನು.

ಪುನಃ ಕುಪಿತನಾಗಿ ಶಿವಾಜಿಯು ಆ ವೈದ್ಯನಕಡೆ ನೋಡಿದನು. ಅವನ ಮುಖವು ಗಂಭೀರವಾಗಿದ್ದಿತು. ಕಾಪಟ್ಯವು ಎಷ್ಟುಮಾತ್ರವೂ ಕಂಡುಬರಲಿಲ್ಲ. ಶಿವಾಜಿಯ ನಾಡಿಯಲ್ಲಿ ಉಷ್ಣರಕ್ತವು ಹರಿಯಿತು; ಆದರೆ, ಅವನು ಕೋಪವನ್ನು ಅಡಗಿಸಿಕೊಂಡು, ಕ್ಷೀಣಸ್ವರದಿಂದ ಹೀಗೆಂದನು. "ತಾವು ಹೇಳಿದಂತೆಯೇ ಇತರ ವೈದ್ಯರೂ ಹೇಳಿರುವರು. '' ಈ ಮಹಾವ್ಯಾಧಿಯು ಬಾಹ್ಯಲಕ್ಷಣ ಶೂನ್ಯವಾಗಿದೆ. ಆದರೆ, ದಿನೇ ದಿನೇ ಎಳ್ಳಷ್ಟರಂತೆ ಶಕ್ತಿಯನ್ನು ಹೋಗಲಾಡಿಸುತ್ತಿದೆ.''

ಸ್ವಲ್ಪ ಹೊತ್ತು ಚಿಂತಿಸಿ, ಹಕೀಮನು ಹೀಗೆಂದನು. ''ಅಲ್‌ಥಲಾಜ್ಞಾವೊ ಅಾಜ್ಞ್" ಎಂಬ ನಮ್ಮ ಚಿಕಿತ್ಸಾ ಶಾಸ್ತ್ರದಲ್ಲಿ ಒಂದುಸಾವಿರದಒಂದು ರೋಗಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ಕೆಲವು ಬಾಹ್ಯ ಲಕ್ಷಣ ಶೂನ್ಯಗಳು; ಅವುಗಳಿಗೆ ಚಿಕಿತ್ಸೆ ಮಾಡುವ ಪದ್ಧತಿಯು ಶಾಸ್ತ್ರದಲ್ಲಿರುವುದು. ಒಂದು ಒಕ್‌ಸುತ್‌ನೇ—ಆಸಿಂ—ಇಪಾರಕ್—ಕದ್‌ಿ, 'ಕೆಲಸಮಾಡದೆ ತಪ್ಪಿಸಿಕೊಳ್ಳುವುದಕ್ಕೆ ಖೈದಿಗಳು ನಟಿಸುವ ವ್ಯಾಧಿಗೆ ಚಿಕಿತ್ಸೆ—ಶಿರಚ್ಛೇದನೆಯು.' ಎರಡನೆಯದು ದಿಗ್‌ರ್ಾ — ದೋಖಜ್‌-- ಎಖಿಯಾರ್‌--ಕುನಂದ್‌ ' ಹೆಂಗಸರು ಈ ರೋಗಗಳಿಂದ ನರಕಕ್ಕೆ ಹೋಗುವರು; ಇದಕ್ಕೆ ಔಷಧವು ಪಾದರಕ್ಷಾಪ್ರಹಾರವು. ಮೂರನೆಯದು, ಆಯೇಬಹಾ—ಬಂಗೇರೇಪ್‌ತಾ —ಜೇರೇಬಗಲ್—ಮೋಸಗಾರರು ತಮ್ಮ ಠಕ್ಕುತನವನ್ನು ಅಡಗಿಸುವುದಕ್ಕೆ ಈ ರೋಗವನ್ನು ಅವಲಂಬಿಸುವರು. ಇದಕ್ಕೆ ಔಷಧವಿರುವುದು. ತಮಗೆ ಆ ಔಷಧವನ್ನು ಕೊಡುವೆನು."

ಈ ಮಾತುಗಳು ಶಿವಾಜಿಗೆ ಸರಿಯಾಗಿ ಬೋಧೆಯಾಗಲಿಲ್ಲ; ಆದರೆ, ಹಕೀಮನ ತೀಕ್ಷ್ಣಬುದ್ಧಿಯು ತನ್ನ ಗುಟ್ಟನ್ನು ಹೊರಗೆಡವಿತೆಂದು ಅವನು ನಂಬಿ ಇತಿಕರ್ತವ್ಯತಾ ಮೂಢನಾಗಿ, "ಔಷಧನೇನು ?'' ಎಂದು ವೈದ್ಯನನ್ನು ಕೇಳಿದನು.

ಹಕೀಮ—ಅದು ಬಹಳ ಒಳ್ಳೆಯದೇ. ಆದರೆ, ಉತ್ಕಟವಿಷವುಕೂಡ ಆಗುವುದು. ರಬ್ಬುಲ್-ಅಲ್ಮೀನಾಂ ಎಂಬುದನ್ನು ತಮಗೆ ಕೊಡುವೆನು. ನಿಜವಾಗಿ

ರೋಗವಿದ್ದರೆ ಅದು ತಕ್ಷಣವೇ ಹೋಗುವುದು. ಇಲ್ಲದ ಪಕ್ಷದಲ್ಲಿ ಪ್ರಾಣವು ಕೂಡಲೇ ಹೋಗುವುದು.

ಶಿವಾಜಿಯ ಎದೆಯು ತಟತಟನೆ ಹೊಡೆದುಕೊಂಡಿತು. ಮುಖದಿಂದ ಸ್ವೇದ ಬಿಂದುಗಳು ನೆಲದ ಮೇಲೆ ಬಿದ್ದುವು. ಔಷಧವನ್ನು ಸೇವಿಸುವುದಕ್ಕೆ ಮುಂಚೆ ಅವನ ಮೋಸವು ಗೊತ್ತಾಯಿತು; ಸೇವಿಸಿದರೆ ಮರಣವು ನಿಶ್ಚಯ !

ಹಕೀಮನು ಔಷಧವನ್ನು ಸಿದ್ಧಮಾಡಿದನು !

"ಮುಸಲ್ಮಾನರು ಮುಟ್ಟಿದ ನೀರನ್ನು ಕುಡಿಯೆನು" ಎಂದು ಹೇಳಿ ಶಿವಾಜಿಯು ಕೈಯಿಂದ ಆ ಪಾತ್ರೆಯನ್ನು ದೂರವಾಗಿ ಬಿಸುಟನು. ಹಕೀಮನು ಸ್ವಲ್ಪವಾದರೂ ಕೋಪಹೊಂದದೆ "ಇದು ಕ್ಷೀಣತಾ ಲಕ್ಷಣವಲ್ಲ" ಎಂದು ಮೆಲ್ಲನೆ ಹೇಳಿದನು.

ಅತಿಕಷ್ಟದಿಂದ ಇಷ್ಟು ಹೊತ್ತು ಶಿವಾಜಿಯು ಕೋಪವನ್ನು ನುಂಗಿದ್ದನು ; ಆದರೆ, ಇನ್ನು ಎಷ್ಟುಹೊತ್ತು ಸೈರಿಸಬಲ್ಲನು ? "ರೋಗಿಯನ್ನು ಅಪಹಾಸ್ಯಮಾಡಿದುದಕ್ಕೆ ಇದೇ ಶಿಕ್ಷೆ" ಎಂದು ಹೇಳಿ, ಥಟ್ಟನೆ ಎದ್ದು ವೈದ್ಯನ ಕೆನ್ನೆಗೆ ಒಂದು ಬಲವಾದ ಪೆಟ್ಟನ್ನು ಹಾಕಿ, ಅವನ ಗಡ್ಡವನ್ನು ಬಲವಾಗಿ ಎಳೆದನು.

ಇದೇನು ವಿಚಿತ್ರ ! ಆ ಮೋಸದ ಗಡ್ಡವು ಸಂಪೂರ್ಣವಾಗಿ ಅವನ ಕೈಗೆ ಕಿತ್ತುಬಂದಿತು. ಆ ಏಟಿಗೆ ವೈದ್ಯನು ದೂರವಾಗಿ ಹೋಗಿ ಬಿದ್ದನು. ಶಿವಾಜಿಯು ವಿಸ್ಮಿತನಾಗಿ ನೋಡಿದನು. ವೈದ್ಯನಾಗಿ ಬಂದಿದ್ದ ಸ್ನೇಹಿತನಾದ ತಾನಾಜಿ ಮಾಲಸೂರೆಯು ಕಿಲಕಿಲನೆ ನಗುತ್ತಾ ನಿಂತನು.

ತಾನಾಜಿಯು ಹಾಸ್ಯಮಾಡುವುದನ್ನು ಬಿಟ್ಟು ಬಾಗಿಲನ್ನು ಮುಚ್ಚಿ, ಶಿವಾಜಿಯ ಹತ್ತಿರದಲ್ಲಿ ಕುಳಿತುಕೊಂಡನು. ಅನಂತರ ಹೀಗೆಂದನು:—"ಪ್ರಭುಗಳು ಯಾವಾಗಲೂ ಚಿಕಿತ್ಸೆ ಮಾಡುವವರಿಗೆ ಇಂಥ ಬಹುಮಾನವನ್ನು ಮಾಡುತ್ತಿರುವಿರಲ್ಲವೆ ? ಹಾಗಾದರೆ ರೋಗವು ವಾಸಿಯಾಗುವುದರೊಳಗಾಗಿ ದೇಶದಲ್ಲಿರುವ ವೈದ್ಯರೆಲ್ಲರೂ ಈ ಏಟಿನ ಹೊಡೆತವನ್ನು ನೋಡಬೇಕಾಗುವುದು. ನನಗೆ ಈಗಲೂ ತಲೆ ತಿರುಗುತ್ತಿದೆ "

ಮಂದಹಾಸದಿಂದ ಶಿವಾಜಿಯು ಹೀಗೆಂದನು. " ಮಿತ್ರನೆ ! ದೊಡ್ಡಹುಲಿಯ ಸಂಗಡ ಚೆಲ್ಲಾಟಗಳಾಡುವಾಗ್ಗೆ ಏಟುಗಳು ಬೀಳುತ್ತಿರುವುವು. ಒಳ್ಳೆಯದು !

ನಿನ್ನನ್ನು ನೋಡಿ ಬಹಳ ಸಂತೋಷವಾಯಿತು. ಎಷ್ಟೋದಿನ ನಿನಗಾಗಿ ನಿರೀಕ್ಷಿಸಿದೆನು ! ಸರಿ.....................ವಿಶೇಷವೇನು ?

ತಾನಾಜಿ—ತಮ್ಮ ಅಪ್ಪಣೆಯ ಪ್ರಕಾರ ನಡೆದೆನು. ಒಂದೊಂದಾಗಿ ಹೇಳುವೆನು. ಚಕ್ರವರ್ತಿಯು ಕೊಟ್ಟ ಅಂಗೀಕಾರ ಪತ್ರಿಕೆಗಳಿಂದ ಸೈನಿಕರು ಸುರಕ್ಷಿತವಾಗಿ ದಿಲ್ಲಿಯಿಂದ ಹೊರಟು ಹೋಗಿರುವರು

ಶಿವಾಜಿ—ಭಗವಂತನಿಗೆ ನಮಸ್ಕಾರ ! ಈಗ ನನ್ನ ಮನಸ್ಸು ಶಾಂತಿಹೊಂದಿತು. ಆಕಾಶದಲ್ಲಿ ಹಾರಾಡುವ ಪಕ್ಷಿಯು ಬಹುಕಾಲ ಪಂಜರದಲ್ಲಿರದು ಸಮಯವನ್ನು ನಿರೀಕ್ಷಿಸಿ ತಪ್ಪಿಸಿಕೊಂಡು ಹೋಗಬೇಕು. ನನ್ನ ಪಲಾಯನದ ವಿಷಯದಲ್ಲಿ ನಾನು ಅಷ್ಟು ಕಷ್ಟ ಪಡಬೇಕಾಗಿಲ್ಲ.

ತಾನಾಜಿ—ಸೈನಿಕರು ದಿಲ್ಲಿಯಿಂದ ಹೊರಟು ಹೋಗಿ, ಗೋಸಾಯಿಗಳ ವೇಷದಿಂದ ಮಥುರೆ ಮೊದಲಾದ ಪ್ರದೇಶಗಳಲ್ಲಿ ತಿರುಗುತ್ತಿರುವರು. ಮಥುರೆಯ ಮಾರ್ಗವು ನನಗೆ ಚೆನ್ನಾಗಿ ಗೊತ್ತಿದೆ. ಯಾವ ಯಾವ ಪ್ರದೇಶಗಳಲ್ಲಿ ನಮ್ಮವರನ್ನು ನಿಲ್ಲಿಸಲು ಆಜ್ಞಾಪಿಸಿದಿರೋ ಆಯಾಸ್ಥಳದವರನ್ನು ನಿಲ್ಲಿಸಿರುವೆನು.

ಶಿವಾ—ಮಿತ್ರನೆ ! ನೀನು ಕಾರ್ಯದಲ್ಲಿ ಅಪ್ರತಿಮನು. ತಪ್ಪದೆ ನಾವು ಸ್ವರಾಜ್ಯಕ್ಕೆ ಹೋಗಬಲ್ಲೆವು.

ತಾನಾ—ದಿಲ್ಲಿ ಪ್ರಾಕಾರದ ಹೊರಗಡೆ ತಾವು ಹೇಳಿದಂತೆ ಒಳ್ಳೆಯ ಕುದುರೆಯನ್ನು ಸಿದ್ಧಮಾಡಿರುವೆನ. ದಿನವು ಗೊತ್ತಾದ ತರುವಾಯ ಎಲ್ಲವೂ ಸಿದ್ಧವಾಗುವುದು.

ಶಿವಾ—ಒಳ್ಳೆಯದು.

ತಾನಾ—ರಾಜಾ ಜಯಸಿಂಹರ ಮಕ್ಕಳಾದ ರಾಮಸಿಂಹರ ಮನೆಗೆ ಹೋಗಿ ಅವರ ತಂದೆಯು ತಮಗೆ ಮಾಡಿದ ವಾಗ್ದಾನವನ್ನು ಜ್ಞಾಪಕಪಡಿಸಿದೆನು. ತಂದೆಯಂತೆ ರಾಮಸಿಂಹನು ಸತ್ಯಪ್ರಿಯನು, ವಿಶಾಲಹೃದಯನು. ತಮಗಾಗಿ ಅವನು ತಾನೇ ಚಕ್ರವರ್ತಿಯ ಹತ್ತಿರಕ್ಕೆ ಹೋಗಿ ಅತಿ ದೀನತೆಯಿಂದ ಅವನನ್ನು ಪ್ರಾರ್ಥಿಸಿದನಂತೆ !

ಶಿವಾ—ಔರಂಗಜೇಬನು ಏನಂದನು ?

ತಾನಾ—ಚಕ್ರವರ್ತಿಗೆ ತೋರಿದಂತೆ ಮಾಡುವನಂತೆ !

ಶಿವಾ—ಕಪಟ! ವಿಶ್ವಾಸಘಾತಕ! ಶಿವಾಜಿಯು ಇದಕ್ಕೆ ಪ್ರತಿಫಲವನ್ನು ಕೊಡದಿರುವನೆ?

ತಾನಾ—ರಾಮಸಿಂಹನು ಆ ವಿಷಯದಲ್ಲಿ ವಿಫಲಪ್ರಯತ್ನನಾದನು; ಆದರೆ, ರಾಜಪುತ್ರನ ಮಾತು ಅನ್ಯಥಾ ಆಗುವದಿಲ್ಲವೆಂದೂ, ಧನ, ಸೈನ್ಯ, ಮೊದಲಾದವುಗಳಿಂದ ತಮಗೆ ತಾನು ಸಹಾಯ ಮಾಡುವನೆಂದೂ, ತನ್ನ ಪ್ರಾಣವು ಹೋದರೂ ಸರಿಯೆ, ಇದಕ್ಕೆ ತಪ್ಪುವದಿಲ್ಲವೆಂದೂ ರಾಮಸಿಂಹನು ರೋಷದಿಂದ ನನ್ನಲ್ಲಿ ಹೇಳಿರುವನು.

ಶಿವಾ—ತಂದೆಗೆ ತಕ್ಕಮಗನು! ಆದರೆ, ಆತನನ್ನು ಕಷ್ಟಕ್ಕೆ ಸಿಕ್ಕಿಸಲು ನನಗೆ ಇಷ್ಟವಿಲ್ಲ. ಪಲಾಯನದ ವಿಷಯದಲ್ಲಿ ಆಲೋಚಿಸಿದ ಉಪಾಯವನ್ನು ಆತನ ಸಂಗಡ ಹೇಳಿದೆಯಾ?

ತಾನಾ—ಹೇಳಿದ್ದೇನೆ. ಆತನು ಅದನ್ನು ಕೇಳಿ ಬಹಳ ಸಂತೋಷಪಟ್ಟನು. ಎಲ್ಲ ವಿಧದಲ್ಲಿಯೂ ಆತನು ನಿಮಗೆ ಸಹಾಯ ಮಾಡಲು ಸಿದ್ಧನಾಗಿರುವನು.

ಶಿವಾ—ಒಳ್ಳೆಯದು!

ತಾನಾ—ದಾನೇಶಪಂತನು ಮೊದಲಾದ ದೊಡ್ಡ ಮನುಷ್ಯರನ್ನು ಒಳ್ಳೆಯ ಮಾತಿನಿಂದ ದ್ರವ್ಯಸಹಾಯಮಾಡಿ, ನಿಮ್ಮ ಪಕ್ಷಕ್ಕೆ ತಿರುಗಿಸಿದೆನು. ಹಿಂದುಗಳಲ್ಲಿಯೂ, ಮುಸಲ್ಮಾನರಲ್ಲಿಯೂ ಎಲ್ಲ ದೊಡ್ಡ ಮನುಷ್ಯರೂ ನಿಮ್ಮ ಪಕ್ಷವಾಗಿರುತ್ತಾರೆ. ಆದರೆ, ಚಕ್ರವರ್ತಿಯು ಯಾರ ಆಲೋಚನೆಗೂ ಕಿವಿಗೊಡನು.

ಶಿವಾ—ಎಲ್ಲವೂ ಚೆನ್ನಾಗಿದೆ! ನನಗೆ ಆರೋಗ್ಯವುಂಟಾಗುವದೇ?

ತಾನಾ—(ನಗುತ್ತಾ) ನನ್ನಂತಹ ದೊಡ್ಡವೈದ್ಯನು ತಮ್ಮ ವ್ಯಾಧಿಗೆ ಚಿಕಿತ್ಸೆಮಾಡಲು ಆರಂಭಿಸಿದಾಗಲೇ ರೋಗವು ವಾಸಿಯಾಗದಿರುವದೇ? ಕುಡಿಯುವದಕ್ಕೆ ಒಳ್ಳೆಯ ಪರಬತ್ತನ್ನು ಸಿದ್ಧಮಾಡಿದೆನು. ತಾವು ಅದನ್ನು ಚೆಲ್ಲಿಬಿಟ್ಟರಿ.

ಶಿವಾಜಿಯು ಮತ್ತೊಂದು ಬಟ್ಟಲಿನಲ್ಲಿ ಮಾಡಬೇಕೆಂದು ಹೇಳಿದನು. ತಾನಾಜಿಯು ಪುನಃ ತಯಾರು ಮಾಡಿದ ಪರಬತ್ತನ್ನು ಕುಡಿದು ಅವನು ಸಂತೋಷದಿಂದ,— "ವೈದ್ಯಶ್ರೇಷ್ಠ! ನಿಮ್ಮ ಔಷಧವು ಎಷ್ಟು ಮಧುರವೋ ಅಷ್ಟು ಸುಖಕರವು. ನನ್ನ ವ್ಯಾಧಿಯು ಈಗಲೇ ಗುಣವಾಗುತ್ತಿದೆ" ಎಂದು ಗಟ್ಟಿಯಾಗಿ ಹೇಳಿದನು.

ಶಿವಾಜಿಯು ಅಪ್ಪಣೆ ತೆಗೆದುಕೊಂಡು, ಪುನಃ ಗಡ್ಡವನ್ನೂ, ಪಾಗನ್ನೂ ಧರಿಸಿ, ತಾನಾಜಿಯು ಹೊರಟನು. ಬಾಗಿಲಿನ ಕಾವಲುಗಾರನು ಆತನನ್ನು ನೋಡಿ "ರೋಗವು ಹೇಗಿದೆ ?" ಎಂದು ಕೇಳಿದನು.

"ರೋಗವು ಭಯಂಕರವಾದುದೇ ? ಆದರೆ, ನನ್ನ ಔಷಧವು ಬಹಳ ಕೆಲಸ ಮಾಡಿದೆ. ಜಾಗ್ರತೆಯಲ್ಲಿ ಗುಣವಾಗುವುದು." ಎಂದು ಹೇಳಿ ಹಕೀಮನು ಹೊರ ಹೊರಟನು.

ಒಬ್ಬ ಭಟನು ಎರಡನೆಯವನನ್ನು ನೋಡಿ, ಹಕೀಮನು ಪ್ರಸಿದ್ಧ ವೈದ್ಯನಂತೆ ಕಾಣುತ್ತಾನೆ. ಎಷ್ಟೋಮಂದಿ ವೈದ್ಯರು ಚಿಕಿತ್ಸೆಮಾಡಿದರು. ಈ ವೈದ್ಯನು ಒಂದೇ ದಿನದಲ್ಲಿ ವಾಸಿ ಮಾಡಿರುವನು" ಎಂದು ಹೇಳಿದನು.

"ಏಕೆ ವಾಸಿಮಾಡಬಾರದು ? ಹಕೀಮನು ರಾಜವೈದ್ಯನಲ್ಲವೆ ?" ಎಂದು ಮತ್ತೊಬ್ಬನು ಪ್ರತ್ಯುತ್ತರವಿತ್ತನು. ವೈದ್ಯನು ಹೊರಟುಹೋದನು.

---

# ಇಪ್ಪತ್ತನೆಯ ಪ್ರಕರಣ.

---

(ಆರೋಗ್ಯ)

ಎರಡುಮೂರು ದಿನಗಳ ತರುವಾಯ ಶಿವಾಜಿಯ ರೋಗವು ಗುಣವಾಯಿತೆಂದು ಪ್ರವಾದವೆದ್ದಿತು. ಹಿಂದುಗಳೂ, ಮುಸಲ್ಮಾನರೂ ಸಂತೋಷಪಟ್ಟರು. ಔರಂಗಜೇಬನು ಈ ವರ್ತಮಾನವನ್ನು ಕೇಳಿ, ಯಥೋಚಿತವಾಗಿ ಸಂತೋಷವನ್ನು ತೋರ್ಪಡಿಸಿದನು.

ನಗರದಲ್ಲಿ ಸಂತೋಷವುಂಟಾಯಿತು. ಬ್ರಾಹ್ಮಣರಿಗೂ, ದೇವಾಲಯಗಳಿಗೂ ಶಿವಾಜಿಯು ತಾನು ಮಾಡಿಕೊಂಡಿದ್ದ ಹರಕೆಗಳನ್ನು ಕಳುಹಿಸತೊಡಗಿದನು. ಅಂಗಡಿಗಳಲ್ಲಿ ಸಿಹಿಯಾದ ಪದಾರ್ಥಗಳನ್ನು ಬೆಲೆಕೊಟ್ಟು ತರಿಸಿ, ದೊಡ್ಡಮನುಷ್ಯರ ಮನೆಗೆ ಕಳುಹಿಸಿದನು. ವೈದ್ಯರಿಗೆ ಯಥೋಚಿತವಾಗಿ ದ್ರವ್ಯವನ್ನು ಬಹುಮಾನಮಾಡಿ, ಸಂತೋಷಪಡಿಸಿದನು; ಮಸೀದಿಗಳಿಗೂ, ಫಕೀರರಿಗೂ ಕಾಣಿಕೆಗಳನ್ನು ಕಳುಹಿಸಿದನು.

ಚಕ್ರವರ್ತಿಯ ಮನಸ್ಸು ಹೇಗಿದ್ದಿತೋ ತಿಳಿಯದು. ಪಟ್ಟಣಿಗರು ಮಾತ್ರ ಶಿವಾಜಿಯ ಔದಾರ್ಯಕ್ಕೆ ಬಹಳ ಸಂತೋಷಪಟ್ಟು ಅವನನ್ನು ಹೊಗಳುತ್ತಿದ್ದರು. "ದಿಲ್ಲಿಕಾಲಡ್ಡು" ಮೆರೆಯಲಾರಂಭಿಸಿತು. ಯಾರಾದಗೂ ಈ ಕೆಲಸಗಳನ್ನು ನೋಡಿ ವಿಚಾರಹೊಂದಿದರೋ, ಇಲ್ಲವೊ, ತಿಳಿಯದು. ಚಕ್ರವರ್ತಿಯು ಮಾತ್ರ ಚಿಂತಾಕ್ರಾಂತನಾದನು.

ದೊಡ್ಡ ದೊಡ್ಡ ಗೂಡೆಗಳಲ್ಲಿ ಮಿಠಾಯಿಯನ್ನು ಇಡಿಸಿ, ಶಿವಾಜಿಯು ದೆಹಲಿಯಲ್ಲಿರುವ, ಹಿಂದೂ, ಮುಸಲ್ಮಾನ್ ಸ್ನೇಹಿತರ ಮನೆಗೆ ತಾನೇ ಕಳುಹಿಸುತ್ತಿದ್ದನು. ಆ ಗೂಡೆಗಳು ಸುಮಾರು ನಾಲ್ಕು ಅಯ್ದು ಅಡಿಗಳ ಎತ್ತರವಾಗಿದ್ದುವು ಒಂದೊಂದನ್ನು ಅಯ್ದಾರುಮಂದಿ ಹೊತ್ತುಕೊಂಡು ಹೋಗುತ್ತಿದ್ದರು. ಈ ಪ್ರಕಾರ ಕೆಲವು ದಿನಗಳು ರುಚಿಯಾದ ಪದಾರ್ಥಗಳನ್ನು ಧಾರಾಳವಾಗಿ ಹಂಚುತ್ತಿದ್ದನು.

ಒಂದುದಿನ ಸಾಯಂಕಾಲ ಶಿವಾಜಿಯ ಬಿಡಾರದಿಂದ ಎರಡು ದೊಡ್ಡ ಬುಟ್ಟಿಗಳು ಈಚೆಗೆ ಬಂದುವು. "ಇವು ಯಾರ ಮನೆಗೆ" ಎಂದು ಕಾವಲುಗಾರರು ಕೇಳಲು, "ರಾಜಾ ಜಯಸಿಂಗರ ಮನೆಗೆ" ಎಂದು ವಾಹಕರು ಪ್ರತ್ಯುತ್ತರವಿತ್ತರು.

ಕಾವಲುಗಾರರು—ಇನ್ನು ಎಷ್ಟುದಿನಗಳವರೆಗೆ ನಿಮ್ಮ ಪ್ರಭುಗಳು ಈ ರೀತಿಯಾಗಿ ಮಿಠಾಯಿಯನ್ನು ಕಳುಹಿಸುತ್ತಿರುವರು?—ಎಂದು ಕೇಳಿದರು.

"ನಾಳೆಗೆ ಸರಿ" ಎಂದು ಹೇಳಿ ವಾಹಕರು ಹೊರಟುಹೋದರು. ಹೀಗೆ ಸ್ವಲ್ಪದೂರ ಹೋಗಿ, ನಿರ್ಜನಪ್ರದೇಶದಲ್ಲಿ—ಕತ್ತಲೆಯಾಗಿರುವ ಸ್ಥಳದಲ್ಲಿ ಅವೆರಡು ಬುಟ್ಟಿಗಳನ್ನೂ ಕೆಳಗೆ ಇಟ್ಟರು. ಆಗ ಅವರು ಸುತ್ತಲೂ ನೋಡಿದರು ; ಒಬ್ಬನಾದರೂ ಕಾಣಲಿಲ್ಲ. ಸಂಕೇತಮಾಡಲು, ಒಂದು ಗೂಡೆಯಿಂದ ಶಿವಾಜಿಯೂ, ಎರಡನೆಯ ಬುಟ್ಟಿಯಿಂದ ಸಾಂಬಾಜಿಯೂ ಹೊರಕ್ಕೆ ಬಂದು ಭಗವಂತನನ್ನು ಸ್ತೋತ್ರಮಾಡಿದರು.

ತಡೆಮಾಡದೆ ಅವರಿಬ್ಬರೂ ಪ್ರಾಕಾರದ ಇದಿರಿಗೆ ಹೋದರು. ಕತ್ತಲೆದಾರಿಯಲ್ಲಿ ಜನರು ತಿರುಗಾಡುವುದು ಕಡಿಮೆ; ಆದರೂ ಅಡಿಗಡಿಗೆ ಕೆಲವರು ಕಾಣುತ್ತಿದ್ದರು. ಶಿವಾಜಿಗೆ ಇದು ಹೊಸದಲ್ಲ. ಸಾಂಬಾಜಿಯು ಹೆದರುತ್ತಿದ್ದನು. ಧೀರನಾದ ಶಿವಾಜಿಯೂ ಸ್ವಲ್ಪ ಅಧೈರ್ಯಪಡದೆ ಇರಲಿಲ್ಲ.

ಎದೆಯ ಗುಂಡಿಗೆಯು ಹೊಡೆದುಕೊಳ್ಳುತ್ತಿರಲು, ಇಬ್ಬರೂ ಪ್ರಾಕಾರವನ್ನು ಸೇರಿದರು. ಅಲ್ಲಿಯ ಕಾವಲುಗಾರನೊಬ್ಬನು "ಅಲ್ಲಿ ಹೋಗುವವರು ಯಾರು ?" ಎಂದು ಅವರನ್ನು ಕೇಳಿದನು.

ಶಿವಾಜಿ—ನಾವು ಗೋಸಾಯಿಗಳು

"ಹರೇರ್ನಾಮ ಹರೇರ್ನಾಮ, ಹರೇರ್ನಾಮೈವಕೇವಲಂ"

ಕಾವಲು—ಎಲ್ಲಿಗೆ ಹೋಗುತ್ತಿರುವಿರಿ ?

ಶಿವಾಜಿ—ಮಧುರಾ ಕ್ಷೇತ್ರಕ್ಕೆ.

"ಕಲೌನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವಗತಿರನ್ಯಥಾ."

ಇಬ್ಬರೂ ಬಾಗಿಲನ್ನು ದಾಟಿದರು. ಗೋಡೆಯ ಹೊರಗೆ ಕೂಡ ಬಾಗಿಲು ಗಳಿದ್ದುವು. ಅವುಗಳನ್ನು ದಾಟಿ, ಅವರು ವೇಗವಾಗಿ ಮುಂದಕ್ಕೆ ಹೋದರು. ದೂರದಲ್ಲಿ ಒಂದು ಮರಕ್ಕೆ ಒಂದು ಕುದುರೆಯು ಕಟ್ಟಲ್ಪಟ್ಟಿದ್ದಿತು. ನೋಡಲು ಅದು ತಾನಾಜಿಯು ಹೇಳಿದ ಕುದುರೆಯೇ.

ಶಿವಾ—ಭಾಯಿಸಾ ಅಶ್ವರಕ್ಷಕ್, ತುಂಹಾರಾನಾವ್‌ಕ್ಯಾಹೈ ?

ಅ—ಜಾನ್ಕೀನಾಥ್.

ಶಿವಾ— ಕಹಾಂಜಾತೇಹೋ ?

ಅ—ಮಧುರಾಪುರಿ.

ಶಿವಾ—ಸಬ್‌ಠೀಕ್‌ಹೈ ?

ಶಿವಾಜಿಯು ಕುದುರೆಯಮೇಲೆ ಹತ್ತಿ, ಸಾಂಬಾಜಿಯನ್ನು ತನ್ನ ಹಿಂದೆ ಕುಳ್ಳಿರಿಸಿಕೊಂಡನು. ಆ ರಾತ್ರಿಯ ವೇಳೆ, ಹಳ್ಳಿಗಳೆಲ್ಲ ನಿಶ್ಶಬ್ದವಾಗಿರಲು, ಅವರು ಪ್ರಯಾಣಮಾಡುತ್ತಿದ್ದರು. ಆಕಾಶದಲ್ಲಿ ನಕ್ಷತ್ರಗಳು ಮಿಣುಗುತ್ತಿದ್ದುವು. ಮೋಡ ಗಳು ಆಕಾಶವನ್ನು ಆವರಿಸಿದ್ದುವು. ವರ್ಷಾಕಾಲವಾದುದರಿಂದ ಯಮುನಾ ನದಿಯು ತುಂಬಿ ವೇಗವಾಗಿ ಹರಿಯುತ್ತಿದ್ದಿತು. ದಾರಿಯು ಕೆಸರಿನಿಂದ ತುಂಬಿದ್ದಿತು. ಶಿವಾಜಿಯು ಆತುರದಿಂದ ಕುದುರೆಯನ್ನು ಓಡಿಸುತ್ತಿದ್ದನು.

ದೂರದಲ್ಲಿ ಕುದುರೆಯ ಕಾಲಿನ ಶಬ್ದವನ್ನು ಶಿವಾಜಿಯು ಕೇಳಿದನು. ಆಗ ಅವನು ಅಡಗಿಕೊಳ್ಳಲು ಯೋಚಿಸಿದನು; ಆದರೆ, ಸುತ್ತಮುತ್ತಲೂ ಒಂದು ಮರವಾ ದರೂ ಇಲ್ಲದುದರಿಂದ ವಿಧಿಯಿಲ್ಲದೆ ಪ್ರಯಾಣಮಾಡುತ್ತಿದ್ದನು.

ಮೂವರು ಅಶ್ವಾರೋಹಿಗಳು ಡಿಲ್ಲೀನಗರಾಭಿಮುಖರಾಗಿ ವೇಗವಾಗಿ ಬರುತ್ತಿದ್ದರು. ಅವರ ಬರೆಯಲ್ಲಿ ಕತ್ತಿಗಳಿದ್ದುವು. ಶಿವಾಜಿಯ ಗುಂಡಿಗೆಯು ತಟತಟನೆ ಹೊಡೆದುಕೊಂಡಿತು. ಅವರಲ್ಲಿ ಒಬ್ಬನು, "ಅಲ್ಲಿ ಹೋಗುವವರು ಯಾರು ?" ಎಂದು ಕೇಕೆ ಹಾಕಿದನು.

ಶಿವಾಜಿ—ಗೋಸಾಯಿಗಳು.

ಅಶ್ವಾ—ಎಲ್ಲಿಂದ ಬಂದಿರಿ ?

ಶಿವಾಜಿ—ಡಿಲ್ಲೀನಗರದಿಂದ ಬಂದೆವು.

ಅಶ್ವಾ—ನಾವು ದಾರಿಯನ್ನು ತಪ್ಪಿರುವೆವು. ಸರಿಯಾದ ದಾರಿ ಸಿಕ್ಕುವವರೆಗೂ ನಮ್ಮ ಹಿಂದೆ ಬಂದು, ಅನಂತರ ನಿಮ್ಮ ದಾರಿಯಲ್ಲಿ ಹೋಗಬಹುದು.

ಶಿವಾಜಿಯ ಮೇಲೆ ಪರ್ವತನೇ ಕಳಚಿಬಿದ್ದಂತಾಯಿತು. ಅವರು ಹೇಳಿದಂತೆ ಮಾಡದಿದ್ದರೆ, ಬಲವಂತಪಡಿಸುವರು. ಹಿಂದಕ್ಕೆ ಹೋಗಲು ಇಷ್ಟವಿಲ್ಲ. ಏನು ಮಾಡಲೂ ತೋರದೆ ಸುಮ್ಮನಿದ್ದನು.

ಅವರಲ್ಲಿ ಒಬ್ಬನು ಶಿವಾಜಿಯಬಳಿಗೆ ಬಂದು ನೋಡುತ್ತಿರಲು, ಮಿಕ್ಕ ಇಬ್ಬರೂ ಈ ರೀತಿ ಮಾಡಲಾರಂಭಿಸಿದರು.

ಒಬ್ಬನು—ಈ ಕಂಠಧ್ವನಿ ನನಗೆ ತಿಳಿದುದೇ ! ದಖನ್‌ದಲ್ಲಿ ಷಯಿಸ್ತಾಖಾನ ಸಾಹೇಬನಲ್ಲಿ ಬಹುದಿನ ಕೆಲಸಮಾಡಿದೆನು. ಆಗ ಕೇಳಿದ ಧ್ವನಿಯಂತಿರುವುದು. ಈ ಮನುಷ್ಯನು ಗೋಸಾಯಿಯಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು.

ಎರಡನೆ—ಆಗದಿದ್ದರೆ ಏನು ?

ಮೊದಲು—ಅವನು ಶಿವಾಜಿಯೆಂದೇ ನನ್ನ ಅಭಿಪ್ರಾಯ.

ಎರಡ—ಹೋಗೊ. ಭಿಕ್ಷುಕನೆ ! ಶಿವಾಜಿಯು ಡಿಲ್ಲಿಯಲ್ಲಿ ಖೈದಿಯಾಗಿರುವನು.

ಮೊದ—ಶಿವಾಜಿಯು ಸಿಂಹಗಡದಲ್ಲಿರುವನೆಂದು ನಾವೆಲ್ಲರೂ ತಿಳಿದಿದ್ದೆವು ; ಹಟಾತ್ತಾಗಿ ಅವನು ರಾತ್ರಿಯವೇಳೆ ಪೂನಾನಗರದಲ್ಲಿ ಪ್ರವೇಶಿಸಿ ನಮ್ಮೆಲ್ಲರನ್ನೂ ಸಂಹರಿಸಿರುವನು.

ಎರಡ—ಏಕೆ, ಈ ಗಡಿಬಿಡಿ ! ನೆತ್ತಿಯಮೇಲಿನ ಬಟ್ಟೆಯನ್ನು ತೆಗೆದರೆ ಈ ಸಂದೇಹವು ಹೋಗುವುದು.

ಒಬ್ಬ ಸವಾರನು ಭರ್ಜಿಯಿಂದ ಶಿವಾಜಿಯ ಪಾಗನ್ನು ತೆಗೆದು ಹಾಕಿದನು. ಇನ್ನೇನಿದೆ ? ರಹಸ್ಯವು ಹೊರಪಟ್ಟಿತು ! ಅವನು ಶಿವಾಜಿಯ ಗುರುತನ್ನು ಕಂಡು ಹಿಡಿದನು. ಭವಾನೀದೇವಿಯನ್ನು ಸ್ಮರಿಸಿ ಮಹಾರಾಷ್ಟ್ರವೀರನು ನಿಶ್ಚಲಮನಸ್ಕನಾಗಿ ಇದಿರುನೋಡುತ್ತಿದ್ದನು. ಅವನ ದೃಷ್ಟಿಯು ಸಾಂಬಾಜಿಯ ಮೇಲೆಬೀಳಲು, ಕಣ್ಣುಗಳ ತುಂಬ ನೀರುತುಂಬಿತು.

ಹಟಾತ್ತಾಗಿ ಸದ್ದಾಯಿತು ಶಿವಾಜಿಯು ಕಣ್ಣುಗಳನ್ನು ಒರಸಿಕೊಂಡು ನೋಡಲು, ಒಬ್ಬ ರಾಹುತನು ಕೆಳಗೆ ಬಿದ್ದನು. ಎರಡನೆಯವನು ಕುದುರೆಯ ಮೇಲಿಂದ ಜಾರಿ ಬಿದ್ದನು ತತ್‍ಕ್ಷಣವೇ ಮೂರನೇಯವನು ನೆಲಕ್ಕೆ ಉರುಳಿದನು. ಶತ್ರುಗಳು ಮೂವರೂ ಹತರಾದರು.

"ಏನಿದು !" ಎಂದು ನೋಡುತ್ತಿರಲು, ಜಾನಕೀನಾಥನು ಪ್ರತ್ಯಕ್ಷನಾದನು. ಆತನೇ ಬಾಣಗಳನ್ನು ಬಿಟ್ಟು ಮುಸಲ್ಮಾನರ ಪ್ರಾಣಗಳನ್ನು ತೆಗೆದನು. ಶಿವಾಜಿಯು ಅವನನ್ನು ಸ್ತೋತ್ರಮಾಡಿದನು; ಮತ್ತು ಆಶ್ಚರ್ಯಪಟ್ಟನು. ಏಕೆಂದರೆ, ಅವನು ಕುದುರೆಯವನಲ್ಲ—ವೇಷಧಾರಿಯಾದ ಸೀತಾಪತಿ !

ಶಿವಾಜಿ—ಸೀತಾಪತಿ ! ವಿಪತ್ಸಮಯಗಳಲ್ಲಿ ನಿಮಗಿಂತಲೂ ನನಗೆ ಪರಮ ಮಿತ್ರರು ಯಾರು ? ನಿಮ್ಮನ್ನು ಅಶ್ವಪಾಲಕನನ್ನಾಗಿ ಭಾವಿಸಿದುದಕ್ಕೆ ಕ್ಷಮಿಸಿರಿ ಈ ಕೆಲಸಕ್ಕೆ ತಕ್ಕ ಬಹುಮಾನವನ್ನು ಕೊಡಬಲ್ಲೆನೆ ?

ಗೋಸಾಯಿಯು ಶಿವಾಜಿಯ ಇದಿರಿಗೆ ಬಂದು ಅಡ್ಡಬಿದ್ದು, ಅಂಜಲೀಬದ್ಧನಾಗಿ, ' ಮಹಾರಾಜಾ ! ಛದ್ಮವೇಷವನ್ನು ಧರಿಸಿದುದಕ್ಕಾಗಿ ನನ್ನನ್ನು ಕ್ಷಮಿಸಬೇಕು. ನಾನು ಕುದುರೆಯ ಸವಾರನಲ್ಲ. ಸೀತಾಪತಿಯಲ್ಲ.—ತಮ್ಮ ಪುರಾತನ ಸೇವಕನೂ, ರಾಜದ್ರೋಹಿಯೆಂದು ಹೊರಡಿಸಲ್ಪಟ್ಟವನೂ ಆದ ರಘುನಾಥನು. ತಿಳಿವಳಿಕೆಯುಂಟಾದುದು ಮೊದಲು ತಮ್ಮ ಅಧೀನದಲ್ಲಿಯೇ ಇದ್ದೆನು. ಇನ್ನೂ ಇರಬೇಕೆಂದು ಯೋಚಿಸಿದ್ದೇನೆ. ಇದಕ್ಕಿಂತ ನನಗೆ ಬೇರೆ ಅಪೇಕ್ಷೆಯಿಲ್ಲ. ನನ್ನ ತಪ್ಪುಗಳನ್ನು ಪ್ರಭುಗಳು ಕ್ಷಮಿಸಬೇಕು '' ಎಂದು ಹೇಳಿದನು.

ಶಿವಾಜಿಯು ನಡುಗಿಬಿದ್ದು, " ರಘುನಾಥಾ ! ನಿನ್ನ ವಿಷಯದಲ್ಲಿ ಶಿವಾಜಿಯು ಬಹಳ ಚಿಂತಿಸುತ್ತಿರುವನು. ಆದರೆ, ನೀನು ಈ ಮಹಾಕಾರ್ಯದಿಂದ ಒಳ್ಳೆಯ ಶಿಕ್ಷೆ

ಯನ್ನು ಕೊಟ್ಟಿರುತ್ತಿ. ಹಿಂದಿನ ಸಂಗತಿಗಳನ್ನು ಜ್ಞಾಪಿಸಿಕೊಂಡರೆ ಎದೆಯು ಒಡೆದು ಹೋಗುವುದು. ಬದುಕಿರುವವರೆಗೂ ಶಿವಾಜಿಯು ನಿನ್ನ ಸುಗುಣಗಳನ್ನು ಮರೆಯನು" ಎಂದು ಹೇಳಿದನು.

ಆದಿನ, ರಘುನಾಥನ ವ್ರತವು ಸಮಾಪ್ತವಾಯಿತು. ಶಿವಾಜಿಯ ಹೃದಯ ಶಲ್ಯವು ಹೊರಟುಹೋಯಿತು.

---

## ಇಪ್ಪತ್ತೊಂದನೆಯ ಪ್ರಕರಣ.

---

### (ಪರಿವರ್ತನೆ)

ಕೆತ್ತಲೆಯಾದ ತರುವಾಯ ಸರಳಬಾಲೆಯು ಸೀತಾಪತಿಯನ್ನು ಕಳುಹಿಸಿ, ತನ್ನ ಮನೆಗೆ ಹೊರಟು ಹೋದಳು. ಆದರೆ, ಮನೆಗೆ ಹೋದಕೂಡಲೆ, ಶೂನ್ಯ ಹೃದಯಳಾದಳು. ಸ್ವದೇಶ ಯೋಧನನ್ನು ಮೊದಲನೇ ಸಾರಿ ನೋಡಿದ ಮಾತ್ರದಿಂದಲೇ ಅವಳು ವಿಸ್ಮಿತಳಾಗಿ ಆನಂದಭರಿತಳಾದಳು. ಯಾರನ್ನು ಕೆಲವು ತಿಂಗಳಿಂದ ಹೃದಯೇಶ್ವರನನ್ನಾಗಿ ಭಾವಿಸಿದ್ದಳೋ ಯಾರಿಗೆ ಜನಾರ್ದನನು ತನ್ನನ್ನು ಕೊಟ್ಟು ವಿವಾಹ ಮಾಡುವುದಕ್ಕೆ ಸಮ್ಮತಿಸಿದ್ದನೋ, ಆ ರಘುನಾಥನು ಕಾಣಲ್ಪಡದೆ ಹೋದುದರಿಂದ ಅವಳು ಚಿಂತಾಕ್ರಾಂತಳಾದಳು.

ಒಂದೊಂದು ಸಾರಿ ಮಾವಿನ ತೋಪಿನಲ್ಲಿ ಸಂಚರಿಸುತ್ತಿರುವಾಗ ಹಿಂದಿನ ಸಂಗತಿಗಳು ಅವಳ ಜ್ಞಾಪಕಕ್ಕೆ ಬರುತ್ತಿದ್ದುವು. ತೋರಣದುರ್ಗ, ಬರುವಿಕೆ, ಹೂವಿನ ತೋಟ, ಕಂಠಮಾಲೆ, ರಾಜಗಡದುರ್ಗ, ಇತ್ಯಾದಿಗಳು ನೆನಪಿಗೆ ಬಂದುವು. ನಿಶ್ಶಬ್ದವಾಗಿ ಅವಳ ಗಂಡಸ್ಥಳದಿಂದ ಬಾಷ್ಪಕಣಗಳು ಉದುರಿದುವು. ಒಂದೊಂದು ಸಾರಿ ರಾತ್ರಿಯವೇಳೆ ಹೃತ್ಕವಾಟವು ಉದ್ಘಾಟವಾಗಿ, ಭಾದ್ರಪದ ಮಾಸದ ತರಂಗಿಣಿಯಂತೆ ಶೋಕಪ್ರವಾಹವು ಮಿತಿಮೀರಿ ಹರಿಯುತ್ತಿದ್ದಿತು. ಆಗ ಹತ್ತಿರ ನೋಡುವವರು ಯಾರೂ ಇಲ್ಲದಿದ್ದುದರಿಂದ ಅವಳು ಹೊಟ್ಟೆಯು ಒಡೆದುಹೋಗುವಂತೆ ರೋದನ ಮಾಡುವಳು; ಶ್ರಾವಣ ಮಾಸದ ವರ್ಷಧಾರೆಯಂತೆ ಕಣ್ಣುಗಳಿಂದ

ಯಾವಾಗಲೂ ಕಣ್ಣೀರು ಹರಿಯುತ್ತಿತ್ತು. ರಜನಿಯು ಪ್ರಕಾಶವಾಗುತ್ತಿದ್ದಿತು ; ಶೋಕ ವಿಹ್ವಲೆಯಾಗಿ ಆ ಯುವತಿಯು ನೆಲದಮೇಲೆ ಬೀಳುತ್ತಿದ್ದಳು.

ಪ್ರಾತಃಕಾಲ, ತೋಟದಲ್ಲಿ ಹೂಗಳನ್ನು ಬಿಡಿಸಿ ಅವುಗಳನ್ನು ತನ್ನ ಹೃದಯದ ಮೇಲೆ ಇಟ್ಟುಕೊಂಡು, ಏನೋ ಚಿಂತಿಸುತ್ತಾ, ಹೂಗಳನ್ನು ನೋಡುತ್ತಿದ್ದಳು. ಸಾಯಂಕಾಲ ಸರಳೆಯು ವೀಣೆಯನ್ನು ಬಾರಿಸುತ್ತಾ, ಗೀತೆಗಳನ್ನು ಹಾಡುತ್ತಿದ್ದಳು. ಆ ಕರುಣಾರಸಪೂರ್ಣವಾದ ಗೀತಗಳನ್ನು ಕೇಳುವವರ ಕಣ್ಣುಗಳಿಂದ ನೀರು ಬರದೆ ಇರುವಂತಿರಲಿಲ್ಲ.

ದುಃಖದಿಂದ ಅವಳ ಶರೀರವು ಬಡವಾಗುತ್ತ ಬಂದಿತು. ಮುಖವು ಬಿಳಿಯ ವರ್ಣವಾಯಿತು. ಜನಾರ್ದನನು ಆಗಲೂ ಅವಳ ಮನಸ್ಥಿತಿಯನ್ನು ಗ್ರಹಿಸಲಿಲ್ಲ ; ಆದರೆ ಶರೀರಸ್ಥಿತಿಯನ್ನು ನೋಡಿ ಚಿಂತಿಸಿ, ಕಾರಣವನ್ನು ತಿಳಿಯದೆ ಇದ್ದನು.

ಸ್ತ್ರೀಯರಲ್ಲಿ ಸ್ತ್ರೀಯರ ರಹಸ್ಯಗಳು ಅಡಗಿಸವು. ಅವಳ ಜತೆಗಾರರು ನೋಡಿ, ಆ ಸಂಗತಿಯನ್ನು ಕಂಡುಹಿಡಿದು, "ಸರಳೆಗೆ ವಿವಾಹ ವಯಸ್ಸಾಗಿದೆ. ಮದುವೆ ಮಾಡಿರಿ." ಎಂದು ಜನಾರ್ದನನ ಸಂಗಡ ಸಂದರ್ಭವನ್ನು ಹೇಳಿಬಿಟ್ಟರು. ಆ ಮಾತುಗಳು ಸರಳೆಗೆ ತಿಳಿದುವು; ಆಗ ಅವಳು "ನನಗೆ ವಿವಾಹ ಮಾಡಿಕೊಳ್ಳಬೇಕೆಂಬ ಇಚ್ಛೆಯಿಲ್ಲ. ಯಾವಾಗಲೂ ನಮ್ಮ ತಂದೆಯವರ ಪಾದಸೇವೆಯನ್ನು ಮಾಡುವಳೆಂದು ಅವರ ಸಂಗಡ ಹೇಳಿರಿ" ಎಂದು ಹೇಳಿದಳು.

ಜನಾರ್ದನನು ಆ ಮಾತುಗಳನ್ನು ಲಕ್ಷ್ಯಮಾಡದೆ ವರನನ್ನು ಹುಡುಕಲಾರಂಭಿಸಿದನು. ರಾಜಪುರೋಹಿತನು ಸಾಕಿರುವ ಕ್ಷತ್ರಿಯ ರಮಣಿಗೆ ವರನು ದೊರಕದೆ ಹೋದನು. ರಾಜಾಜಯಸಿಂಗನ ಬಳಿಯ ಉದ್ಯೋಗಿಗಳಲ್ಲಿ ಒಬ್ಬನು ಸಿಕ್ಕಿದನು. ಈ ವರ್ತಮಾನವು ಸರಳೆಗೆ ತಿಳಿಯಿತು. ಅವಳು ಭಯಪಟ್ಟು ತನ್ನ ಜತೆಗಾತಿಯರನ್ನು ಕುರಿತು, ನಮ್ಮ ತಂದೆಯವರಲ್ಲಿ ಹೀಗೆಂದು ಹೇಳಿರಿ, "ಅವರು ಮತ್ತೊಬ್ಬರಿಗೆ ವಾಗ್ದಾನ ಮಾಡಿರುವರು ಆತನೇ ನನ್ನ ಗಂಡನು. ಇನ್ನೊಬ್ಬನಿಗೆ ಮದುವೆ ಮಾಡುವ ಪಕ್ಷದಲ್ಲಿ ವ್ಯಭಿಚಾರದೋಷವು ತಪ್ಪದೆ ಉಂಟಾಗುವುದು." ಎಂದು ತಿಳಿಸಿದಳು.

ಆ ವೃತ್ತಾಂತವನ್ನು ಕೇಳಿ, ಜನಾರ್ದನನು ಸರಳೆಯನ್ನು ಚೆನ್ನಾಗಿ ಬಯ್ದು, ಮನೋವ್ಯಥೆಯಿಂದ ರೋದನ ಮಾಡಿದನು. ಮಗಳ ಮಾತನ್ನು ಲಕ್ಷ್ಯಮಾಡದೆ

ಆ ಬ್ರಾಹ್ಮಣನು ಲಗ್ನವನ್ನು ನಿರ್ಧರಿಸಿ ರಾಜಾರಾಯಸಿಂಹನಿಗೆ ತಿಳಿಯ ಪಡಿಸಿದನು. ಹೇಗೋ ಆ ಸಂಗತಿಯು ಸರಳೆಯ ಕಿವಿಗೆ ಬೀಳಲು ಅವಳು ಜನಕನ ಪಾದಗಳ ಮೇಲೆ ಬಿದ್ದು, ಬಿಕ್ಕಿ ಬಿಕ್ಕಿ ಅಳುತ್ತಾ "ಈ ವಿಷಯದಲ್ಲಿ ನನ್ನನ್ನು ಅನುಗ್ರಹಿಸಬೇಕು. ಇಲ್ಲದಿದ್ದರೆ ನಿರ್ಭಾಗ್ಯೆಯು ಈ ಜನ್ಮದಲ್ಲಿ ಪುನಃ ಕಾಣಲಾರಳು." ಎಂದು ಹೇಳಿದಳು. ಜನಾರ್ದನನು ಪುತ್ರಿಕಾವಾತ್ಸಲ್ಯದಿಂದ ಅವಳನ್ನು ಮುದ್ದಿಸಿ, ಸಮಾಧಾನ ಪಡಿಸಿದನು.

ಆದರೆ, ಈ ಬಾಲೆಯ ಮಾತನ್ನು ಕೇಳುವವರು ಯಾರು ! ನಾಲ್ವರು ದೊಡ್ಡ ಮನುಷ್ಯರು ಹೇಳಿದಂತೆಯೇ ನಾವು ಮಾಡಬೇಕು. ಮುಹೂರ್ತದ ದಿವಸವು ಸಮೀಪಿಸುತಿದ್ದಿತು. ಜನಾರ್ದನನು ಅವಳಿಗೆ ಅನೇಕವಿಧವಾಗಿ ಬುದ್ಧಿ ಹೇಳಿದನು ; ತಾನೂ ಅತ್ತನು. ಬೈದನು. ಕೊನೆಗೆ ಸೈರಿಸಲಾರದೆ ಮದುವೆಯಾಗುವುದಕ್ಕೆ ಹಿಂದಿನದಿನ, "ಓ ಪಾಪಾತ್ಮಳೆ ! ನಿನ್ನ ಮೂಲಕ ನಾನು ಈ ಮುಪ್ಪಿನಲ್ಲಿ ನಿಂದಿತನಾಗಲೆ ! ಸ್ವಚ್ಛವಾದ ನಿನ್ನ ಜನಕನ ವಂಶಕ್ಕೆ ಕಳಂಕವನ್ನು ತರುವೆಯಾ ?" ಎಂದು ಹೇಳಿದನು.

ಕಣ್ಣೀರು ಸುರಿಯುತ್ತಿರಲು, ಸರಳೆಯು ಮೆಲ್ಲಗೆ ಹೀಗೆಂದಳು,— "ಅಪ್ಪಾ ! ನಾನು ಮೂರ್ಖಳು. ನನ್ನ ದೋಷಗಳನ್ನು ಕ್ಷಮಿಸು. ನನ್ನಿಂದ ನಿಮಗೆ ಅಪಮಾನವುಂಟಾಗದು."

ಈ ಮಾತಿನ ಅರ್ಥವನ್ನು ಜನಾರ್ದನನು ಗ್ರಹಿಸಲಿಲ್ಲ. ಆದರೆ, ಮರುದಿವಸ ಸ್ಪಷ್ಟವಾಯಿತು. ಲಗ್ನದ ವೇಳೆಯಲ್ಲಿ ವಧುವು ಮರುದಿವಸ ಸ್ಪಷ್ಟವಾಯಿತು. ಲಗ್ನದ ವೇಳೆಯಲ್ಲಿ ವಧುವು ಕಾಣಲಿಲ್ಲ !

ಆಗ ಶರತ್ಕಾಲ ! ಬಾಲಸೂರ್ಯನು ಲೋಕಕ್ಕೆ ವಿಕಾಸವನ್ನು ಉಂಟುಮಾಡುತ್ತಿದ್ದನು. ನೀರಾನದಿಯು ತುಂಬಿ ಹರಿಯುತ್ತಿದ್ದಿತು. ಆ ನದಿಯ ಎರಡು ಪಕ್ಕಗಳಲ್ಲಿಯೂ ಗದ್ದೆಗಳೂ, ತೋಟಗಳೂ ಇದ್ದುವು. "ವ್ಯವಸಾಯಗಾರರ ಪ್ರಾರ್ಥನೆಯಿಂದ ಬಹಳ ಸಂತುಷ್ಟಳಾಗಿ ವಸುಂಧರಾದೇವಿಯು ಹಸುರಾದ ವಸ್ತ್ರವನ್ನು ಉಟ್ಟುಕೊಂಡಿರುವಳೋ" ಎಂಬಂತೆ ಇದ್ದಿತು.

ಆ ನದೀತೀರದಲ್ಲಿ ಒಂದು ಗ್ರಾಮವಿದ್ದಿತು. ಊರಹೊರಗೆ ಒಬ್ಬ ಒಕ್ಕಲಿಗನ ಮನೆಯ ಪಡಸಾಲೆಯಲ್ಲಿ ಒಬ್ಬ ಬಾಲೆಯು ಆಟವಾಡುತಿದ್ದಳು. ಹತ್ತಿರ ಒಬ್ಬ ಪರಿಚಾರಿಕೆ ಇದ್ದಳು. ಆ ಒಕ್ಕಲಿಗನ ಹೆಂಡತಿಯು ಮನೆಯ ಕೆಲಸಗಳನ್ನು

ಮಾಡುತ್ತಿದ್ದಳು. ಆ ಮನೆಯನ್ನು ನೋಡಿದರೆ, ಮನೆಯ ಯಜಮಾನನು ಮರ್ಯಾದೆಯುಳ್ಳವನೆಂದು ತೋರುತ್ತಿದ್ದಿತು. ಮುಂಭಾಗದಲ್ಲಿ ಒಂದು ಭತ್ತದ ಕಣಜವಿತ್ತು. ಪಕ್ಕದಲ್ಲಿ ಹಸುಗಳ ಕೊಟ್ಟಿಗೆ ಇದ್ದಿತು. ಮನೆಯ ಯಜಮಾನನು ಒಕ್ಕಲಿಗನು. ಆ ಗ್ರಾಮದ ದೊಡ್ಡ ಮನುಷ್ಯರಲ್ಲಿ ಸೇರಿದವನು ಅವನು ಸ್ವಲ್ಪ ವ್ಯಾಪಾರವನ್ನೂ, ವ್ಯವಸಾಯವನ್ನೂ ಮಾಡುತ್ತಿದ್ದನು.

ಆ ಬಾಲೆಯು ಏಳು ವರುಷದವಳು. ಸ್ಫುರದ್ರೂಪಿ. ಒಂದೆರಡುಸಾರಿ ಅವಳು ನದೀತೀರಕ್ಕೆ ಹೋಗುತ್ತಿದ್ದಳು. ಮತ್ತೊಂದು ಸಾರಿ ಅಡಿಗೆ ಮಾಡುತಿದ್ದ ತಾಯಿಯ ಒಳಗೆ ಹೋಗಿ ನಿಲ್ಲುವಳು. ಇನ್ನೊಂದು ಸಾರಿ ಪರಿಚಾರಕಳ ಕೈ ಹಿಡಿದು ಏನೋ ಮಾತಾಡುವಳು. ನಾವು ಆ ಸಂಭಾಷಣೆಯನ್ನು ಕೇಳಬೇಕಾಗಿದೆ.

ಬಾಲೆ—ಅಕ್ಕಾ ! ನಿನ್ನಿನಂತೆ ಬಲೆಹಾಕಿ ಮೀನುಗಳನ್ನು ಹಿಡಿಯೋಣವೆ?

ಪರಿ—ನದಿಯ ಬಳಿಗೆ ಹೋಗಕೂಡದೆಂದು ತಾಯಿ ಹೇಳಲಿಲ್ಲವೆ ?

ಬಾಲೆ—ಅಮ್ಮನಿಗೆ ತಿಳಿಸೆನು.

ಪರಿ— ಛೀ ! ಬೇಡ—ಅಮ್ಮನು ಬೇಡವೆಂದ ಕೆಲಸವನ್ನು ಎಂದಿಗೂ ಮಾಡಕೂಡದು.

ಬಾ—ನಮ್ಮ ಅಮ್ಮನು ನಿನಗೂ ಅಮ್ಮನೆ ?

ಪರಿ—ಅಹುದು.

ಬಾ—ಅಲ್ಲ. ನಿಜವನ್ನು ನೀನು ಹೇಳಲೊಲ್ಲೆ,—

ಪರಿ—ನಿಜವಾಗಿಯೂ,

ಬಾ—ಅಲ್ಲ. ಅಕ್ಕಾ ! ನೀನು ರಾಜಪುತ್ರ ಸ್ತ್ರೀ; ನಾವು ರಾಜಪುತ್ರರಲ್ಲ.

ಪ—ಅವಳನ್ನು ಮುದ್ದಿಟ್ಟುಕೊಂಡು, "ಹಾಗಾದರೆ ಏಕೆ ಕೇಳಿದೆ?" ಎಂದಳು.

ಬಾಲೆ—ಕೇಳಬಾರದೆ? ನೀನು ಅಮ್ಮನನ್ನು 'ಅಮ್ಮಾ' ಎಂದು ಏಕೆ ಕರೆಯುವೆ ?

ಪರಿ—ನನಗೆ ತಿನ್ನುವುದಕ್ಕೆ ಅನ್ನವಿಟ್ಟು, ಉಟ್ಟುಕೊಳ್ಳುವುದಕ್ಕೆ ಬಟ್ಟೆಯನ್ನು ಕೊಟ್ಟು, ಇರುವುದಕ್ಕೆ ಸ್ಥಳಕೊಟ್ಟು, ಹೊಟ್ಟೆಯಲ್ಲಿ ಹುಟ್ಟಿದ ಮಗಳಂತೆ ಕಾಪಾಡುತ್ತಿರುವಳು. ಅಂಥವಳನ್ನು ಮತ್ತೇನೆಂದು ಕರೆಯಬೇಕು.

ಬಾ—ಅಕ್ಕಾ ! ನಿನ್ನ ಕಣ್ಣುಗಳಲ್ಲಿ ನೀರು ಬರುತ್ತಿದೆಯೇಕೆ ? ನನ್ನ ಮಾತಿನಿಂದ ದುಃಖವಾಯಿತೆ ?

ಪರಿ—ದುಃಖವೇಕೆ ?

ಬಾ—ನಿನ್ನ ಕಣ್ಣುಗಳಲ್ಲಿ ನೀರು ಬಂದಾಗ ನನಗೂ ಬರುವುದು.

ಪರಿ—ಪುನಃ ಬಾಲೆಯನ್ನು ಮುದ್ದಾಡಿದಳು.

ಬಾ—ನಿನಗೆ ನನ್ನ ಮೇಲೆ ವಿಶ್ವಾಸವಿಲ್ಲವೆ ?

ಪರಿ—ಇಲ್ಲದೆಯೇನು ?

ಬಾ—ಎಂದಿಗೂ ಮರೆಯಲಾರೆಯಾ ?

ಪರಿ—ಮರೆಯೆನು. ನೀನು ಕೂಡ ಮರೆವುದಿಲ್ಲವಷ್ಟೆ ?

ಬಾ—ನಾನು ಮರೆಯುವುದಿಲ್ಲ.

ಪರಿ—ನೀನು ಮರೆತುಹೋಗುವೆ ?

ಬಾ—ಯಾವಾಗ ?

ಪರಿ—ನಿನಗೆ ಗಂಡನು ಬಂದಾಗ !

ಬಾ—ಯಾವಾಗ ?!

ಪರಿ—ಒಂದೆರಡು ವರ್ಷಗಳಲ್ಲಿ.

ಬಾ—ನಾನು ನಿನ್ನನ್ನು ಎಂದಿಗೂ ಮರೆಯೆನು. ಅಕ್ಕಾ ! ನನಗೇನೋ ಗಂಡನಿಗಿಂತ ನಿನ್ನಮೇಲೆ ಹೆಚ್ಚು ಪ್ರೇಮ. ಆದರೆ, ನೀನೋ ಅಕ್ಕ ! ಗಂಡನು ಬರುತ್ತಲೇ ನನ್ನನ್ನು ಮರೆತು ಹೋಗುತ್ತೀ ?

ಪರಿಚಾರಕಳ ಕಣ್ಣುಗಳಲ್ಲಿ ನೀರು ಬಂದಿತು—"ನಿನ್ನನ್ನು ನಾನು ಎಂದಿಗೂ ಮರೆಯಲಾರೆನು." ಎಂದು ಹೇಳಿದಳು.

ಬಾ—ನಿನಗೆ ಹೆಚ್ಚು ಪ್ರೇಮವು ಗಂಡನಮೇಲೆಯೋ, ಅಥವಾ ನನ್ನ ಮೇಲೆಯೊ !

ಪರಿ—(ಮಂದಹಾಸದಿಂದ) ಇಬ್ಬರಮೇಲೆಯೂ ಸಮಾನವೇ.

ಬಾ—ಅಕ್ಕಾ ! ಅವನು ಯಾವಾಗ ಬರುವನು ?

ಪರಿ—ಏನೋ ಭಗವಂತನಿಗೇ ಗೊತ್ತು. ಇನ್ನು ಸಾಕು. ಅಡಿಗೆಯ ವೇಳೆಯಾಗಿದೆ. ನಾನು ಹೋಗಬೇಕು.

ದಿಕ್ಕಿಲ್ಲದ ಸರಳಬಾಲೆಯು ಒಬ್ಬ ಒಕ್ಕಲಿಗನ ಮನೆಯನ್ನು ಸೇರಿ, ದಾಸೀ ವೃತ್ತಿಯನ್ನು ಅವಲಂಬಿಸಿದಳೆಂದು ತಿಳಿಸದೆಯೇ ವಾಚಕವರ್ಗಕ್ಕೆ ಗೊತ್ತಾಗಿರ ಬಹುದು. ಅವನ ಹೆಸರು ಗೋಕರ್ಣನಾಥ. ಅವನು ಒಳ್ಳೆಯವನು; ದಯಾಳು. ಅವನ ಹೆಂಡತಿ ಗಂಗಮ್ಮ. ದಿಕ್ಕಿಲ್ಲದ ರಾಜಪುತ್ರ ಯುವತಿಯನ್ನು ತನ್ನ ಮಗಳಂತೆ ನೋಡುತ್ತಿದ್ದಳು. ಸರಳೆಯು ಕೃತಜ್ಞತೆಯಿಂದ ಇರುತ್ತಾ ಮನೆಯ ಕೆಲಸಗಳನ್ನು ಮಾಡುತ್ತಿದ್ದಳು. ಇದರಿಂದ ಯಜಮಾನಿಗೆ ಸ್ವಲ್ಪ ಭಾರವು ತಗ್ಗಿತು. ತರುವಾಯ ದಂಪತಿಗಳು ರಾಜಪುತ್ರ ಯುವತಿಯಲ್ಲಿ ಪ್ರಸನ್ನರಾದರು.

ಸರಳೆಯನ್ನು ಅವರು ತಮ್ಮ ಮಗಳಂತೆ ನೋಡುತ್ತಿದ್ದರು. ಗೋಕರ್ಣನಿಗೆ ನಾಲ್ವತ್ತೈದು ವರುಷ; ಆದರೂ ಅವನು ಯಾವಾಗಲೂ ಕಷ್ಟಪಟ್ಟು ಕೆಲಸ ಮಾಡುತ್ತಿದ್ದುದರಿಂದ ಅವನ ಶರೀರವು ದೃಢವಾಗಿದ್ದಿತು. ಅವನ ಮಗನು ಶಿವಾ ಜಿಯ ಸೈನ್ಯದಲ್ಲಿ ಸೇರಿ ಹೊರಟುಹೋಗಿ, ಅನೇಕ ದಿನಗಳಾಗಿದ್ದುವು. ಅಂದಿನಿಂ ದಲೂ ಅವರಿಗೆ ಸರಳೆಯು ಮಗನೂ ಮಗಳೂ ಆಗಿದ್ದಳು. ಪ್ರಾತಃಕಾಲ ಗೋ ಕರ್ಣನು ಹೊಲಕ್ಕೋ, ಮತ್ತೆ ಯಾವ ಕೆಲಸಕ್ಕೋ ಹೋಗುತಿದ್ದನು. ಸರಳೆಯು ಮನೆಯ ಕೆಲಸವನ್ನು ಮಾಡುತ್ತಿದ್ದಳು. ಯಜಮಾನಳು ಸರಳೆಯ ಸಂಗಡ "ಅಮ್ಮಾ! ನೀನು ದೊಡ್ಡ ವಂಶಸ್ಥಳು. ಈ ಕೆಲಸಗಳನ್ನು ಮಾಡುತ್ತಿರುವಿ. ನಿನ್ನ ಶರೀರವು ಘಾಸಿಯಾಗದಿರುವುದೆ? ನೀನು ಮಾಡಬೇಡ. ನಾನು ಆ ಕೆಲಸ ಗಳನ್ನು ಮಾಡುವೆನು." ಎಂದು ಹೇಳುತ್ತಿದ್ದಳು. ಅದಕ್ಕೆ ಸರಳಬಾಲೆಯು, "ಅಮ್ಮಾ! ನೀನು ನನಗೆ ಮಾಡುವ ಉಪಕಾರಕ್ಕೆ ಪ್ರತಿಫಲವನ್ನು ಕೊಡಬಲ್ಲೆನೆ! ಈ ಕೆಲಸಗಳನ್ನು ಮಾಡುವುದರಿಂದ ನನಗೆ ಶ್ರಮವುಂಟಾಗದು. ನಿಮ್ಮ ಸೇವೆ ಮಾಡುತ್ತಿರುವೆನು. ನನ್ನ ಮೇಲೆ ಅನುಗ್ರಹವಿದ್ದರೆ ಸಾಕು," ಎಂದು ಪ್ರತ್ಯುತ್ತರ ವಿತ್ತಳು. ಆ ಮಾತಿಗೆ ಅವಳ ಕಣ್ಣುಗಳಲ್ಲಿ ನೀರುಸುರಿಯಲು, "ಸರಳೆ! ನಿನಗೆ ಸಮಾನಳಾದ ಸ್ತ್ರೀಯನ್ನು ನಾನು ಎಂದಿಗೂ ನೋಡಲಿಲ್ಲ. ನಿನ್ನಂತಹ ಯುವತಿ ನಮ್ಮ ಜಾತಿಯಲ್ಲಿ ಸಿಕ್ಕುವ ಪಕ್ಷದಲ್ಲಿ ನನ್ನ ಮಗನಿಗೆ ಮದುವೆ ಮಾಡುವೆನು." ಎಂದು ಹೇಳಿ, ಮಗನ ವಿಷಯವು ನೆನಪಿಗೆ ಬರಲು, ಸ್ವಲ್ಪ ಹೊತ್ತು ದುಃಖಿಸಿದಳು.

ಈ ರೀತಿಯಾಗಿ ಕೆಲವು ತಿಂಗಳು ಕಳೆಯಿತು. ಒಂದು ದಿನ ಸಾಯಂಕಾಲ ಗೋಕರ್ಣನಾಥನು ಹೆಂಡತಿಯ ಬಳಿ ಕುಳಿತಿದ್ದನು; ಸ್ವಲ್ಪ ದೂರದಲ್ಲಿ ಸರಳೆಯು

ಬಾಲೆಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಕುಳಿತಿದ್ದಳು. ಆ ಸಮಯದಲ್ಲಿ ಗೋಕರ್ಣನು ಹೆಂಡತಿಯನ್ನು ಕುರಿತು "ಸಮಾಧಾನವಾಗಿರಿ. ಒಳ್ಳೆ ವರ್ತಮಾನ ಬಂದಿದೆ" ಎಂದನು.

ಹೆಂಡತಿ—ಭೀಮಾಜಿಯ ವರ್ತಮಾನವೇನಾದರೂ ತಿಳಿದು ಬಂದಿತೆ!

ಗೋ—ಅಹುದು. ನಮ್ಮ ಹುಡುಗನು ಶಿವಾಜೀ ರಾಜನೊಡನೆ ದಿಲ್ಲೀನಗರಕ್ಕೆ ಹೋಗಿರುವನಂತೆ ಬಾದಶಹನ ಕೈಯಿಂದ ರಾಜರು ತಪ್ಪಿಸಿಕೊಂಡು ಬಂದಿದ್ದಾರೆಂದು ಈ ದಿನ ತಿಳಿಯಿತು. ನಮ್ಮ ಹುಡುಗನೂ ತಪ್ಪದೆ ಅವರೊಡನೆ ಬಂದಿರುವನು.

ಹೆಂಡತಿ—ಭಗವಂತನಿಗೆ ನಮಸ್ಕಾರ! ನಮ್ಮ ಹುಡುಗನನ್ನು ನೋಡಿ ಸುಮಾರು ಒಂದು ವರುಷವಾಯಿತು. ನನ್ನ ಮನೋವ್ಯಥೆಯು ದೇವರಿಗೇ ಗೊತ್ತು!

ಗೋ—ಭೀಮಾಜಿಯು ರಘುನಾಥನೆಂಬ ಹವಾಲ್ದಾರನ ಕೈಕೆಳಗೆ ಇರುವನಂತೆ. ಆತನ ಸಮಾಚಾರವೂ ಕೂಡ ನನಗೆ ತಿಳಿದಿದೆ

ಸರಳಬಾಲೆಗೆ ಪುಲಕಿತ ಗಾತ್ರವಾಯಿತು. ಹೃದಯವು ಅಧೀರವಾಯಿತು. ಗೋಕರ್ಣನ ಮಾತುಗಳನ್ನ ಶ್ರದ್ಧೆಯಿಂದ ಕೇಳತೊಡಗಿದಳು.

ಗೋ—ರಘುನಾಥನು ರಾಜದ್ರೋಹಿಯೆಂದು ರಾಜರು ಅವನನ್ನು ಹೊರಡಿಸಿದ ದಿನ, ನಮ್ಮ ಹುಡುಗನು ಹೇಳಿದ ಮಾತು ಜ್ಞಾಪಕದಲ್ಲಿರುವುದೆ?

ಹೆಂ—ಮಗನ ವ್ಯಥೆಯಲ್ಲಿ ಕೊರಗುತ್ತಿರುವ ನನಗೆ ಜ್ಞಾಪಕವಿಲ್ಲ.

ಗೋ—ಈ ರೀತಿಯಾಗಿ ಹೇಳಿರುವನು.—ಅಪ್ಪಾ! ನಾನು ಹವಾಲ್ದಾರನ ಗುಣಗಳನ್ನು ಚೆನ್ನಾಗಿ ಬಲ್ಲೆ. ಅವನಂತಹ ಶೂರನು, ನಮ್ಮ ಸೈನ್ಯದಲ್ಲಿ ಯಾರೂ ಇಲ್ಲ. ಪ್ರಭುಗಳು ಭ್ರಮೆಪಟ್ಟು ಅವನನ್ನು ಅವಮಾನಿಸಿ ಕಳುಹಿಸಿರುವರು. ಕೆಲವು ದಿನಗಳಲ್ಲಿಯೇ ಅವನ ಸದ್ಗುಣಗಳು ತಿಳಿಯುವುವು.

ಸರಳಬಾಲೆಯ ಹೃದಯವು ಉಬ್ಬಿತು. ಮುಖದಿಂದ ಬೆವರು ಸುರಿಯಿತು.

ಹೆಂಡತಿ—ಯಾವ ರೀತಿ?

ಗೋ—ರಘುನಾಥನು ವೇಷವನ್ನು ಬದಲಾಯಿಸಿ, ರಾಜರ ಹಿಂದೆ ದೆಹಲಿಗೆ ಹೋಗಿ ತನ್ನ ಬುದ್ಧಿಕುಶಲತೆಯಿಂದ ಅವರನ್ನು ಕಾಪಾಡಿದನು. ಮತ್ತು ತನ್ನ ನಿರ್ದೋಷಿತ್ವವನ್ನು ದೃಢಪಡಿಸಿಕೊಂಡನಂತೆ! ಪ್ರಭುಗಳು ಅವನನ್ನು ಅಯ್ದುಸಾವಿರ

ಸೈನ್ಯಕ್ಕೆ ಅಧಿಪತಿಯಾಗಿ ಮಾಡಿರುವರಂತೆ ! ಎಲ್ಲಿ ಕೇಳಿದರೂ ಇದೇ ಸುದ್ದಿ. ಮಹಾರಾಷ್ಟ್ರ ಪ್ರಭುವನ್ನು ರಕ್ಷಿಸಿದ ರಘುನಾಥನನ್ನು ಹೊಗಳದೆ ಇರುವವರೇ ಇಲ್ಲ.

ಸರಳಬಾಲೆಯ ಸ್ಥಿತಿಯನ್ನು ಬೇರೆ ವರ್ಣಿಸಬೇಕೇ ?

---

# ಇಪ್ಪತ್ತೆರಡನೆಯ ಪ್ರಕರಣ.

---

## (ಪುನರಾಗಮನ)

ಅಂದಿನಿಂದ ಸರಳಬಾಲೆಗೆ ಹಿಂದಿನ ಆ ಸೌಂದರ್ಯವು ಪುನಃ ಬರಲಾರಂಭಿಸಿತು. ಬಹುದಿನಗಳ ಮೇಲೆ ಸಂತೋಷವೂ ಆಶೆಯೂ ಹೃದಯದಲ್ಲಿ ಸ್ಥಾನಮಾಡಿಕೊಂಡಿತು ; ನೇತ್ರದ್ವಯವು ಕಾಂತಿಯಿಂದ ಕೂಡಿತು. ಮೊದಲಿಗಿಂತಲೂ ಉಲ್ಲಾಸದಿಂದ ತಿರುಗುತಿದ್ದಳು. ಗೋಕರ್ಣನ ಮಗಳು ಇವಳ ಬದಲಾವಣೆಯನ್ನು ಕಂಡುಹಿಡಿದಳು. ಒಂದುದಿನ ಸಾಯಂಕಾಲ ನದೀ ಘಟ್ಟದಲ್ಲಿ ಕುಳಿತಿರುವಾಗ ಆ ಬಾಲೆಯು ಸರಳೆಯನ್ನು ಕುರಿತು "ಅಕ್ಕಾ ! ಪ್ರತಿದಿನವೂ ನಿನ್ನ ಸೌಂದರ್ಯವು ಹೆಚ್ಚುತ್ತಿದೆ. ಕಾರಣವೇನು ?" ಎಂದು ಕೇಳಿದಳು.

ಸರ—ಯಾರು ಹೇಳಿದರು !

ಬಾಲೆ—ಯಾರಾದರೂ ಹೇಳಬೇಕೇ ? ನಾನು ನೋಡಿ ಗ್ರಹಿಸಲಾರೆನೆ ?

ಸರ—ಗ್ರಹಿಸಲಿಲ್ಲ. ನೋಡಿದುದು ಶುದ್ಧ ಸುಳ್ಳು.

ಬಾ—ಸುಳ್ಳೊ ? ಮೊದಲು ಜಡೆಯಲ್ಲಿ ಹೂವನ್ನು ಮುಡಿದುಕೊಳ್ಳದಿದ್ದವಳು ಈಗ ಮುಡಿದುಕೊಳ್ಳುತ್ತಿರುವೆ; ಕಾರಣವೇನು ? ಇದು ಸುಳ್ಳೋ ?

ಸರ—ಚೀ ! ಹೋಗು.

ಬಾ—ರಹಸ್ಯವಾಗಿ ಮುತ್ತಿನ ಹಾರವನ್ನು ಹಾಕಿಕೊಂಡಿರುತ್ತಿ. ಇದೂ ಕೂಡ ಸುಳ್ಳೇ ?

ಸರ—ಸುಮ್ಮನಿರು.

ಬಾ—ನದಿಯ ತೀರದಲ್ಲಿ ಕುಳಿತುಕೊಂಡು ಬಹಳಹೊತ್ತು ಮುಖವನ್ನು ನೀರಿನಲ್ಲಿ ನೋಡಿಕೊಳ್ಳುತ್ತಿರುವುದು ಸುಳ್ಳೋ ?

ಸರ—ಸುಳ್ಳು ಮಾತುಗಳನ್ನು ಹೇಳಬೇಡ.

ಬಾ—ಗಿಡಗಳ ಮರೆಯಲ್ಲಿ ಕುಳಿತುಕೊಂಡು ಮೆಲ್ಲನೆ ಹಾಡುತ್ತಿದ್ದೆ. ಇದು ಸುಳ್ಳೊ ?

ಸರಳೆಯು ಬಾಲೆಯ ಬಾಯನ್ನು ಮುಚ್ಚಿದಳು. ಕಿಲಕಿಲನೆ ನಗುತ್ತಾ ಬಾಲೆಯು "ನಾನು ಈ ಸಂಗತಿಯನ್ನು ಅಮ್ಮನೊಡನೆ ಹೇಳುವೆನು." ಎಂದು ಬೆದರಿಸಿದಳು.

ಸರ—ಹೇಳಬೇಡ. ನೀನು ಒಳ್ಳೆಯವಳು.

ಬಾ—ಆದರೆ, ಒಂದು ಮಾತು. ಹೂವು, ಹಾರ, ಸಂಗೀತ ಇವು ಏಕೆ ಹೇಳು ?

ಸರ—ಅಮ್ಮನು ನಿನಗೆ ತಲೆಯನ್ನು ಬಾಚಿ, ಹೂ ಮುಡಿಸಿ, ಒಡವೆಗಳನ್ನು ಇಡುವುದೇಕೆ ?

ಬಾ—(ಸ್ವಲ್ಪ ನಾಚಿಕೆಯಿಂದ) ಬರುವ ವರುಷ ನನಗೆ ಮದುವೆಯಾಗುವುದಂತೆ. ಗಂಡನು ಬರುವನಂತೆ.

ಸರ—ನನಗೂ ಬರುವನು.

ಬಾ—ನಿಜವಾಗಿಯೂ ಬರುವನೆ ?

ಸರ—ಅಹುದು, ನಿಜ.

ಆ ವೇಳೆಗೆ ಸರಿಯಾಗಿ ದೀರ್ಘಕಾಯನಾದ ಸನ್ಯಾಸಿಯು "ಹರಹರ ಮಹಾದೇವ" ಎನ್ನುತ್ತಾ ನದೀತೀರದಲ್ಲಿ ಬಂದು ನಿಂತನು. ಸಂಧ್ಯಾಸಮಯ ವಿಭೂತಿಯಿಂದ ಭೂಷಿತನಾಗಿರುವನು. ದೀರ್ಘಾಂಗವು ಜನರ ಮನಸ್ಸನ್ನು ಆಕರ್ಷಿಸುತ್ತಿದೆ. ಅವನನ್ನು ನೋಡಿ ಬಾಲೆಯು ಭಯಪಟ್ಟು ಓಡಿಹೋದಳು. ಸರಳೆಯು ಅವನನ್ನು ದೃಷ್ಟಿಸಿ ನೋಡಿದಳು. ಅವನೇ ಗೋಸಾಯಿ ಸೀತಾಪತಿ

ಸರಳೆಯ ಗುಂಡಿಗೆಯು ತಟತಟನೆ ಹೊಡೆದುಕೊಂಡಿತು. ಭಾವೋದ್ರೇಕದಿಂದ ಶರೀರವು ಕಂಪಿಸಲಾರಂಭಿಸಿತು. ಸರಳೆಯು ಮನಸ್ಸನ್ನು ಬಿಗಿಹಿಡಿದು, ಲಜ್ಜಾಭಯಗಳನ್ನು ಬಿಟ್ಟು, ಸನ್ಯಾಸಿಯಲ್ಲಿ ಹೀಗೆಂದಳು—ಮಹಾತ್ಮಾ ! ಇದಿನ

ನೀವು ಜನಾರ್ದನನ ಮನೆಯಲ್ಲಿ ನೋಡಿದ ನಿಭಾಗ್ಯಳನ್ನು ಈ ದಿನ ಪರಿಚಾರಕ ವೃತ್ತಿಯಲ್ಲಿ ನೋಡಿದಿರಿ. ಮನಃಪೂರ್ವಕವಾಗಿ ವರಿಸಿದ ಗಂಡನ ವಿಶ್ವಾಸದಿಂದ ನನಗೆ ಈ ಗತಿ ಬಂತು. ನನ್ನ ಮನಸ್ಸಿನ ವ್ಯಥೆಯು ದೇವರಿಗೇ ಗೊತ್ತು !

ಕಣ್ಣುಗಳಿಂದ ನೀರು ಸುರಿಯಲು, ಅವನು "ರಘುನಾಥನಿಗಾಗಿ ನೀನು ಇಷ್ಟು ಕಷ್ಟಗಳನ್ನು ಸಹಿಸುತ್ತಿರುವೆಯಾ" ಎಂದು ಕೇಳಿದನು.

ಸರ—"ಪತಿನಾಮವನ್ನು ಸ್ಮರಿಸುವ ದಿನಗಳು ಕಷ್ಟವಾಗಿ ತೋರದು. (ಸನ್ಯಾಸಿಯು ನಿಟ್ಟುಸಿರುಬಿಟ್ಟನು.)

ಸರ—ತಮಗೆ ಆ ಮಹಾನುಭಾವನು ಕಾಣಲ್ಪಟ್ಟನೆ ?

ಸೀತಾ—ಆಃ !

ಸರ—ಸೇವಕಳ ಮಾತನ್ನು ಆತನಿಗೆ ತಿಳಿಸಿದಿರಾ ?

ಸೀತಾ—ತಿಳಿಸಿದೆನು.

ಸರ—ಪ್ರತ್ಯುತ್ತರವನ್ನು ಕೊಟ್ಟನೆ ?

ಸೀತಾ—ರಘುನಾಥನು ಪ್ರತ್ಯುತ್ತರಕೊಡಲಿಲ್ಲ; ಕೇವಲ ನಿನ್ನ ಮಾತುಗಳನ್ನು ನೆನಪಿನಲ್ಲಿಟ್ಟುಕೊಂಡು ಕೀರ್ತಿಯನ್ನು ಸಂಪಾದಿಸುವುದಕ್ಕೆ ಅನೇಕ ಕಷ್ಟಗಳನ್ನು ಸಹಿಸಿದನು.

ಸರ—(ಆಕಾಶದಕಡೆ ದೃಷ್ಟಿಯಿಟ್ಟು ಕೈಗಳನ್ನು ಜೋಡಿಸಿ) ದೇವರಿಗೆ ಹತ್ತುಸಾವಿರ ನಮಸ್ಕಾರಗಳು.

ಸೀತಾ—ದೇವಿಯ ವರಪ್ರಸಾದದಿಂದ ಕಾರ್ಯಸಿದ್ಧಿಯಾದ ಮೇಲೆ ರಘುನಾಥನು ನಿನಗೆ ಒಂದು ಸಂಗತಿಯನ್ನು ಹೇಳಲು ನನ್ನನ್ನು ಕಳುಹಿಸಿರುವನು.

ಸರ—(ಉತ್ಕಂಠತೆಯಿಂದ) ಅದೇನು ?

ಸೀತಾ—"ಈವರೆಗೂ ಸರಳೆಯು ನನ್ನನ್ನು ಜ್ಞಾಪಕವಿಟ್ಟುಕೊಂಡಿರುವಳೆ ?" ಎಂದು ಆತನು ಕೇಳಿರುವನು.

ಸರ—ಜನ್ಮಜನ್ಮಾಂತರಕ್ಕೂ ನಾನು ಆತನನ್ನು ಮರೆಯೆನು.

ಸೀತಾ—ನಿನ್ನ ಅನುರಾಗವು ಆತನಿಗೆ ಗೊತ್ತಾಗಿದೆ; ಆದರೆ ನಾರಿಯರ ಹೃದಯವು ಚಪಲವಾದುದರಿಂದ.......ಯಾರಿಗೆ ಗೊತ್ತು ?........ನೀನು ಆತನನ ಮರೆತಿರುವ ಪಕ್ಷದಲ್ಲಿ...............

ಗೋಸಾಯಿಯ ಚಪಲತೆಯನ್ನು ನೋಡಿ, ಸರಳೆಯು—"ನಾರೀಹೃದಯವು ಚಪಲವಾದುದೆಂದು ನನಗೆ ತಿಳಿಯದು." ಎಂದು ಹೇಳಿದಳು.

ಸೀತಾ—ನನಗೂ ತಿಳಿಯದು; ಆದರೆ ಈ ದಿನ ಪ್ರತ್ಯಕ್ಷವಾಯಿತು.

ಸರ—ವಿಶದವಾಗಿ ಹೇಳಿರಿ.

ಸೀತಾ—ನನ್ನ ಪ್ರಿಯಳು ನನ್ನನ್ನು ಮರೆತಿರುವಳು; ನೋಡಿದರೂ ಗುರುತು ಹಿಡಿಯದೆ ಇರುವಳು.

ಸರ—ಆ ದೌರ್ಭಾಗ್ಯಳಾರು!

ಸೀತಾ—ತೋರಣದುರ್ಗದಲ್ಲಿ ಜನಾರ್ದನದೇವನ ಮನೆಯಲ್ಲಿ ಮೊದಲನೆಯ ಸಾರಿ ನಾನು ಯಾರನ್ನು ನೋಡಿ ಮನಸ್ಸನ್ನು ಇಟ್ಟೆನೋ, ಅವಳೇ ಆ ಸೌಭಾಗ್ಯವತಿ! ಯಾರ ಕಂಠದಲ್ಲಿ ಒಂದು ದಿನ ಮುಕ್ತಾಹಾರವನ್ನು ಹಾಕಿ, ಜೀವಿತವು ಸಫಲವಾಯಿತೆಂದು ನಂಬಿದೆನೋ, ಅವಳೇ ಆ ಪುಣ್ಯವತಿ. ಯಾರ ಕಟಾಕ್ಷವು ನನ್ನ ಕಣ್ಣುಗಳಿಗೆ ಸೂರ್ಯೋದಯವೋ—ಯಾರ ಧ್ವನಿಯು ನನ್ನ ಕಿವಿಗಳಿಗೆ ಸಂಗೀತವೋ—ಯಾರ ಸ್ಪರ್ಶವು ಶರೀರಕ್ಕೆ ಚಂದನಲೇಪವೊ—ಅವಳೇ ನನ್ನ ಮನೋದೇವತೆ! ಈಗ ಗುರುತಿಸಬಲ್ಲಳೆ?

ಆ ಕಂಠಧ್ವನಿಗೆ ಸರಳಬಾಲೆಯ ಹೃದಯವು ಕಂಪಿಸಿತು. ನಕ್ಷತ್ರಗಳ ಬೆಳಕಿನಲ್ಲಿ ಆ ದೀರ್ಘಕಾಯನ ಗುರುತುಹಿಡಿದಳು. ಅವಳ ತಲೆಯು ತಿರುಗಲಾರಂಭಿಸಿತು. ಕಣ್ಣುಗಳು ಮುಚ್ಚಿಹೋದುವು. ಉದ್ರೇಕವನ್ನು ಅಡಗಿಸಿಕೊಂಡು "ಕ್ಷಮಿಸಿ" ಎಂದು ಸರಳೆಯು ಕೈಗಳನ್ನು ಚಾಚಿದಳು. ಬೀಳುವಂತಿದ್ದ ಪ್ರಿಯಳ ಶರೀರವನ್ನು ಹಿಡಿದುಕೊಂಡು, ಮೆಲ್ಲಗೆ ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡನು. ಸರಳೆಗೆ ಸ್ಮೃತಿತಪ್ಪಿತು. ಸ್ವಲ್ಪ ಹೊತ್ತಿಗೆ ಎಚ್ಚರವಾಗಲು, ಕಣ್ಣುಗಳನ್ನು ತೆರೆದಳು. ಹೃದಯೇಶ್ವರನು ತನ್ನನ್ನು ಆಲಿಂಗನೆ ಮಾಡುತಿದ್ದಂತೆ ಕಂಡಳು.

ಆಗ ಅವಳ ಸಂತಪ್ತ ಹೃದಯವು ರಘುನಾಥನ ಸ್ಪರ್ಶದಿಂದ ಶೀತಲವಾಯಿತು. ಇಬ್ಬರ ವಿಶ್ವಾಸವೂ ಒಂದೇ ಆಯಿತು. ಜಲಿಸುತಿದ್ದ ಅವಳ ಕಪೋಲಗಳನ್ನು ಜೀವಿತದ ಮೊದಲನೆಯಸಾರಿ ರಘುನಾಥನ ಕಪೋಲಗಳು ಮುಟ್ಟಿದುವು.

ಆ ಸ್ಪರ್ಶದಿಂದ ಅವಳು ದಿಗ್ಭ್ರಾಂತಳಾದಳು. ಅದು ನಿಜವೆ? ಅಥವಾ ಸ್ವಪ್ನವೆ? ಸರಳಬಾಲೆಯು ಗಾಳಿಗೆ ಸಿಕ್ಕಿದ ಇರುವೆಯಂತೆ ನಡುಗುತ್ತಾ "ಭಗ

ವಂತನೆ! ಇದು ಸ್ವಪ್ನವೇ! ಹಾಗಾಗಿದ್ದ ಪಕ್ಷದಲ್ಲಿ ನನಗೆ ಈ ಸ್ವಪ್ನಾವಸ್ಥೆಯೇ ಇರಲಿ! ಎಚ್ಚರಿಕೆಯನ್ನು ಉಂಟುಮಾಡಬೇಡ.'' ಎಂದು ಪ್ರಾರ್ಥಿಸಿಕೊಂಡಳು.

---

## ಇಪ್ಪತ್ತಮೂರನೆಯ ಪ್ರಕರಣ

---

### (ಆಗಮನ)

ಶಿವಾಜಿ ಛತ್ರಪತಿಯು ದೇಶದೊಳಕ್ಕೆ ಬಂದನೆಂದು ಮಹಾರಾಷ್ಟ್ರವು ಮಹೋಲ್ಲಾಸದಿಂದಿದ್ದಿತು. ಶಿವಾಜಿ ಪ್ರಭುವು ಪುನಃ ಚಕ್ರವರ್ತಿಯೊಡನೆ ಯುದ್ಧವನ್ನು ಪ್ರಾರಂಭಿಸಿ, ತುರುಕನನ್ನು ಸ್ವದೇಶದಿಂದ ಹೊರಡಿಸುವನೆಂದು ಪ್ರಜೆಗಳು ಹೇಳಿಕೊಳ್ಳುತ್ತಾ ಬಂದರು.

ರಾಜಾ ಜಯಸಿಂಹನು ಬಿಜಾಪುರ ನಗರವನ್ನು ಆಕ್ರಮಿಸಿದರೂ ಅದನ್ನು ಸ್ವಾಧೀನಪಡಿಸಿಕೊಳ್ಳಲಾರದೇಹೋದನು. ಆತನು ಸಹಾಯವನ್ನು ಕೋರಿ ದಿಲ್ಲಿಗೆ ಕಳುಹಿದ ವಿಜ್ಞಾಪನೆಗಳು ನಿಷ್ಫಲವಾದುವು! ತನ್ನ ವಿಷಯದಲ್ಲಿ ಔರಂಗಜೇಬನಿಗೆ ಸದಭಿಪ್ರಾಯವಿಲ್ಲವೆಂದು ತಿಳಿದುಕೊಂಡು ಕೊನೆಗೆ ಜಯಸಿಂಹನು ಬಿಜಾಪುರವನ್ನು ಬಿಟ್ಟು ಔರಂಗಾಬಾದಿಗೆ ಹೊರಟು ಹೋದನು. ಅಲ್ಲಿ ಕೂಡ, ಅವನು ಚಕ್ರವರ್ತಿಯ ಕೆಲಸಗಳನ್ನು ಮಾಡುತ್ತಿದ್ದನು. ತನ್ನಲ್ಲಿ ಬಾದಶಹನು ದುರ್ಬುದ್ಧಿಯುಳ್ಳವನಾಗಿರುವನೆಂದು ಕೋಪಿಸಲಿಲ್ಲ. ಕೆಲಸಗಳಲ್ಲಿ ಉದಾಸೀನತೆಯನ್ನು ತೋರ್ಪಡಿಸಲಿಲ್ಲ. ಮಹಾರಾಷ್ಟ್ರವನ್ನು ಬಿಡಕೂಡದೆಂದು ಸ್ಪಷ್ಟವಾಗಿ ಗೋಚರಿಸುವವರೆಗೂ ಜಯಸಿಂಹನು ತನ್ನ ಪ್ರಯತ್ನವನ್ನು ಬಿಡಲಿಲ್ಲ. ಲೋಹಗಡ, ಪುರಂದರ ಮೊದಲಾದ ದುರ್ಗಗಳಲ್ಲಿ ಮೊಗಲಾಯರ ಸೇನೆಗಳನ್ನು ನಿಲ್ಲಿಸಿ, ತನ್ನ ಅಧಿಕಾರದಲ್ಲಿಟ್ಟುಕೊಳ್ಳುವುದಕ್ಕೆ ಅಸಾಧ್ಯವಾದುವುಗಳನ್ನು ಕೆಲಸಕ್ಕೆ ಬಾರದಂತೆ ಧ್ವಂಸಮಾಡಿಸಿದನು. ಬಾದಶಹನು ಜಯಸಿಂಹನು ಕೃತಕಾರ್ಯನಾಗಲಿಲ್ಲವೆಂದು ಕೇಳಿ, ಸಂತೋಷಿಸಿ, ಅವನನ್ನು ಅವಮಾನಿಸಲು ಪದಚ್ಯುತನನ್ನಾಗಿ ಮಾಡಿ ದಿಲ್ಲೀನಗರಕ್ಕೆ ಬರುವಂತೆ ಆಜ್ಞಾಪಿಸಿದನು. ತರುವಾಯ ಆತನ ಪದವಿಗೆ ರಾಜಾ ಜಸ್ವಂತಸಿಂಹನನ್ನು ನಿಯಮಿಸಿದನು.

ಅಂತ್ಯದಿನಗಳಲ್ಲಿ ಈ ಅವಮಾನವು ಸಂಭವಿಸಿದುದರಿಂದ ಜಯಸಿಂಹನ ಮನಸ್ಸು ಕೆಟ್ಟುಹೋಯಿತು. ಅತನು ಮಾರ್ಗಮಧ್ಯದಲ್ಲಿ ರೋಗಪೀಡಿತನಾಗಿ ಮಂಚದಮೇಲೆ ಬಿದ್ದನು.

ಅವಮಾನಿತನೂ, ವ್ಯಾಧಿಪೀಡಿತನೂ, ವೃದ್ಧನೂ ಆದ ರಾಜಾ ಜಯಸಿಂಹನು ಮಲಗಿಕೊಂಡಿರಲು, ಒಂದುದಿನ ಸೇವಕನೊಬ್ಬನು ಸಮೀಪಿಸಿ, "ದೇವಾ! ಮಹಾರಾಷ್ಟ್ರಸೇನಾಪತಿಯು ತಮ್ಮ ದರ್ಶನವನ್ನು ಮಾಡಲು ಬಂದಿರುವನು. ಒಂದುದಿನ ಅವನು ತಮ್ಮ ಪಾದಸನ್ನಿಧಿಯಲ್ಲಿ ಕುಳಿತುಕೊಂಡು ಉಪದೇಶವನ್ನು ಹೊಂದಿದ್ದನಂತೆ, ಮತ್ತು ಈಗ ಗ್ರಹಿಸುವನಂತೆ." ಎಂದು ವಿಜ್ಞಾಪಿಸಿದನು.

"ಆತನನ್ನು ಸನ್ಮಾನಪೂರ್ವಕವಾಗಿ ಒಳಕ್ಕೆ ಕರೆದುಕೊಂಡು ಬಾ. ನನಗೆ ಆ ಪುರುಷನು ಗೊತ್ತು. ಆತನು ನಿಸ್ಸಂಶಯವಾಗಿ ಒಳಗೆ ಬರಬಹುದು." ಎಂದು ಜಯಸಿಂಹನು ಹೇಳಿದನು.

ಆನಂತರ ಮಹಾರಾಷ್ಟ್ರನೊಬ್ಬನು ವೇಷಾಂತರದಿಂದ ಅಲ್ಲಿಗೆ ಬಂದನು. ಜಯಸಿಂಹನು ಕೈನೀಡಿ, "ಸಹೃದಯ, ಶಿವಾಜಿಪ್ರಭೂ! ನಾನು ಮೃತನಾಗುವುದಕ್ಕೆ ಮೊದಲು ನಿಮ್ಮನ್ನು ನೋಡುವ ಭಾಗ್ಯವು ನನಗೆ ಉಂಟಾಯಿತು. ಕೃತಾರ್ಥನಾದೆನು. ಎದ್ದು ಸ್ವಾಗತವೀಯಲು ಶಕ್ತಿಯಿಲ್ಲ. ಕ್ಷಮಿಸಿರಿ" ಎಂದನು.

ಕಣ್ಣುಗಳಲ್ಲಿ ನೀರುತಂದು ಶಿವಾಜಿಯು ಹೀಗೆಂದನು. "ತಾತಾ! ಹಿಂದೆ ನಿಮ್ಮ ಸನ್ನಿಧಿಯಲ್ಲಿ ಅಪ್ಪಣೆ ತೆಗೆದುಕೊಂಡು ಹೋದ ನಾನು ನಿಮ್ಮನ್ನು ಇಷ್ಟು ತ್ವರೆಯಾಗಿ ಈ ಅವಸ್ಥೆಯಲ್ಲಿ ನೋಡುವೆನೆಂದು ಎಂದೂ ತಿಳಿದುಕೊಂಡಿರಲಿಲ್ಲ."

ಜಯ—ರಾಜಾ! ಮಾನವ ಶರೀರವು ಕ್ಷಣಭಂಗುರವಾದುದು. ಇದರಲ್ಲಿ ಆಶ್ಚರ್ಯವೇನು? ನಾವು ಹಿಂದಿನಸಾರಿ ಸೇರಿದ್ದಾಗ, ನೀವು ಮೊಗಲ್ ಸಾಮ್ರಾಜ್ಯ ಗೌರವವನ್ನು ನೋಡಿದ್ದಿರಲ್ಲವೆ? ಈಗ ಆ ಗೌರವವು ಕಾಣಿಸುತ್ತಿದೆಯೆ!

ಶಿವಾ—ಜಗ ಮಹಾರಾಜರು ರಾಜ್ಯಕ್ಕೆ ಮುಖ್ಯ ಸ್ತಂಭವಾಗಿದ್ದರು; ಈಗಲೂ-ಮೊಗಲ್ ಸಾಮ್ರಾಜ್ಯವೆಂಬ ಮಾತೆಲ್ಲಿ!

ಜಯ—ವತ್ಸಾ! ಅದಲ್ಲ; ರಾಜಸ್ಥಾನವು ವೀರಭೂಮಿ; ಜಯಸಿಂಹನು ಮೃತನಾದರೆ ಇನ್ನೊಬ್ಬ ಜಯಸಿಂಹನು ಹುಟ್ಟುವನು. ನನ್ನಂತಹ ಯೋಧರು ಅನೇಕರಿರುವರು. ನಾನು ಹೋದ ಮಾತ್ರದಲ್ಲಿ ರಾಜ್ಯಕ್ಕೆ ನಷ್ಟವಿಲ್ಲ.

ಶಿವಾ—ತಾವು ಹೋಗುವುದಕ್ಕಿಂತ ರಾಜ್ಯಕ್ಕೆ ಇನ್ನೊಂದು ನಷ್ಟವು ಸಂಭವಿಸಬೇಕೆ ?

ಜಯ—ಯೋಧನು ಸತ್ತರೆ ಇನ್ನೊಬ್ಬನು ಸಿದ್ಧನಾಗುವನು; ಆದರೆ ಅಧರ್ಮದಿಂದ ಕೆಡುವ ರಾಜ್ಯವು ಪುನಃ ಸರಿಯಾಗದು. ಅಧರ್ಮಕ್ಕೆ ಜಯವುಂಟಾಗದೆಂದು ಇದುವರೆಗೆ ಹೇಳಿದ್ದೆನು. ಈಗ ನಿಮಗೆ ಪ್ರತ್ಯಕ್ಷ ಪ್ರಮಾಣವು ಸಿಕ್ಕಲಿಲ್ಲವೆ ?

ಶಿವಾ—ಆಹುದು !

ಜಯ—ನಾನು ನಿಮ್ಮನ್ನು ರಾಜಧಾನಿಗೆ ಕಳುಹಿಸಿದಾಗ ನಿಮ್ಮ ಹೃದಯವು ಬಾದಶಹನ ಕಡೆಗೆ ಬಗ್ಗಿತು ; ನಿಮ್ಮಲ್ಲಿ ಅವನು ಸರಿಯಾಗಿ ಪ್ರವರ್ತಿಸಿದ್ದರೆ ಅವನಿಗೆ ದಕ್ಷಿಣದೇಶದಲ್ಲಿ ಮಹಾ ಪರಾಕ್ರಮಶಾಲಿಯಾದ ಮಿತ್ರನು ಇರುತ್ತಿದ್ದನು ; ಆದರೆ ಅವನ ಕಪಟವರ್ತನೆಯಿಂದ ಈಗ ಬಲವಂತ ಶತ್ರುವು ಹುಟ್ಟಿದನು.

ಶಿವಾ—ಮಹಾರಾಜಾ ! ನಿಮ್ಮ ಬುದ್ಧಿಯು ಅಸಾಧಾರಣವಾದುದು, ನೀವು ದೂರದರ್ಶಿಗಳು. ಜಯಸಿಂಹ ಮಹಾರಾಜರು ಪ್ರಜ್ಞಾಶಾಲಿಗಳೆಂದು ಜನರು ಹೇಳುತ್ತಿರುವುದು ಯುಕ್ತವೇ !

ಜಯ—ಷಹಜಹಾನನ ಕಾಲದಿಂದಲೂ ನಾನು ಡಿಲ್ಲಿಯ ಸೇವಕನು. ಶಕ್ಯವಾಗುವವರೆಗೂ ಚಕ್ರವರ್ತಿಗೆ ಉಪಕಾರಮಾಡಿದೆನು. ಸ್ವಜಾತಿ, ವಿಜಾತಿ ಭೇದಗಳನ್ನು ಎಣಿಸಲಿಲ್ಲ ; ನಾನು ದೊಡ್ಡವನೆಂದೂ ಉಳಿದವರು ಚಿಕ್ಕವರೆಂದೂ ವಿವೇಚಿಸಲಿಲ್ಲ. ನನ್ನ ಕೆಲಸಗಳನ್ನು ಎಷ್ಟು ಕಷ್ಟದಿಂದಲಾದರೂ ನಿರ್ವಹಿಸುತಿದ್ದೆನು. ನನ್ನ ವಾರ್ಧಕ್ಯದಲ್ಲಿ ಔರಂಗಜೇಬನು ಮೊದಲನೆಯ ಸಾರಿ ನನಗೆ ಕಷ್ಟವನ್ನುಂಟುಮಾಡಿರುವನು ; ಆದರೂ ನಾನು ಮಾಡಿದ ಕಾರ್ಯಗಳು ಭಗವಂತನ ಅನುಗ್ರಹದಿಂದ ಸತ್ಕಾರ್ಯಗಳಾಗಿವೆ. ಯಾವಯಾವ ದುರ್ಗಗಳಲ್ಲಿ ಮೊಗಲ್ ಸೈನ್ಯಗಳನ್ನು ಇಟ್ಟಿರುವೆನೊ, ಆಯಾದುರ್ಗಗಳು ಯುದ್ಧನಡೆಯದೆ ನಿಮಗೆ ಸಿಕ್ಕವು. ಅಂಬರ್ ಪ್ರಭುಗಳು ಈವರೆಗೆ ಡಿಲ್ಲಿಗೆ ಸ್ನೇಹಿತರಾಗಿದ್ದರು. ಇನ್ನುಮೇಲೆ ಮುಖ್ಯ ವೈರಿಗಳಾಗುವರು.

ಶಿವಾ—ತಾವು ಚೆನ್ನಾಗಿ ಹೇಳಿದಿರಿ. ತನ್ನ ಮೋಸದಿಂದ ಚಕ್ರವರ್ತಿಯು ಅಂಬರ್, ಮಹಾರಾಷ್ಟ್ರ ಇವೆರಡನ್ನು ಬದ್ಧವೈರಿಗಳನ್ನಾಗಿ ಮಾಡಿಕೊಂಡಿರುವನು.

ಜಯ—ಎರಡು ಉದಾಹರಣೆಗಳನ್ನು ಕೊಟ್ಟಿರುವೆನು. ಅಂಬರ್, ಮಹಾರಾಷ್ಟ್ರಗಳಂತೆ ಹಿಂದೂ ದೇಶವೆಲ್ಲವೂ ಆಗುವುದು. ಔರಂಗಜೇಬನು ಹಿಂದೂ

ದೇಶದ ಮಹಾಪುರುಷರನ್ನು ಅವಮಾನಿಸುತ್ತಿರುವನು; ಮಿತ್ರರನ್ನು ಶತ್ರುಗಳನ್ನಾಗಿ ಮಾಡಿಕೊಂಡಿರುವನು. ಹಿಂದುಗಳ ಮೇಲೆ 'ಜೆಜಿಯಾ' ತಲೆಗಂದಾಯವನ್ನು ವಿಧಿಸಿರುವನು. ಅವನು ಕೆಡಹಿಸಿದ ದೇವಾಲಯಗಳು ಇಷ್ಟೆಂದು ಹೇಳಲಾಗುವುದಿಲ್ಲ.

ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡಿದ್ದು ಜಯಸಿಂಹನು ಮತ್ತೆ ಹೀಗೆಂದನು. "ದೇಶದಲ್ಲೆಲ್ಲ ಯುದ್ಧಾಗ್ನಿಯು ಪ್ರಜ್ವಲಿಸುವುದು. ಔರಂಗಜೇಬನು ಎಷ್ಟುವರುಷ ತಲೆಕೆಳಗಾಗಿ ತಪಸ್ಸು ಮಾಡಿದರೂ ಅದು ಆರದು; ಮೊಗಲ್ ಸಾಮ್ರಾಜ್ಯವು ವೃದ್ಧಿಯಾದ ದಿನವೇ ಹಾಳಾಗುವುದೆಂಬುದು ಸಿದ್ಧ. ಅವನ ತೀಕ್ಷ್ಣಬುದ್ಧಿಯಾಗಲಿ, ಕಪಟಬುದ್ಧಿಯಾಗಲಿ, ಕವಡೆಯಷ್ಟೂ ಕೆಲಸಮಾಡಲಾರವು. ಕೊನೆಗೆ ವೃದ್ಧನಾಗಿ ಅವನು ಅಂತರಾತ್ಮನ ವ್ಯಥೆಯಿಂದ ಕೃಶಿಸಿ, ಪಂಚತ್ವವನ್ನು ಹೊಂದುವನು. ತರುವಾಯ ನಾಥನಿಲ್ಲದ ಸಿಂಹಾಸನವನ್ನು ಮಹಾರಾಷ್ಟ್ರರು ಆಕ್ರಮಿಸಲಿ! ಅವರ ಯಶಸ್ಸು ಶಾಶ್ವತವಾಗಿರಲಿ!

ಜಯಸಿಂಹನ ಮಾತು ನಿಂತುಹೋಯಿತು. ಪಕ್ಕದಲ್ಲಿದ್ದ ವೈದ್ಯರು ಮುಖವನ್ನು ನೋಡುತ್ತಾ ಬಂದರು. ಆತನ ಜೀವನವು ಸಂದೇಹಾಸ್ಪದವಾಗಿದ್ದಿತು.

ಸ್ವಲ್ಪಹೊತ್ತಿಗೆ ಮೃದುಸ್ವರದಿಂಡ ಜಯಸಿಂಹನು "ಕಪಟಿಯಾದ ಬಾದಶಹನು ತನಗೆ ತಾನೇ ವೈರಿಯಾದನು. ಶಿವಾಜಿಪ್ರಭೂ! ಧರ್ಮಮೇವಜಯತಿ" ಎಂದು ಹೇಳಿ ಸುಮ್ಮನಾದನು.

ಅದೇ ಜಯಸಿಂಹನು ಹೇಳಿದ ಕೊನೆಯ ಮಾತು. ಜಯಸಿಂಹನ ಪ್ರಾಣವಾಯುವು ದೇಹವನ್ನು ಬಿಟ್ಟು ವಾಯುಮಂಡಲದಲ್ಲಿ ಸೇರಿಹೋಯಿತು.

ಶಿವಾಜಿಯು ಚಿಂತಿಸುತ್ತಾ ರಾಜಪುತ್ರರ ಶಿಬಿರವನ್ನು ಬಿಡುವಾಗ ಪೂರ್ವದಿಕ್ಕಿನಲ್ಲಿ ಬೆಳಕಾಗುತಿದ್ದಿತು. ಕೂಡಲೇ ಪ್ರಧಾನ ದಂಡನಾಯಕರೂ ಅಮಾತ್ಯರೂ ಒಂದು ಕಡೆ ಸೇರಿ, ಸ್ವಲ್ಪಹೊತ್ತು ವ್ಯವಹಾರಗಳನ್ನು ಯೋಚಿಸಿ, ಡೇರೆಯ ಹೊರಗೆ ಬಂದರು. ಶಿವಾಜಿಯು ಅವರೊಡನೆ ಹೀಗೆಂದನು. "ಭಟರೆ! ನಾವು ಚಕ್ರವರ್ತಿಯ ಸಂಗಡ ಸಂಧಿಮಾಡಿಕೊಂಡು ಒಂದು ವರ್ಷವಾಗುತ್ತಾ ಬಂದಿತು. ಅವನ ದೋಷಗಳಿಂದಲೇ ಆ ಕರಾರು ತಪ್ಪಿಹೋಯಿತು. ಇನ್ನು ಅವನ ತಪ್ಪುಗಳಿಗೆ ಪ್ರತಿಫಲವನ್ನು ಕೊಡುವೆವು. ಮುಸಲ್ಮಾನರೊಡನೆ ಪುನಃ ಯುದ್ಧವನ್ನು ಪ್ರಾರಂಭಿಸಬೇಕು.

ಏಕೆನ್ನುವಿರೋ ! "ಔರಂಗಜೇಬನ ಪ್ರಧಾನಸೇನಾಪತಿಯೂ ಮಹಾನು
ಾವನೂ ಆದ ಜಯಸಿಂಹನು ಮೃತಿಹೊಂದಿದುದಕ್ಕೆ ಕಾರಣವೇನು ? ಆ ದುರ್ಮಾ
ನ ಮೋಸಕೃತ್ಯವೇ ಅಲ್ಲವೆ ? ಡಿಲ್ಲಿಯಲ್ಲಿ ನನ್ನನ್ನು ಸೆರೆಯಲ್ಲಿಟ್ಟದ್ದುದಕ್ಕೂ,
ಂದೂ ಕುಲ ತಿಲಕರಾದ ರಾಜಾ ಜಯಸಿಂಹರ ಮರಣಕ್ಕೂ ತಕ್ಕ ಪ್ರತಿಫಲವನ್ನು
ಡಬೇಡವೆ ?" ಅಧರ್ಮದಿಂದ ತುಂಬಿರುವ ಈ ಮೊಗಲ್ ಸಾಮ್ರಾಜ್ಯವು ಕೆಲವು
ಗಳಲ್ಲಿಯೇ ಹಾಳಾಗುತ್ತದೆ. ಡಿಲ್ಲೀಸಿಂಹಾಸನವು ಜಾಗ್ರತೆಯಲ್ಲಿಯೇ ಅನಾಥ
ಾಗುವುದು. 'ಸೈನಿಕರ, ಏಳಿರಿ ! ಮಹಾರಾಷ್ಟ್ರ ಗೌರವ ನಕ್ಷತ್ರವು ಪ್ರಕಾಶಿ
ತ್ತಿದೆ. ಪೃಥ್ವೀರಾಯನ ಸಿಂಹಾಸನವನ್ನು ಹಿಂದುಗಳಾದ ನಾವು ಆಕ್ರಮಿಸ
ೇಕಾಗಿದೆ.

ಇದೋ ! ಪ್ರಭಾತವಾಗುತ್ತಿದೆ. ಇದು ನಮ್ಮ ಪಾಲಿಗೆ ಸಾಮಾನ್ಯ
ಪ್ರಭಾತವಲ್ಲ.—ಮಹಾರಾಷ್ಟ್ರರೆ ! ಇದು ನಮ್ಮ ಜೀವನ ಪ್ರಭಾತವು !

ಎಲ್ಲರೂ ಈ ಉತ್ಸಾಹಸೂಚಕವಾದ ಮಾತುಗಳನ್ನು ಕೇಳಿ ಒಂದೇ ಕಾಲದಲ್ಲಿ
ಂಹನಾದ ಮಾಡಿದರು.—"ಇದು ನಮ್ಮ ಜೀವನ ಪ್ರಭಾತ !"

...ಕಾಲದ
ಇನ್ನು ನಿನ್ನ ತಂಗಿಯ
ದಿಂದ ಪ್ರಾಣಬಿಡ-ವೇ
ವಿಮ್ಯಲ್ಲತೆಯ
ಲಕ್ಷ್ಮೀಬಾಯಿಯ
ಹಾನಿ ಮಾಡಬೇಕ
ಚಿಯೂ ಆ

## ನಾಲ್ಕನೆಯ ಪ್ರಕರಣ.

(ವಿಚಾರಣೆ)

ಯಾದನುಭವವಿರುಯ ; ರಘುನಾಥನು ಒಂಟಿಯಾಗಿ ನದೀತೀರದಲ್ಲಿ ವಿಹರಿ
ಇಳಿಸಗೆ ಉಂಟಾದ ಅಭಿವೃದ್ಧಿ, ಸರಳೆಯನ್ನು ನೋಡಿದುದು, ಮುಸಲ್ಮಾ
ರನಿ ಯುದ್ಧವಾದುದು, ಹಿಂದುಗಳ ಅಭಿವೃದ್ಧಿ—ಈ ಯೋಚನೆಗಳು
ಥನ ಹೃದಯವನ್ನು ವಿಕಸಿಸುವಂತೆ ಮಾಡಿದುವು. ಅಷ್ಟರಲ್ಲಿ ಆಕಸ್ಮಿಕವಾಗಿ
ನಿಂದ "ರಘುನಾಥ !" ಎಂಬ ಕೂಗು ಕೇಳಿಸಿತು.

ಅವನು ಹಿಂತಿರುಗಿ ನೋಡಿದನು. ಜಮಾದಾರ ಚಂದ್ರರಾಯನು ದೃಷ್ಟಿ
ಗೋಚರನಾದನು. ಕೋಪವು ಹೆಚ್ಚಿತು; ಶರೀರವು ನಡುಗಿತು; ಕೋಪೋದ್ರೇ
ದಲ್ಲಿ ಭವಾನೀದೇವಿಯ ಮಂದಿರದಲ್ಲಿ ತಾನು ಮಾಡಿದ್ದ ವಾಗ್ದಾನವು ರಘುನಾಥ
ಜ್ಞಾಪಕಕ್ಕೆ ಬರಲಿಲ್ಲ.

"ರಘುನಾಥ! ಈ ಪ್ರಪಂಚದಲ್ಲಿ ನಾವಿಬ್ಬರೂ ನಿಲ್ಲುವುದಕ್ಕೆ ಅವಕಾಶವಿಲ್ಲ—
ಒಬ್ಬನೂ ಇರಬಾರದು." ಎಂದು ಚಂದ್ರರಾಯನು ಕೂಗಿಕೊಂಡನು.

ಕೋಪವನ್ನು ಅಡಗಿಸಿಕೊಂಡು, ರಘುನಾಥನು ಮೆಲ್ಲನೆ ಹೀಗೆಂದನು.—
"ಮಿತ್ರದ್ರೋಹಿ! ನಿನಗೆ ತಕ್ಕ ಶಿಕ್ಷೆಯು ಶಿರಚ್ಛೇದನವೇ, ಚಂದ್ರರಾಯಾ! ಆದ
ರಘುನಾಥನು ನಿನ್ನನ್ನು ಕ್ಷಮಿಸಿದ್ದಾನೆ. ನೀನು ಮಾಡಿದ ತಪ್ಪಿಗೆ ಪಶ್ಚಾತ್ತಾ
ಪಟ್ಟು ಭಗವಂತನನ್ನು ಪ್ರಾರ್ಥಿಸು."

ಚಂದ್ರ—ಬಾಲಕನನ್ನು ಕ್ಷಮಾಪಣೆ ಕೇಳುವುದು ನನಗೆ ಅಭ್ಯಾಸವಿಲ್ಲ
ಇನ್ನು ನೀನು ಬಹುಕಾಲ ಬದುಕಲಾರೆ; ಆದುದರಿಂದ ನನ್ನ ಮಾತುಗಳನ್ನು ಸಾ
ಧಾನವಾಗಿ ಕೇಳು. ನೀನು ನನ್ನ ಆಗರ್ಭಶತ್ರು. ನಾನು ನಿನ್ನ ಪರಮಶತ್ರು;
ಬಾಲ್ಯದಲ್ಲಿಯೇ ನಿನ್ನ ತಲೆಯನ್ನು ಚೂರುಚೂರು ... ಕಪಟ್ಯ... ಸಾರಿ ಪ್ರಯ
ಸಿದೆನು. ಆದರೆ ಆ ವಿಧದಲ್ಲಿ ನಿನ್ನನ್ನು ಕೊಲ್ಲ ಧರ್ಮಮೇವಜಯತೆ ...
ಮಾಡಿದೆನು; ದೇಶದೇಶಗಳನ್ನು ಅಲೆಯುವಂತೆ ...
ವನ್ನು ಆರೋಪಿಸಿ, ದೇಶದಿಂದ ಹೊರಡಿಸಿದೆನು.
ನೆರವೇರಿತು. ನನ್ನ ಕೋಪಾಗ್ನಿಯು ಸ್ವಲ್ಪವು ... ಜಯಸಿಂಹನ ಪ್ರಾಣ
ಅಧಿಕಾರಹೊಂದಿ ಸೈನ್ಯಕ್ಕೆ ಸೇರಿಕೊಂಡೆ. ಚಂದ್ರರ... ಯಿತು.
ಇದುವರೆಗೂ ವ್ಯರ್ಥವಾಗಲಿಲ್ಲ. ಇತರ ಉಪಾಯಗಳು ... ವಾಗ ಪೂರ್ವ
ನಿನ್ನ ಹೃದಯವನ್ನು ಸೀಳಿ, ರಕ್ತವನ್ನು ಪಾನಮಾಡಿ, ನನ್ನ ... ಮಾತ್ಸರ್ಯ
ಅಡಗಿಸಿಕೊಳ್ಳುವೆನು. ಇನ್ನು ನನ್ನ ಕೈಯಿಂದ ತಪ್ಪಿಸಿಕೊಂಡು ಹೊರಗೆ

ಕೋಪಾವೇಶದಿಂದ ಕಣ್ಣುಗಳು ಬೆಂಕಿಯ ಕೆಂಡಗಳನ್ನು ... ಚಕ್ರ
ರಘುನಾಥನು ಕಠೋರಸ್ವರದಿಂದ "ಪಾಪಾತ್ಮ! ಸುಮ್ಮನೆ ಹೋಗು. ...
ಪವಿತ್ರವಾದ ಶಪಥವನ್ನು ಅತಿಕ್ರಮಿಸಿ, ನಿನ್ನ ಪಾಪಗಳಿಗೆ ಸಮುಚಿತವಾದ
ಯನ್ನು ವಿಧಿಸಬೇಕಾದೀತು." ಎಂದು ಹೇಳಿದನು.

ಚಂದ್ರ—ಮೂರ್ಖ ! ಇನ್ನೂ ಹಿಂಜರಿಯುತ್ತಿರುವೆಯಾ? ಇನ್ನೊಂದು ಮಾತಿದೆ ; ಉಜ್ಜಯಿನಿ ಯುದ್ಧದಲ್ಲಿ ನಿಮ್ಮ ತಂದೆಯನ್ನು ದೊಮ್ಮನೆ ದೂರಿಕೊಂಡು ಹೋದಬಾಣವು ಶತ್ರುವು ಬಿಟ್ಟುದಲ್ಲ. ಚಂದ್ರರಾಯನೇ ನಿನ್ನ ತಂದೆಯನ್ನು ಸಂಹಾರ ಮಾಡಿದವನು.

ರಘುನಾಥನಿಗೆ ಕಣ್ಣುಗಳು ಕಾಣಲಿಲ್ಲ. ಕಿವಿಯು ಕೇಳಿಸಲಿಲ್ಲ. ರೋಷ ದಿಂದ ಕತ್ತಿಯನ್ನು ಎತ್ತಿ ರಭಸದಿಂದ ಚಂದ್ರರಾಯನನ್ನು ಹೊಡೆದನು. ಚಂದ್ರ ರಾಯನು ದುರ್ಬಲನಲ್ಲ. ಬಹಳ ಹೊತ್ತು ಅವರಿಗೆ ದ್ವಂದ್ವಯುದ್ಧವು ನಡೆಯಿತು. ಕತ್ತಿಯ ಏಟಿನಿಂದ ಇಬ್ಬರ ಶರೀರಗಳಿಗೂ ಗಾಯಗಳುಂಟಾದುವು. ರಕ್ತವು ಹರಿಯು ತ್ತಿದ್ದಿತು. ಚಂದ್ರರಾಯನು ಬಲಹೀನನಲ್ಲ. ಆದರೆ ಡಿಲ್ಲೀನಗರದಲ್ಲಿ ವಿಚಿತ್ರವಾದ ಖಡ್ಗಯುದ್ಧವನ್ನು ಕಲಿತುಕೊಂಡಿದ್ದ ರಘುನಾಥನು ತ್ವರೆಯಲ್ಲಿಯೇ ಅವನನ್ನು ಮೀರಿಸಿ, ನೆಲಕ್ಕೆ ಉರುಳಿಸಿ, ವೃಕ್ಷದಮೇಲೆ ಮೊಣಕಾಲೂರಿ, ‘ ಪಾಮರ ! ಇದೇ ನಿನ್ನ ಪಾಪಗಳಿಗೆ ಶಿಕ್ಷೆ ; ನಮ್ಮ ತಂದೆಯ ಮರಣಕ್ಕೆ ಪ್ರತೀಕಾರ ! ’ ಎಂದು ಘರ್ಜಿಸಿದನು.

ಮರಣಕಾಲದಲ್ಲಿಯೂ ಭಯಪಡದೆ ಚಂದ್ರರಾಯನು ವಿಕಟಸ್ವರದಿಂದ “ಇನ್ನು ನಿನ್ನ ತಂಗಿಯು ವಿಧವೆಯಾಗುವಳು. ಇದನ್ನು ನೆನೆದು ನಾನು ಆನಂದ ದಿಂದ ಪ್ರಾಣಬಿಡ-ವೆನು.” ಎಂದು ಹೇಳಿದನು.

ವಿದ್ಯುಲ್ಲತೆಯಂತೆ ರಘುನಾಥನಿಗೆ ಸಮಸ್ತ ವಿಷಯಗಳೂ ಗೋಚರಿಸಿದುವು. ಲಕ್ಷ್ಮೀಬಾಯಿಯು ತನ್ನ ಗಂಡನ ಹೆಸರನ್ನು ಹೇಳಲಿಲ್ಲ. ಚಂದ್ರರಾಯನಿಗೆ ಪ್ರಾಣ ಹಾನಿ ಮಾಡಬೇಡವೆಂದು ಬೇಡಿಕೊಂಡಿದ್ದಳು. ಸ್ವಾಮಿದ್ರೋಹಿಯೂ ರಕ್ತಪಿಶಾ ಚಿಯೂ ಆದ ಚಂದ್ರರಾಯನು ಬಲಾತ್ಕಾರವಾಗಿ ತನ್ನ ಸಹೋದರಿಯನ್ನು ಮದುವೆ ಯಾದನು. ರಘುನಾಥನು ಮೇಲಕ್ಕೆ ಎತ್ತಿದ್ದ ಕತ್ತಿಯನ್ನು ಚಂದ್ರರಾಯನ ಕಡೆಗೆ ಇಳಿಸದೆ, ಮೆಲ್ಲಮೆಲ್ಲಗೆ ಅದನ್ನು ಇಳಿಸಿ ನಿಲ್ಲಿಸಿದನು.

ಇಬ್ಬರು ವೀರರೂ ಒಬ್ಬರ ಕಡೆ ಮತ್ತೊಬ್ಬರು ದೃಷ್ಟಿಯನ್ನಿಟ್ಟು ಉರಿಯು ತ್ತಿರುವ ಅಗ್ನಿಯಂತೆ ನೋಡುತ್ತಿದ್ದರು. ದ್ವಂದ್ವಯುದ್ಧದಲ್ಲಿ ಪರಾಜಿತನಾಗಿಯೂ ಧೂಳಿನಲ್ಲಿ ಒದ್ದಾಡಿದ ಶರೀರವುಳ್ಳವನಾಗಿಯೂ ರಕ್ತನಯನನಾಗಿಯೂ ವಿಕಟ ರಾಕ್ಷಸನಂತೆ ಚಂದ್ರರಾಯನು ರಘುನಾಥನನ್ನು ನೋಡುತ್ತಿದ್ದನು. ಪಿತೃವಧೆಯಿಂದ

ಉಂಟಾದ ರೋಷದಿಂದಲೂ ತಂಗಿಗೆ ಅವಮಾನವಾದ ವ್ಯಸನದಿಂದಲೂ, ಸಂತಪ್ತ ಹೃದಯನಾಗಿ, ಹಗೆಯನ್ನು ತೀರಿಸಿಕೊಳ್ಳುವುದಕ್ಕೂ, ಏನುಮಾಡುವುದಕ್ಕೂ ಅವ ಕಾಶವಿಲ್ಲದೆ ಚಿತ್ರದಲ್ಲಿರುವನಂತೆ ರಘುನಾಥನು ಚಂದ್ರರಾಯನನ್ನು ನೋಡುತ್ತಿದ್ದನು. ಆ ಸಮಯದಲ್ಲಿ ಗಿಡದ ಮರೆಯಿಂದ ಒಬ್ಬ ಪುರುಷನು ಥಟ್ಟನೆ ಮುಂದಕ್ಕೆ ಬಂದನು. ಇಬ್ಬರೂ ಗಾಬರಿಯಾದರು. ಆ ಪುರುಷನೇ ಶಿವಾಜಿಮಹಾರಾಜನು !

ಶಿವಾಜಿಯು ಏನೂ ಹೇಳದೆ ತನ್ನ ಹಿಂದೆ ಬಂದಿದ್ದ ನಾಲ್ವರು ಸೈನಿಕರಿಗೆ ಸಂಜ್ಞೆಮಾಡಿದನು. ಕೂಡಲೇ ಅವರು ನಿಶ್ಶಬ್ದವಾಗಿ ಚಂದ್ರರಾಯನನ್ನು ಸಮೀಪಿಸಿ, ಅವನ ಕೈಯಲ್ಲಿದ್ದ ಕತ್ತಿಯನ್ನು ಕಿತ್ತುಕೊಂಡು ಕೈಗಳನ್ನು ಬಿಗಿದುಕಟ್ಟಿ ಹೊತ್ತು ಕೊಂಡು ಹೋದರು. ಶಿವಾಜಿಯು ಅದೃಶ್ಯನಾದನು. ರಘುನಾಥನು ಆಶ್ಚರ್ಯ ಪಟ್ಟು, ಗಾಬರಿಯಾಗಿ ಆ ಗಿಡದ ಮರೆಯಲ್ಲಿ ಹೊರಟುಹೋದನು.

ಮರುದಿನ ಪ್ರಾತಃಕಾಲ, ಚಂದ್ರರಾಯನು ರಘುನಾಥನ ತಂದೆಯನ್ನು ಕೊಂದನೆಂದಾಗಲಿ, ಅವನ ಸಂಗಡ ಹಿಂದಿನದಿನ ಅಧರ್ಮಯುದ್ಧವನ್ನು ಮಾಡಿದ ನೆಂದಾಗಲಿ, ವಿಚಾರಣೆ ನಡೆಯಲಿಲ್ಲ. ರುದ್ರಮಂಡಲದುರ್ಗವನ್ನು ಆಕ್ರಮಿಸುವುದಕ್ಕೆ ಮೊದಲು ರಹಿಮತ್‌ಖಾನನಿಗೆ ರಹಸ್ಯವಾಗಿ ವರ್ತಮಾನವನ್ನು ಕಳುಹಿಸಿದನೆಂದು ರುಜುವಾತು ಸಿಕ್ಕಿದುದರಿಂದ ವಿಚಾರಣೆ ನಡೆಯಿತು.

ಅಫಘನ್ ಸೇನಾಪತಿಯು ರುದ್ರಮಂಡಲ ದುರ್ಗದಲ್ಲಿ ಸೆರೆಯಲ್ಲಿಟ್ಟಾಗ ಶಿವಾಜಿಯು ಆತನನ್ನು ಗೌರವಿಸಿದನೆಂದು ಹಿಂದೆಯೇ ಹೇಳಿರುವೆವು. ರಹಿಮತ್ ಖಾನನು ಸ್ವಾತಂತ್ರ್ಯಹೊಂದಿ ತನ್ನ ಯಜಮಾನನಾದ ಬಿಜಾಪುರದ ಸುಲ್ತಾನನ ಬಳಿಗೆ ಹೋದನು. ಜಯಸಿಂಹನು ಬಿಜಾಪುರವನ್ನು ಆಕ್ರಮಿಸಿದಾಗ ರಹಿಮತ್‌ಖಾನನು ಅವನ ಸಂಗಡ ಯುದ್ಧಮಾಡಿದನು. ಅವನಿಗೆ ಗಾಯವಾದುದರಿಂದ ರಹಿಮತ್ ಖಾನನು ಜಯಸಿಂಹನಿಂದ ಸೆರೆಹಿಡಿಯಲ್ಪಟ್ಟನು. ಜಯಸಿಂಹನು ಅವನನ್ನು ತನ್ನ ಬಿಡಾರಕ್ಕೆ ಕರೆದುಕೊಂಡು ಹೋಗಿ, ಅನೇಕ ಉಪಚಾರಗಳನ್ನು ಮಾಡಿಸಿದನು. ಆದರೂ ಪ್ರಯೋಜನವಾಗಲಿಲ್ಲ. ಕೊನೆಗೆ ರಹಿಮತ್‌ಖಾನನು ಮೃತಪಟ್ಟನು.

ರಹಿಮತ್‌ಖಾನನು ಸಾಯುವ ಹಿಂದಿನದಿನ ಜಯಸಿಂಹನು ಅವನನ್ನು ಕುರಿತು 'ಖಾನಸಾಹೇಬ ! ನಿಮಗೆ ಇನ್ನು ಆಯುಷ್ಯವಿಲ್ಲ. ನಾನು ಮಾಡಿದ ಪ್ರಯತ್ನಗಳು ನಿಷ್ಫಲವಾದುವು. ನಿಮಗೆ ಈಗ ಯಾವ ತೊಂದರೆಯೂ ಇಲ್ಲದ ಪಕ್ಷದಲ್ಲಿ ನಿಮ್ಮನ್ನು ಒಂದು ಸಂಗತಿ ಕೇಳುವೆನು.

ರಹಿ—ಮೃತ್ಯುವಿನ ವಿಷಯದಲ್ಲಿ ನನಗೆ ಎಷ್ಟುಮಾತ್ರವೂ ಭಯವಿಲ್ಲ. ನೀವು ನನಗೆ ಶತ್ರುಗಳಾದರೂ ನನಗೆ ವಿಶೇಷ ಆದರವನ್ನು ತೋರಿಸಿರುವಿರಿ; ಅದಕ್ಕೆ ಪ್ರತಿಫಲಕೊಡಲಾರೆನಲ್ಲ—ಎಂಬುದೊಂದೇ ಕೊರತೆ. ತಾವು ಕೇಳಬೇಕೆಂದಿರುವ ವಿಷಯವನ್ನು ಕೇಳಬಹುದು ನಾನು ನಿಮಗೆ ಹೇಳದಿರುವುದು ಯಾವುದೂ ಇಲ್ಲ.

ಜಯ—ರುದ್ರಮಂಡಲ ದುರ್ಗವನ್ನು ಮುತ್ತಿಗೆ ಹಾಕಿದ ದಿನ, ನಿಮಗೆ ಮುಂದಾಗಿ ಒಬ್ಬನು ರಹಸ್ಯವಾಗಿ ಆ ಸಂಗತಿಯನ್ನು ತಿಳಿಸಿದನಲ್ಲವೆ, ಅವನು ಯಾರು? ಅನ್ಯಾಯವಾಗಿ ಮತ್ತೊಬ್ಬನು ಶಿಕ್ಷಿಸಲ್ಪಟ್ಟನು.

ರಹಿ—ನಾನು ಬದುಕಿರುವವರೆಗೂ ಅವನ ಹೆಸರನ್ನು ತಿಳಿಸೆನೆಂದು. ಪ್ರತಿಜ್ಞೆ ಮಾಡಿದ್ದೇನೆ. ರಾಜಪುತ್ರರೆ ! ತಾವು ನನ್ನನ್ನು ಬಹಳ ಸನ್ಮಾನಿಸಿರುವಿರಿ. ಆದರೆ ಈ ಪಠಾಣನು ತನ್ನ ಪ್ರತಿಜ್ಞೆಯನ್ನು ಅತಿಕ್ರಮಿಸಲಾರನು.

ಜಯ—ಯೋಧನೆ! ನಿಮ್ಮ ಪ್ರತಿಜ್ಞೆಯನ್ನು ಮೀರಿನಡೆಯಬೇಕೆಂದು ನಾನು ಹೇಳಲಿಲ್ಲ. ಯಾವುದಾದರೂ ನಿದರ್ಶನವಿದ್ದ ಪಕ್ಷದಲ್ಲಿ ಅದನ್ನು ನನಗೆ ತೋರಿಸಲು ಆಕ್ಷೇಪಣೆಯೇನು ?

ರಹಿ—ಕೆಲವು ಪತ್ರಗಳಿವೆ. ನಾನು ಸಾಯುವುದಕ್ಕೆ ಮೊದಲೇ ಆ ಪತ್ರ ಗಳನ್ನು ಓದಕೂಡದು.

ಜಯಸಿಂಹನು ಶಪಥಮಾಡಿದನು. ಆಗ ರಹಿಮತ್‌ಖಾನನು ಆ ಕಾಗದ ಗಳನ್ನು ಜಯಸಿಂಹನಿಗೆ ಕೊಟ್ಟನು. ಅವನು ಮೃತಿಹೊಂದಿದ ತರುವಾಯ. ಜಯ ಸಿಂಹನು ಆ ಪತ್ರಗಳನ್ನು ಓದಿ ನೋಡಿದನು. ಅವು ಚಂದ್ರರಾಯನು ಬರೆದ ಪತ್ರ ಗಳಾಗಿದ್ದುವು.

ಸ್ವಹಸ್ತ ಲಿಖಿತವಾದ ಪತ್ರಗಳನ್ನು ಚಂದ್ರರಾಯನು ರಹಿಮತ್‌ಖಾನನಿಗೆ ಕಳುಹಿದ್ದನು. ಚಂದ್ರರಾಯನು ಮುಸಲ್ಮಾನರಿಂದ ಲಂಚವನ್ನು ಗ್ರಹಿಸಿದಂತೆ ಆ ಪತ್ರಗಳಲ್ಲಿ ಕಂಡಿತು.

ವಿಚಾರಣೆಗೆ ಹೆಚ್ಚು ಕಾಲ ಹಿಡಿಯಲಿಲ್ಲ. ರಘುನಾಥಪಂಕ ನ್ಯಾಯಶಾಸ್ತ್ರಿಯು ಅವುಗಳನ್ನು ಗಟ್ಟಿಯಾಗಿ ಓದಿದನು. ಚಂದ್ರರಾಯನು ರಾಜದ್ರೋಹಿ; ಮುಸಲ್ಮಾ ನರಿಂದ ಲಂಚವನ್ನು ತೆಗೆದುಕೊಂಡು, ನಿಷ್ಕಳಂಕನಾದ ರಘುನಾಥನ ಮೇಲೆ ದೋಷ ಗಳನ್ನು ಆರೋಪಿಸಿ, ಅವನ ಪ್ರಾಣವನ್ನು ತೆಗೆಯಿಸಲು ಯತ್ನಿಸಿದನೆಂದು ಅಲ್ಲಿಯವರು ಗ್ರಹಿಸಿ, ಹೂಂಕಾರಮಾಡಿದರು.

ಆಗ ಶಿವಾಜಿಯು ಅವನನ್ನು ನೋಡಿ, ರಾಜದ್ರೋಹಿ! ನಿನಗೆ ಮರಣವು ಸಮೀಪಿಸಿದೆ. ಏನಾದರೂ ಹೇಳುವುದಿದೆಯೆ?

ಮರಣವು ಸಮೀಪದಲ್ಲಿರುವಾಗಲೂ ಚಂದ್ರರಾಯನು ಭಯವೆಂಬ ಮಾತನ್ನೇ ಅರಿಯನು. ಆಗಲೂ ಅವನ ಪೂರ್ವದ ಅಭಿಮಾನವು ಅಡಗದಿದ್ದುದರಿಂದ ಹೀಗೆಂದನು. "ತಮ್ಮ ವಿಚಾರಣೆಯು ಅಸಾಧಾರಣವಾದುದು, ಮತ್ತು ಸಿದ್ಧವಾದುದು. ಹಿಂದೆ ಈ ದೋಷಗಳನ್ನು ಆರೋಪಿಸಿ, ರಘುನಾಥನನ್ನು ಶಿಕ್ಷಿಸಿದಿರಿ, ಈಗ ನನ್ನನ್ನು ಶಿಕ್ಷಿಸುತ್ತಿರುವಿರಿ. ಇನ್ನು ಕೆಲವು ದಿನಗಳಿಗೆ ಮತ್ತೊಬ್ಬನನ್ನು ಶಿಕ್ಷಿಸುವಿರಿ. ಚಂದ್ರರಾಯನು ನಿರ್ದೋಷಿಯೆಂದೂ, ಈ ಪತ್ರಗಳು ಕಲ್ಪಿತವೆಂದೂ ಮುಂದೆ ನಿಮಗೇ ತಿಳಿಯುವುವು."

ಈ ಸುಳ್ಳು ಮಾತುಗಳಿಂದ ಶಿವಾಜಿಯು ಅತ್ಯಂತ ಕೋಪಗೊಂಡನು. "ಜಲಾದ್! ಲಂಚವನ್ನು ತೆಗೆದುಕೊಂಡುದಕ್ಕೆ ಇವರ ಕೈಗಳನ್ನು ಕತ್ತರಿಸಿ, ತಪ್ತ ಲೋಹದಿಂದ ಮುಖದಮೇಲೆ 'ರಾಜದ್ರೋಹಿ' ಎಂದು ಮುದ್ರಿಸಿರಿ." ಎಂದು ಆಜ್ಞಾಪಿಸಿದನು.

ಶೂಲಾರೋಪಕನು ತನ್ನ ಕೆಲಸಮಾಡಲಿಕ್ಕೆ ಹೋಗುತ್ತಿರಲು, ರಘುನಾಥನು ಕೈಗಳನ್ನು ಜೋಡಿಸಿ, "ಮಹಾರಾಜ! ಈ ದಾಸನ ವಿಜ್ಞಾಪನೆಯೊಂದಿರುವುದು." ಎಂದು ಹೇಳಿದನು.

ಶಿವಾಜಿ—ರಘುನಾಥಾ! ಈ ವಿಷಯದಲ್ಲಿ ನಿನ್ನ ಪ್ರಾರ್ಥನೆಯನ್ನು ಮುಖ್ಯವಾಗಿ ಕೇಳಬೇಕಾದುದೇ! ಈ ದುರ್ಭಾಗನು ನಿನ್ನನ್ನು ಕೊಲ್ಲಲು ಪ್ರಯತ್ನಿಸಿದನು. ಅದಕ್ಕೆ ಪ್ರತಿಫಲವಾಗಿ ನಿನ್ನ ಇಚ್ಛೆಬಂದಂತೆ ಇವನಲ್ಲಿ ಹಗೆ ತೀರಿಸಿಕೊಳ್ಳಬಹುದು.

ರಘು—"ಮಹಾರಾಜರ ಅಪ್ಪಣೆಯು ಮೀರತಕ್ಕುದಲ್ಲ. ತಾವು ಚಂದ್ರರಾಯನನ್ನು ಶಿಕ್ಷಿಸದೆ ಬಿಟ್ಟುಬಿಡುವವರಾಗಬೇಕು! ಇದೇ ನನ್ನ ಪ್ರಾರ್ಥನೆ."

(ಸಭಾಸದರು ವಿಸ್ಮಿತರಾಗಿ ಮೂಕರಂತಿದ್ದರು. ಕೋಪವನ್ನು ಅಡಗಿಸಿಕೊಂಡು ಶಿವಾಜಿಯು ಹೀಗೆಂದನು. "ಇವನು ಮಾಡಿದ ದೋಷಕ್ಕೆ ಪ್ರತಿಫಲ ಕೊಡದೆ ನಿನ್ನ ಪ್ರಾರ್ಥನೆಯಿಂದ ಕ್ಷಮಿಸಿದೆನು. ಅದೂ ಹೋಗಲಿ. ರಾಜದ್ರೋಹಿಯನ್ನು ಶಿಕ್ಷಿಸುವುದು ರಾಜಧರ್ಮ! ಇವನಿಗೆ ಮರಣತಪ್ಪದು,—ಜಲಾದ್! ನಿನ್ನ ಕೆಲಸವನ್ನು ಮಾಡು.

ರಘು—ದೇವಾ ! ಹೇಗಾದರೂ ಚಂದ್ರರಾಯನನ್ನು ಮನ್ನಿಸಬೇಕು.

ಶಿವಾ—ರಘುನಾಥ ! ಅವಕಾಶವಿಲ್ಲ ನೀನಾದುದರಿಂದ ಇದುವರಿಗೆ ಕ್ಷಮಿಸಿದೆನು. ಇನ್ನೊಬ್ಬನಾಗಿದ್ದರೆ ಕ್ಷಮಿಸೆನು. ಶಿವಾಜಿಯ ಆಜ್ಞೆಯ ವಿಷಯದಲ್ಲಿ ಏನೂ ಮಾತನಾಡಬೇಡ.

ರಘು—ಪ್ರಭೂ ! ಕೆಲವು ಸಮಯದಲ್ಲಿ ಈ ದಾಸನು ತಮಗೆ ಒಳ್ಳೆಯದನ್ನು ಮಾಡಿದನೆಂದು, ತಾವು ಇವನಿಗೆ ಬಹುಮಾನ ಕೊಡುವೆವೆಂದು ಅಪ್ಪಣೆ ಕೊಡಿಸಿದ್ದಿರಿ. ಈ ದಿನ ಆ ಬಹುಮಾನವನ್ನು ಬೇಡುತ್ತಿರುವೆನು. ಚಂದ್ರರಾಯನನ್ನು ಬಿಡುಗಡೆಮಾಡಿರಿ.

ಕೋಪವು ಮಿತಿಮೀರಿತು. ಕಣ್ಣುಗಳಿಂದ ಉರಿಯುವ ಕೆಂಡಗಳು ಉದುರುವಂತಾದುವು. ಅನಂತರ ಶಿವಾಜಿಯು ಹೀಗೆಂದನು "ರಘುನಾಥಾ ! ಯಾವಾಗಲೋ ನನಗೆ ಸಹಾಯ ಮಾಡಿದೆನೆಂದು ಹೇಳಿ, ಇಂದು ನಮ್ಮ ತೀರ್ಮಾನವನ್ನು ಬದಲಾಯಿಸಲು ಅಪೇಕ್ಷಿಸುತ್ತಿರುವೆಯಾ ? ರಾಜನ ಅಪ್ಪಣೆಯು ಬೇರೆಯಾಗದು. ನಿನ್ನ ಪೌರುಷವನ್ನು ನೀನೇ ಸಾಕುಮಾಡು.

ಮುಖವು ಕೆಂಪಾಗಲು ರಘುನಾಥನು ಮೆಲ್ಲಗೆ "ಪ್ರಭೂ ! ಬಹುಮಾನವನ್ನು ಕೇಳುವುದು ನನಗೆ ಅಭ್ಯಾಸವಿಲ್ಲ. ಪ್ರಭುಗಳು ಈ ಬಹುಮಾನವನ್ನು ಗ್ರಹಿಸದಿದ್ದರೆ, ದಾಸನು ಪುನಃ ಗೋಸಾಯಿಯ ರೂಪದಿಂದ ಭಿಕ್ಷವೆತ್ತುತ್ತ ದೇಶದೇಶಗಳಲ್ಲಿ ಸಂಚರಿಸುವನು."

ಶಿವಾಜಿಯು ಶಾಂತನಾದನು ; ಆಲೋಚನಾಮಗ್ನನಾದನು. ಆಗ ಮಂತ್ರಿಯು ರಾಜನೊಡನೆ "ಚಂದ್ರರಾಯನು ತನ್ನ ತಂಗಿಯಗಂಡನಾದುದರಿಂದ, ರಘುನಾಥನು ಅವನನ್ನು ಕ್ಷಮಿಸಬೇಕೆಂಧು ಕೇಳಿಕೊಳ್ಳುತ್ತಿರುವನು." ಎಂದು ರಹಸ್ಯವಾಗಿ ಹೇಳಿದನು

ಆಶ್ಚರ್ಯಹೊಂದಿ ಶಿವಾಜಿಯು ಚಂದ್ರರಾಯನನ್ನು ಕ್ಷಮಿಸಿ, ಹೀಗೆಂದನು. "ಹೋಗು. ಚಂದ್ರರಾಯನೇ ಹೋಗು. ಮಹಾರಾಷ್ಟ್ರದೇಶದಲ್ಲಿ ನಿನ್ನ ಮುಖವನ್ನು ತೋರಿಸಬೇಡ. ಮತ್ತೊಂದು ದೇಶಕ್ಕೆ ಹೋಗು. ಮಿತ್ರರ ಆಸ್ತಿಗಳನ್ನು ಹಾಳುಮಾಡು. ಶತ್ರುಗಳಿಂದ ಲಂಚವನ್ನು ತೆಗೆದುಕೊ. ಕುತಂತ್ರವನ್ನು ನಡಿಸು. ದೋಷಗಳನ್ನು ಮಾಡುತಲ್ಲ, ನಿನ್ನ ಈ ಪಾಪಶರೀರವನ್ನು ಹೊರೆಯುತ್ತಿರು.

ಚಂದ್ರರಾಯನು ಆ ಮಾತುಗಳಿಂದ ವ್ಯಥೆಪಟ್ಟು, ರಘುನಾಥನನ್ನು ನೋಡಿ, 'ಬಾಲಕನೆ ! ನಿನ್ನ ದಯೆಯಿಂದ ನನಗೆ ಪ್ರಯೋಜನವಿಲ್ಲ. ನೀನು ಉಳಿಸಬೇಕೆನ್ನುವ ನನ್ನ ಪ್ರಾಣವು ತೃಣಪ್ರಾಯವಾದುದು.'' ಎಂದು ಹೇಳಿ, ಹರಿತವಾದ ಕತ್ತಿಯಿಂದ ವಕ್ಷಸ್ಥಳಕ್ಕೆ ತಿವಿದುಕೊಂಡು ಸಭಾಮಧ್ಯದಲ್ಲಿ ವಿಗತಪ್ರಾಣನಾಗಿ ಬಿದ್ದನು!

---

## ಇಪ್ಪತ್ತಯ್ದನೆಯ ಪ್ರಕರಣ

---

### (ಉಪಸಂಹಾರ)

ವೃದ್ಧಜನಾರ್ದನನು ಸರಳೆಬಾಲೆಯನ್ನು ಕಳೆದುಕೊಂಡು ಉನ್ಮತ್ತಪ್ರಾಯನಾಗಿದ್ದನು. ಪುನಃ ಸಿಕ್ಕಿದಾಗ ಅವನ ಆನಂದಕ್ಕೆ ಮಿತಿಯಿಲ್ಲ. ಅವನು ರಘುನಾಥನನ್ನು ಕರೆಯಿಸಿ, ಶುಭ ಮುಹೂರ್ತದಲ್ಲಿ ಕನ್ಯಾದಾನಮಾಡಿದನು. ಸರಳೆಯ ಸೌಖ್ಯವನ್ನು ವರ್ಣಿಸಲು ಯಾರಿಗೆಸಾಧ್ಯ ! ನಾಲ್ಕು ವರುಷಗಳಕಾಲ, ಯಾರ ನಾಮಸ್ಮರಣೆ ಮಾಡುತ್ತಿದ್ದಳೋ, ಅವನು ತನ್ನ ಕೋಮಲ ಹೃದಯವನ್ನು ಆಕರ್ಷಿಸಿ, ಚುಂಬನಮಾಡಿದಾಗ ಆಕೆಗೆ ಈ ಲೋಕವೇ ಸ್ವರ್ಗತುಲ್ಯವಾಯಿತು.

ರಘುನಾಥನು ತೋರಣದುರ್ಗದಲ್ಲಿ ಕಂಡ ಸ್ವಪ್ನವು ಇಂದಿಗೆ ನಿಜವಾಯಿತು. ಪ್ರಿಯಳ ಕಂಠಮಾಲೆಯನ್ನು ಮಾತುಮಾತಿಗೆ ನೋಡುತ್ತಾ ಕುಸುಮದಂತಿದ್ದ ಸುಕುಮಾರ ಶರೀರವನ್ನು ವಕ್ಷಸ್ಥಳದಲ್ಲಿ ಧರಿಸಿ, ಅನುರಾಗರಸಪೂರ್ಣಗಳಾದ ವಿಶಾಲನೇತ್ರಗಳಕಡೆ ನೋಡುತ್ತಾ. ರಘುನಾಥನು ಪ್ರಪಂಚವನ್ನು ಮರೆತನು.

ಸರಳಬಾಲೆಯು ತನ್ನ ತಂಗಿಯನ್ನು ಮರೆತುಹೋಗಲಿಲ್ಲ. ರಘುನಾಥನನ್ನು ಪ್ರಾರ್ಥಿಸಿ, ಗೋಕರ್ಣನ ಮಗನಾದ ಭೀಮಾಜಿಗೆ ಶಿವಾಜಿಮಹಾರಾಜನು ಹವಾಲ್ದಾರನ ಕೆಲಸವನ್ನು ಕೊಟ್ಟನು.

ಸರಳೆಯು ಗೋಕರ್ಣನ ಮಗಳನ್ನು ತನ್ನ ಮನೆಯಲ್ಲಿ ಇಟ್ಟುಕೊಂಡು, ತಂಗಿಗೆ ಸಮಾನಳಾಗಿ ಪ್ರೀತಿಸುತ್ತಿದ್ದಳು. ಒಂದು ವರುಷವಾದ ತರುವಾಯ

ಆ ಬಾಲೆಯು ಒಬ್ಬ ಸಚ್ಚರಿತ್ರನ ಭಾರ್ಯೆಯಾದಳು. ವಿನಾಯಕನು ಮೊದಲ್ಗೊಂಡು ಸರಳೆ ಮತ್ತು ರಘುನಾಥನು ವಿವಾಹ ಮಂದಿರವನ್ನು ಅಲಂಕರಿಸಿದರು.

ಸರಳೆಯು ಮದುವಣಗಿತ್ತಿಯ ಕಿವಿಯಲ್ಲಿ "ತಂಗೀ! ನೋಡು. ನೀನು ಹೇಳಿದ ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊ. ಗಂಡನಿಗಿಂತ ಹೆಚ್ಚಾಗಿ ನನ್ನನ್ನು ಪ್ರೀತಿಸಬೇಕು." ಎಂದು ಹೇಳಿದಳು.

ಹದಿಮೂರು ವರ್ಷಗಳ ಕಾಲ ರಘುನಾಥನು ಮಹಾರಾಷ್ಟ್ರದಲ್ಲಿದ್ದನು. ಅವನು ತನ್ನ ಸೇನಾಪತಿಯಾದ ಗಜಪತಿಸಿಂಹನ ಮಗನೆಂದು ತಿಳಿದು, ರಾಜಾ ಜಸ್ವಂತಸಿಂಹನು ರಘುನಾಥನನ್ನು ಸ್ವದೇಶಕ್ಕೆ ಬರಬೇಕೆಂದು ಹೇಳಿಕಳುಹಿದನು. ಆದರೆ ಶಿವಾಜಿಯು ಕಳುಹಿಕೊಡಲಿಲ್ಲ. ೧೬೮೦ನೇ ಇಸವಿ ಚೈತ್ರಮಾಸದಲ್ಲಿ ಮಹಾರಾಷ್ಟ್ರ ಪ್ರಭುವು ಕೀರ್ತಿಶೇಷನಾದನು. ಅವನ ಮಗನಾದ ಸಾಂಬಾಜಿಯು ರಾಜನಾದನು. ತಂದೆಯ ಸೇವಕರನ್ನೂ ಸರದಾರರನ್ನೂ ಕಾರಾಗೃಹದಲ್ಲಿಡಿಸಿ ಮತ್ತೆ ಕೆಲವರನ್ನು ಅವಮಾನ ಮಾಡತೊಡಗಿದನು. ಇನ್ನು ಮಹಾರಾಷ್ಟ್ರದೇಶದಲ್ಲಿರುವುದು ಒಳ್ಳೆಯದಲ್ಲವೆಂದು ತಿಳಿದು ರಘುನಾಥನು ಹೆಂಡತಿಯನ್ನೂ, ಜನಾರ್ದನನನ್ನೂ ಕರೆದುಕೊಂಡು ಸ್ವದೇಶಕ್ಕೆ ತೆರಳಿದನು. ಬಹು ಕಾಲದಮೇಲೆ ಸೂರ್ಯಮಹಾಲ್ದುರ್ಗದಲ್ಲಿ ತಿಲಕಸಿಂಹನ ಪೌತ್ರನು ಪುನಃ ಪ್ರವೇಶಿಸಿದನು.

ಇನ್ನು ಲಕ್ಷ್ಮೀಬಾಯಿಯ ಸ್ಥಿತಿಯನ್ನು ಬರೆಯುವೆವು. ಚಂದ್ರರಾಯನು ಆತ್ಮಹತ್ಯಮಾಡಿಕೊಂಡ ದಿವಸ, ರಘುನಾಥನು ತನ್ನ ತಂಗಿಯನ್ನು ನೋಡಲು ಹೋದನು. ಶವದಹತ್ತಿರ ಕೂದಲನ್ನು ಕೆದರಿಕೊಂಡು, ಲಕ್ಷ್ಮೀಬಾಯಿಯು ಎದೆಯನ್ನು ಹೊಡೆದುಕೊಳ್ಳುತ್ತಾ ರೋದನಮಾಡುತ್ತಿದ್ದಳು. ಗಂಡನ ಮರಣದಲ್ಲಿ ಹಿಂದೂ ಸ್ತ್ರೀಯರು ಹೊಂದುವ ವ್ಯಥೆಯನ್ನು ವರ್ಣಿಸಲಾರೆವು. ಅಂದಿನಿಂದ ಅವಳ ನಯನ ಕೌಮುದಿಯು ಶಾಶ್ವತವಾಗಿ ಅಂಧಕಾರದಲ್ಲಿ ಲೀನವಾಗಿಹೋಯಿತು. ಹೃದಯವು ಶೂನ್ಯವಾಯಿತು. ವೈಧವ್ಯವೇ ಅಸಹ್ಯವಲ್ಲವೆ?

ರಘುನಾಥನು ಅವಳನ್ನು ಸಮಾಧಾನಪಡಿಸಲು ಪ್ರಯತ್ನಿಸಿದನು. ಆದರೆ ಪ್ರಾಣಸಮಾನನಾದ ಅಗ್ರಜನನ್ನು ಗುರ್ತಿಸಲಾರದೆ ಹೋದಳು. ದುಃಖದಿಂದ ಅವನು ಹೊರಟುಹೋಗಿ ಸಾಯಂಕಾಲ ಪುನಃ ಬಂದನು. ಲಕ್ಷ್ಮಿಯ ಪರಿವರ್ತನೆ

ಯನ್ನು ನೋಡಿ, ರಘುನಾಥನು ಬಹಳ ಆಶ್ಚರ್ಯಪಟ್ಟನು. ಆಗ ಅವಳು ದುಃಖಿಸು ತ್ತಿರಲಿಲ್ಲ. ಬಾಲೆಯರು ತದೇಕಧ್ಯಾನದಿಂದ ಬೊಂಬೆಗಳನ್ನು ಅಲಂಕರಿಸುತ್ತಿರುವಂತೆ ತನ್ನ ಪತಿಯ ಕಳೇಬರವನ್ನು ಸುಗಂಧತೈಲಗಳಿಂದಲೂ, ಕುಸುಮಗಳಿಂದಲೂ ಅಲಂ ಕರಿಸುತ್ತಿದ್ದಳು.

ಅಣ್ಣನು ಮನೆಯೊಳಕ್ಕೆ ಬರಲು ಶಬ್ದವಾದರೆ ಸ್ವಾಮಿಗೆ ಎಲ್ಲಿ ನಿದ್ರಾಭಂಗ ವಾಗುವುದೋ ಎಂಬಂತೆ, ಮೃದುಪದನ್ಯಾಸದಿಂದ ಅವನನ್ನು ಸಮೀಪಿಸಿ, ಮೆಲ್ಲಗೆ, "ಅಣ್ಣಾ! ನಿನ್ನನ್ನು ನೋಡಬಲ್ಲೆನು. ಇದೇ ನನಗೆ ಪರಮ ಸಂತೋಷ ಇನ್ನು ನನಗೆ ಯಾವ ಕಷ್ಟವೂ ಇಲ್ಲ." ಎಂದು ಹೇಳಿದಳು.

ಕಣ್ಣೀರು ಸುರಿಯುತ್ತಿರಲು, ಅವನು ಗದ್ಗದಸ್ವರದಿಂದ, "ಪ್ರಾಣಸಮಾನಳಾದ ತಂಗಿಯೆ! ಈ ಸಮಯದಲ್ಲಿ ನಿನ್ನನ್ನು ಹೇಗೆ ಕಾಣಲಿ!" ಎಂದು ಹೇಳಿದನು.

ಲಕ್ಷ್ಮೀಬಾಯಿಯು "ಅಣ್ಣಾ! ನೀನು ನಿಜವಾಗಿಯೂ ದಯಾಸ್ವರೂಪನು ನಿನ್ನ ಭಾವನವರಿಗೋಸ್ಕರ ನೀನು ರಾಜನನ್ನು ಪ್ರಾರ್ಥಿಸಿದೆಯೆಂದು ಕೇಳಿದೆನು. ಆದರೆ, ನನ್ನ ಭಾಗ್ಯರೇಖೆಯ ಪ್ರಕಾರ ಆಗಬೇಕಾದುದೇನೋ ಆಗಿಹೋಯಿತು. ಭಗವಂತನು ನಿನ್ನನ್ನು ಸಂರಕ್ಷಿಸಲೆಂದು ಪ್ರಾರ್ಥಿಸುವೆನು." ಎಂದು ನುಡಿದಳು.

ರಘು—ಲಕ್ಷ್ಮೀ! ನೀನು ಬುದ್ಧಿವಂತಳೆಂದು ಬಹು ದಿನಗಳಿಂದ ಬಲ್ಲೆ ಈ ಅಸಹ್ಯ ಶೋಕವನ್ನು ಹೇಗೆ ನುಂಗಿದೆಯೆಂದು ವಿಸ್ಮಯಗೊಂಡಿರುವೆನು. ಮಾನವ ಜೀವಿತವು ದುಃಖಮಯವಾದುದು. ಶೋಕವನ್ನು ಮರೆಸಿ, ನನ್ನ ಹಿಂದೆ ಬಾ. ಸಹೋದರನ ಅನುರಾಗವೂ, ಉಪಚಾರವೂ ನಿನಗೆ ತುಷ್ಟಿಯಾದರೆ, ಲಕ್ಷ್ಮೀ! ನಾನು ನಿನಗೆ ಎಷ್ಟುಮಾತ್ರವೂ ಲೋಪವನ್ನು ಮಾಡೆನು

ಲಕ್ಷ್ಮೀಬಾಯಿಯು ನಕ್ಕಳು. ರಘುನಾಥನ ಗುಂಡಿಗೆಯು ಝಲ್ಲೆಂದಿತು. ಆಗ ಅವಳು "ಅಣ್ಣಾ! ನೀನು ದಯಾಪರನು! ಭಗವಂತನು ನನಗೆ ದಾರಿಯನ್ನು ತೋರಿಸುವನು. ಹೃದಯೇಶ್ವರನು ದೊಡ್ಡವರಲ್ಲಿ ಸೇರಿರುವನು. ಅತನಿಗೆ ಈ ಸೇವ ಕಳ ಮೇಲೆ ತುಂಬ ಅನುಗ್ರಹವಿರುವುದು. ಆದುದರಿಂದ ನಾನು ಅತನ ಹಿಂದೆ ಹೋಗುವೆನು." ಎಂದಳು.

ರಘುನಾಥನ ಮೇಲೆ ಬೆಟ್ಟವು ಬಿದ್ದಂತಾಯಿತು. ಅವಳು ಸಹಗಮನಮಾಡಲು ನಿಶ್ಚಯಿಸಿದ ಸಂಗತಿಯು ಅತನಿಗೆ ಸ್ಪಷ್ಟವಾಯಿತು. ಇದ್ದ ತಂಗಿಯೊಬ್ಬಳೂ ಇಹ

ಲೋಕವನ್ನು ಬಿಡುವಳೆಂದು ಅವನಿಗೆ ಉಂಟಾದ ದುಃಖವು ಇಷ್ಟಿಷ್ಟೆಂದು ಹೇಳುವ ಆವಶ್ಯಕವಿಲ್ಲ. ಅವಳ ಪ್ರಯತ್ನಗಳನ್ನು ಬಿಡಿಸಬೇಕೆಂದು ಎಷ್ಟೋ ಪ್ರಯತ್ನ ಮಾಡಿದನು. ಬಹು ವಿಧಗಳಲ್ಲಿ ಹೇಳಿ ನೋಡಿದನು. ಪ್ರಯೋಜನವಾಗಲಿಲ್ಲ. ಕೊನೆಗೂ ಲಕ್ಷ್ಮೀಬಾಯಿಯು ಸಹಗಮನ ಮಾಡುವೆನೆಂದೇ ಹಠಮಾಡಿದಳು.

ರಘು—ಲಕ್ಷ್ಮೀ ! ಒಂದು ದಿನ ನಾನು ನಿರಾಶೆಹೊಂದಿ ಪ್ರಾಣತ್ಯಾಗ ಮಾಡಬೇಕೆಂದಿದ್ದೆನು ; ಆದರೆ ನಿನ್ನ ಉಪದೇಶದಿಂದ ನಾನು ಆ ಅಭಿಪ್ರಾಯವನ್ನು ಬಿಟ್ಟು, ಪುನಃ ಲೋಕವ್ಯವಹಾರಗಳಲ್ಲಿ ಪ್ರವೇಶಿಸಿದೆನು. ಲಕ್ಷ್ಮೀ ! ನೀನು ಅಣ್ಣನ ಮಾತುಗಳನ್ನು ಕೇಳಲಾರೆಯಾ ? ಅಣ್ಣನಮೇಲೆ ನಿನಗೆ ವಿಶ್ವಾಸವಿಲ್ಲವೆ ?

ಲಕ್ಷ್ಮೀ—ನಾನು ಆ ಸಂಗತಿಯನ್ನು ಮರೆತುಹೋಗಿಲ್ಲ, ಒಂದು ಮಾತನ್ನು ಕೇಳು. ಪುರುಷನಿಗೆ ಅನೇಕ ಪ್ರಯತ್ನಗಳೂ, ಆಶೆಗಳೂ, ಅವಲಂಬನೆಗಳೂ ಇರುವುವು. ಒಂದು ಹೋದರೆ ಮತ್ತೊಂದಿರುವುದು. ಸ್ತ್ರೀಯರಿಗೆ ಹಾಗಲ್ಲವಷ್ಟೆ ! ನೀನು ಆ ದಿನ ತಂಗಿಯ ಮಾತನ್ನು ಕೇಳಿದುದರಿಂದ ಈಗ ನಿನ್ನ ಕೀರ್ತಿಯು ದೇಶವನ್ನೆಲ್ಲಾ ವ್ಯಾಪಿಸಿದೆ ಕಳಂಕವು ಆಗಲೇ ಹೊರಟು ಹೋಯಿತು. ಅಧಿಕಾರವುಂಟಾಯಿತು. ನಿರ್ಭಾಗ್ಯರಾದ ಸ್ತ್ರೀಯರಿಗೆ ಏನಿದೆ? ನಾನು ಈದಿನ ಕಳೆದುಕೊಂಡ ಮಾಣಿಕವು ನನಗಿನ್ನು ಈ ಜನ್ಮದಲ್ಲಿ ಲಭಿಸುವುದೆ? ಪರವಸ್ತುವನ್ನು ಕಳೆದುಕೊಂಡು ಹತಭಾಗ್ಯಳಾದ ನಾನಿನ್ನು ಬದುಕಿ ಫಲವೇನು ? ಅಣ್ಣಾ ! ಕ್ಷಮಿಸು ! ನಿನ್ನ ತಂಗಿಯನ್ನು ನಿರ್ಬಂಧಿಸದೆ ಸಂತೋಷದಿಂದ ಅನುಮತಿಸಿ ಕಳುಹು. ನಿನ್ನ ತಂಗಿಯು ತನ್ನ ಪತಿಯೊಡನೆ ಸೇರಿ, ಶಾಶ್ವತ ಸುಖಾನುಭವ ಮಾಡಲು ಹೊರಡುವಳು. ಆದುದರಿಂದ ನೀನು ದುಃಖಿಸುವ ಕಾರಣವಿಲ್ಲ.

ರಘು—(ಕಂಬನಿಸುರಿಸುತ್ತ ಗದ್ಗದಸ್ವರದಿಂದ) ಲಕ್ಷ್ಮೀ ! ಹೋಗುವೆಯಾ ! ನಿನ್ನ ಅಣ್ಣನಿಗೆ ನಿನ್ನ ಸಂದರ್ಶನವು ಇನ್ನು ಲಭಿಸದೇ ?

ಲಕ್ಷ್ಮೀ—ಅಣ್ಣಾ ! ಬಾಲ್ಯದಿಂದಲೂ ನೀನು ನನ್ನನ್ನು ನಿನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತ ಬಂದಿರುವೆ ನನಗೆ ಈ ಲೋಕದಲ್ಲಿ ನಿನಗಿಂತಲೂ ಆಪ್ತರಿನ್ನಾರೂ ಇಲ್ಲ. ಏಕಮಾತ್ರ ಬಂಧುವಾದ ನಿನ್ನ ಸಂತಾಪವನ್ನು ನೋಡಲು ನನಗೂ ಅನುತಾಪವಾಗದೆ ಇಲ್ಲ. ಆದರೆ, ಅಣ್ಣಾ ! ಮನೋರೋಗವು ನಿವಾರಣವಾಗಿ ಬಂದ ದುರಿತವನ್ನು ಗೆದ್ದು, ಅಪವಾದ ವಿಮುಕ್ತನಾಗಿ, ಇಷ್ಟಾರ್ಥಸಿದ್ಧಿ

ಹೊಂದಿ, ಕುಲಕ್ಕೂ ದೇಶಕ್ಕೂ ಕೀರ್ತಿಯನ್ನು ತಂದ ನಿನ್ನನ್ನು ನೋಡಿ ನಾನು ಪರಮಸುಖಿಯಾಗಿರುವೆನು. ಇನ್ನು ನನಗಾವ ಕೊರತೆಯೂ ಇಲ್ಲ. ಆದರೆ, ಹಿತಚಿಂತಕನಾದ ಅಣ್ಣಾ! ಸ್ತ್ರೀಯಾದ ನನಗೆ ಪತಿಯೇ ಪರದೈವವು. ಆ ದೈವವು ಈಗ ತನ್ನ ಇಹಲೋಕದ ವ್ಯಾಪಾರವನ್ನು ನಿಲ್ಲಿಸಿ ಪರಲೋಕಕ್ಕೆ ತೆರಳಿ, ನನ್ನ ಮಾರ್ಗನಿರೀಕ್ಷೆಯಲ್ಲಿರಲು, ನಾನಿಲ್ಲಿ ವಿಳಂಬಮಾಡುವುದು ಸರಿಯಲ್ಲ. ಹೋಗುವೆನು. ಪೂರ್ಣಸಮಾಧಾನದಿಂದ ಅನುಮತಿಯನ್ನು ಕೊಡು.''

ರಘುನಾಥನು ಧರ್ಮಕ್ಕೆ ಕಟ್ಟುಬಿದ್ದು, ತಂಗಿಯ ಮನೋಗತವನ್ನು ಪರಿವರ್ತಿಸಲು ಸಾಹಸಪಡದೆ, ಬಹು ಕಷ್ಟದಿಂದ ಸಮಾಧಾನಹೊಂದಿ ಅನುಮತಿಯಿತ್ತನು. ಲಕ್ಷ್ಮಿಯು ಬಂದು ಸಂತೋಷದಿಂದ ಪತಿಯ ಕಳೇಬರಕ್ಕೆ ಚಂದನಲೇಪದಿಂದಲೂ ಅನೇಕ ಆಭರಣ ವಸ್ತ್ರಗಳಿಂದಲೂ ಅಲಂಕಾರಮಾಡಿ, ಸುವಾಸಿನಿಯರಿಗೂ ಸಖಿಯರಿಗೂ ಯಥೇಷ್ಟವಾದ ವಸ್ತ್ರಾಭರಣಗಳನ್ನಿತ್ತು, ಇಷ್ಟದೇವತೆಯನ್ನು ಪೂಜಿಸಿದಳು. ಚಿತಿಯು ಸಿದ್ಧವಾಯಿತು. ಚಂದ್ರರಾಯನ ದೇಹವೂ ಚಿತಾರೋಹಣ ಮಾಡಲ್ಪಟ್ಟಿತು. ಲಕ್ಷ್ಮಿಯೂ ಚಿತಿಗೆ ಪ್ರದಕ್ಷಿಣವಾಗಿ ಬಂದು ಚಿತಿಯನ್ನೇರಿ ಪತಿಯ ದೇಹವನ್ನು ಅಪ್ಪಿ ಮಲಗಿದಳು. ಕ್ಷಣಮಾತ್ರದಲ್ಲಿ ಅಗ್ನಿಪುರುಷನು ಚಂದ್ರರಾಯ—ಲಕ್ಷ್ಮೀದೇವಿಯರನ್ನು ತನ್ನಲ್ಲಿ ಐಕ್ಯಮಾಡಿಕೊಂಡನು.

ಲಕ್ಷ್ಮಿಯು ಸಹಗಮನ ಮಾಡಿದಮೇಲೆ ರಘುನಾಥನು ದುಃಖಿತನಾಗಿ ಹಿಂತಿರುಗಿಬಂದನು. ಲಕ್ಷ್ಮಿಯ ಪತಿಭಕ್ತಿ, ಶಾಂತಿಗುಣಗಳೂ, ಸರಳಶೀಲೆಯ ಪತಿಪ್ರೇಮ, ಮನಸ್ಥೈರ್ಯಗಳೂ, ರಘುನಾಥನ ಸತ್ಯನಿಷ್ಠೆ, ಧರ್ಮಶ್ರದ್ಧೆಗಳೂ ಸ್ತುತ್ಯರ್ಹವೆನಿಸಿದವು.



ಶ್ರೀ

# ಶುದ್ಧಿ ಪತ್ರಿಕೆ.

---

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧ | ೪ | ಅ ವಿಸ್ತಾರ | ಆ ವಿಸ್ತಾರ |
| ೩ | ೧೯ | ಎಂಬಾತನ | ಎಂಬಾತನು |
| ೫ | ೯ | ಪ್ರಯಾಣತೋಡಿ | ಪ್ರಯಾಣಮಾಡಿ |
| ೬ | ೭ | ಪ್ರತಿಡ್ವನಿಯು | ಪ್ರತಿಧ್ವನಿಯು |
| ,, | ೧೧ | ಭೋರ್ಘರೆಯುತ್ತಾ | ಭೋರ್ಗರೆಯುತ್ತಾ |
| ,, | ೨೩ | ಕ-ಚವು | ಕವಚವು |
| ೭ | ೧೦ | ಯೋಷಾದಿ | ಯೋಪಾದಿ |
| ,, | ೧೩ | ಧನಸ್ಸು | ಧನುಸ್ಸು |
| ,, | ೧೫ | ಜಾರುತ್ತಿದ್ದಿತು | ಜಾರುತ್ತಿದ್ದುವು |
| ,, | ೨೨ | ದ.ರ್ಗದ | ದುರ್ಗದ |
| ,, | ೨೪ | ಬವಾನೀ | ಭವಾನೀ |
| ,, | ೨೫ | ಪ್ರಭುವಿನೆ ಅಪ್ಪಣೆ | ಪ್ರಭುವಿನ ಅಪ್ಪಣೆ |
| ೮ | ೧೧ | ಅ ಪತ್ರದಲ್ಲಿ | ಆ ಪತ್ರದಲ್ಲಿ |
| ೧೦ | ೯ | ಅ.ಮಂದಿರ | ಆ ಮಂದಿರ |
| ,, | ೧೧ | ಕುಳೆತು | ಕುಳಿತು |
| ೧೧ | ೫ | ಹಾರಪೂ | ಹಾರವೂ |
| ,, | ೮ | ಧೀರ್ಘ | ದೀರ್ಘ |
| ೧೨ | ೧೦-೧೧ | ಸೌಂದಯ್ಯ | ಸೌಂದರ್ಯ |
| ೧೩ | ೨೧ | ಪ್ರಾತ!!ಕಾಲ | ಪ್ರಾತಃಕಾಲ |
| ೧೪ | ೫ | ಆಕಸ್ಮಿತ | ಆಕಸ್ಮಿಕ |
| ,, | ೧೦ | ಆತ್ರನ | ಆತನ |
| ,, | ೧೧ | ಆಹಾರ | ಆಹಾರ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೫ | ೫ | ಲೋಕವೆಲ್ಲವೂ ಸಿದ್ರಾವಸ್ಥೆಯಲ್ಲಿದ್ದಿತು. | ಲೋಕವೆಲ್ಲವೂ ಸಿದ್ರಾವಸ್ಥೆಯಲ್ಲಿದ್ದಿತು. |
| ,, | ೧೦ | ಆಕಸ್ಮಿತ | ಆಕಸ್ಮಿಕ |
| ೧೭ | ೯ | ಶ್ಪರ್ಶ | ಸ್ಪರ್ಶ |
| ೨೬ | ೧೩ | ಂಸ್ತೆಯ . | ರಸ್ತೆಯ |
| ,, | ೧೫ | ನಗಂವು | ನಗರವು |
| ೨೭ | ೧೧ | ಎಲ್ಲವೂ | ಎಲ್ಲವೂ |
| ೩೫ | ೧೧ | ಅಕ್ರಮ | ಆಕ್ರಮ |
| ೩೬ | ೭ | ಶಾಸಸ | ಶಾಸನ |
| ,, | ೨೧ | ಮೇವಾರವೇ ಮಹಾರಾಷ್ಟ್ರದೇಶವು. | ಮೇವಾರವೂ ಮಹಾರಾಷ್ಟ್ರದೇಶವೂ. |
| ೩೭ | ೨೬ | ಭಾವವ | ಭಾವವು |
| ೩೮ | ೩ | ಪ್ರತಿಜ್ಞೆ | ಪ್ರತಿಜ್ಞೆ |
| ,, | ೧೩ | ಮಹಾಜಾ | ಮಹಾರಾಜಾ ! |
| ೪೩ | ೧ | ಭಾರ್ಯಗೆ | ಭಾರ್ಯೆಗೆ |
| ,, | ೬ | ಮಹಾರಾಷ್ಟ್ರ | ಮಹಾರಾಷ್ಟ್ರ |
| ೪೪ | ೬ | ಆಹಮ್ಮದ್ | ಅಹಮ್ಮದ್ |
| ,, | ೭ | ಯ'ದ | ಯುದ್ಧ |
| ,, | ೯ | ವಿಧ್ವಾಂಸ | ವಿದ್ವಾಂಸ |
| ,, | ೨೫ | ೧೬೦೩ | ೧೬೩೩ |
| ೪೫ | ೧ | ಸವಾಸ | ಸಹವಾಸ |
| ,, | ೨೦ | ಅತನಿಗೆ | ಆತನಿಗೆ |
| ೪೬ | ೧೩ | ಡಾದಾಜಿ | ದಾದಾಜಿ |
| ೪೯ | ೨೪ | ದುರ್ಗದಬಳಿ | ದುರ್ಗದಬಳಿ |
| ೫೧ | ೯ | ತಿಳಿಯುತ್ತಿರಲಿ. | ತಿಳಿಯುತ್ತಿರಲಿಲ್ಲ. |
| ,, | ೧೬ | ಚಿಂಮನೋ | ಚಿರಮನೋ |
| ೫೯ | ೭ | ಕೆಂ ವನ್ನು | ಕೆಂಡವನ್ನು |
| ,, | ೧೯ | ಪಿಂತಿುಗಿ | ಪಿಂತಿರುಗಿ |
| ೬೩ | ೨೨ | ಯುದ್ವವು | ಯುದ್ಧವು |
| ೬೪ | ೧೫ | ಜಗೆಯದ | ಜಗೆಯಾದ |
| ೬೬ | ೧ | ಸಂಸ್ಥಾದವರೇ | ಸಂಸ್ಥಾನದವರೇ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೬೬ | ೧೩ | ಸಮವಾಯಿತು | ಸಮಯವಾಯಿತು |
| ,, | ೧೫ | ವಂಶನ್ನು | ವಂಶವನ್ನು |
| ೬೭ | ೧೫ | ದುಗ ಕ್ಕೆ | ದುರ್ಗಕ್ಕೆ |
| ೭೦ | ೮೯ | ಪ್ರಸ್ಥಾಪ | ಪ್ರಸ್ತಾಪ |
| ೭೧ | ೮ | ಒಂದಿರುವರು. | ಬಂದಿರುವರು. |
| ೭೨ | ೨೦ | ಸೇನಾಪತ್ಯ | ಸೇನಾಧಿಪತ್ಯ |
| ,, | ೨೩ | ಸತವು | ಸತ್ಯವು |
| ೭೩ | ೧ | ತಾವ | ತಾವು |
| ,, | ೬ | ನಿಂತುರು | ನಿಂತಿರು |
| ೭೪ | ೧ | ಅತನು | ಆತನು |
| ,, | ೧೪ | ಅಗಬಹುದು | ಆಗಬಹುದು. |
| ,, | ೧೯ | ಸಾಗುವುದರಿಂದ | ಸಾಗುವುದಾದರೆ |
| ೭೫ | ೨೫ | ಪ್ರಬಲಿಸಿ | ಪ್ರಬಲಿಸಿ |
| ೭೬ | ೧೮ | ಅಳುವ | ಆಳುವ |
| ೭೯ | ೧೮ | ಸರಳೆಯು | ಸರಳೆಯ |
| ,, | ೨೩ | ಪ್ರಭುವ | ಪ್ರಭುವು |
| ೮೦ | ೧೧ | ತುಬಿದ್ದ | ತುಂಬಿದ್ದ |
| ,, | ೧೫ | ವಿದವಾಗಿ | ವಿಧವಾಗಿ |
| ,, | ೧೬ | ಬಿಟರೆ | ಬಿಟ್ಟರೆ |
| ,, | ೧೭ | ಒಳಿಕ | ಬಳಿಕ |
| ,, | ೧೯ | ಒರುವಿಕೆ | ಬರುವಿಕೆ |
| ,, | ೨೧ | ಪೂದೆ | ಪೊದೆ |
| ೮೧ | ೪ | ಸೂರ್ರ್ಯೋದಯ | ಸೂರ್ರ್ಯೋದಯ |
| ,, | ೮-೯ | ಶಿವಾಜಿಯು | ಶಿವಾಜಿಯ |
| ,, | ೧೮ | ಒಬ್ಬ | ಒಬ್ಬ |
| ೮೨ | ೯ | ವಾಗ್ದಾನಸ್ನು | ವಾಗ್ದಾನವನ್ನು |
| ,, | ೧೯ | ಶಿವಾಜಿಯು | ಶಿವಾಜಿಯ |
| ೮೪ | ೫ | ಮೇಲೆ | ಮೇಲೆ |
| ,, | ೧೦ | ವೀರಎಹಾರ | ವೀರವಿಹಾರ |
| ,, | ೧೩ | ಕಾರ್ಮಗಿಲು | ಕಾರ್ಮುಗಿಲು |
| ,, | ೧೪ | ಭುಮುಕಿದರು. | ಧುಮಿಕಿದರು. |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೮೫ | ೨೪ | ಐದೂರು | ಐದುನೂರು |
| ೮೬ | ೨೫ | ಮಸಲ್ಮಾನರ | ಮುಸಲ್ಮಾನರ |
| ೮೭ | ೧೯ | ಬಿದರು | ಜದ್ದರು. |
| ೮೮ | ೨ | ಒಳಿಕ | ಒಳಿಕ |
| ೯೦ | ೧ | ನೀವ | ನೀವು |
| ,, | ೧೯ | ಅದೃಷದಂತೆ ! | ಅದೃಷ್ಟದಂತೆ ! |
| ೯೧ | ೪ | ಅಭಿವೃದ್ದಿ | ಅಭಿವೃದ್ಧಿ |
| ,, | ೧೩ | ಮಾಡವೇಸು. | ಮಾಡುವೆನು. |
| ೯೩ | ೧೦ | ಮುಖಮಂಡೀವು | ಮುಖಮಂಡಲವು |
| ೯೫ | ೧ | ಶರೀರಿ | ಶರೀರ |
| ೯೮ | ೭ | ಮಲ್ಲಗೆ | ಮೆಲ್ಲನೆ |
| ೯೯ | ೫ | ಪ್ರಯತ್ನಪುರ್ವಕ | ಪ್ರಯತ್ನಪೂರ್ವಕ |
| ೧೦೧ | ೧೪ | ಒಳಿಯಲ್ಲಿದ್ದ | ಬಳಿಯಲ್ಲಿದ್ದ |
| ,, | ,, | ಮೃತಪಟ್ಟದ್ದು | ಮೃತಪಟ್ಟಿದ್ದು |
| ,, | ೨೨ | ಒಂದಿತು. | ಬಂದಿತು. |
| ೧೦೨ | ೬ | ಬಂದರ. | ಬಂದರು. |
| ೧೦೩ | ೭ | ಎಷು | ಎಷ್ಟು |
| ,, | ೯ | ವರುಷ್ಟ. | ವರುಷ. |
| ,, | ೧೬ | ಂದ್ರರಾಯನು | ಚಂದ್ರರಾಯನು |
| ,, | ೧೮ | ಅಕೆ | ಆಕೆ |
| ೧೦೯ | ೭ | ಅ ನು | ಅವನು |
| ,, | ೧೮ | ತೆರೆದನ . | ತೆರೆದನು. |
| ೧೧೧ | ೧೨ | ನನ | ನನ್ನ |
| ೧೧೫ | ೨ | ಅವರಿಗ | ಅವರಿಗೆ |
| ೧೧೬ | ೮ | ವರ್ಣಿಸಲೇಯಿಲ್ಲ. | ವರ್ಣಿಸಲೇ ಇಲ್ಲ. |
| ೧೧೯ | ೧ | ರಾಜಪುತ್ರರಿಗೆ ದು | ರಾಜಪುತ್ರರಿಗೆ ಅದು |
| ,, | ೨೪ | ತಾಸ್ತ್ರ | ಶಾಸ್ತ್ರ |
| ೧೨೩ | ೩ | ಕೊಳ್ಳರ ; | ಕೊಳ್ಳರು ; |
| ೧೨೪ | ೧೨ | ಸಾಮ್ರಾಜ್ಯವ | ಸಾಮ್ರಾಜ್ಯವು |
| ೧೨೬ | ೧೨ | ಸಭಾವನ | ಸಂಭಾಭವನ |
| ೧೨೭ | ೫ | ಮಾವನರಿಗೆ | ಮಾವನವರಿಗೆ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೩೪ | ೧ | ಮಸ್ಲೀನಗ್ | ಮಸ್ಲೀನ್ |
| ೧೩೮ | ೧ | ಕಾಣಿಸಿತ | ಕಾಣಿಸಿತು. |
| ,, | ೪ | ಬಂದಿತ . | ಬಂದಿತು. |
| ,, | ೧೦ | ಬಂತು. | ಬಂದರು. |
| ,, | ೨೫ | ಆಗಂತಕನು | ಆಗಂತಕನು |
| ೧೩೯ | ೧೯ | ದರ್ಶನನ್ನು | ದರ್ಶನವನ್ನು |
| ,, | ೨೪ | ಆದ , | ಆದರೆ, |
| ೧೪೧ | ೨೨ | ಕೆಟ್ಟಿರುವರು | ಕೊಟ್ಟಿರುವರು. |
| ೧೪೩ | ೧೨ | ಬಿಡವುದಕ್ಕೆ | ಬಿಡುವುದಕ್ಕೆ |
| ,, | ೧೫ | ಶಿವಾಜಿಯ | ಶಿವಾಜಿಯು |
| ,, | ೨೬ | ಒಂದು ಂಗ | ಒಂದು ಅಂಗ |
| ೧೪೮ | ೨೫ | ಅ ನ | ಅವನ |
| ೧೫೦ | ೩ | ನೀರಿಕ್ಷಿ | ನಿರೀಕ್ಷಿ |
| ೧೫೧ | ೧೨ | ಆಕ್ಷರತಹ | ಅಕ್ಷರಶಹ |
| ೧೫೨ | ೧೦ | ಇದ | ಇದೆ. |
| ೧೪೮ | ೨೨ | ಔರಂಗಜೇಸಬು | ಔರಂಗಜೇಬನು |
| ೧೫೦ | ೩ | ನಿರೀಕ್ಷಿ | ನಿರೀಕ್ಷಿ |
| ೧೫೧ | ೧೨ | ಅಕ್ಷರತಹ | ಅಕ್ಷರಶಹ |
| ೧೫೪ | ೨೭ | ನಷ | ನಷ್ಟ |
| ೧೬೧ | ೨೨ | ಅದರೆ | ಆದರೆ |
| ೧೬೬ | ೧೭ | ಕತ್ತಲೆಯಾಗಿಸು | ಕತ್ತಲೆಯಾಗಿರು |
| ೧೬೬ | ೨೨ | ಪ್ರಕಾತದ | ಪ್ರಕಾರದ |
| ೧೬೮ | ೧೯ | ಮೊದಲು | ಮೊದಲನೆ |
| ೧೬೯ | ೧ | ರ್ಭಜಿ | ಭರ್ಜಿ |
| ೧೭೧ | ೨೧ | ಕುಳಿತು | ಕುರಿತು |
| ೧೭೨ | ೧೭ | ಲಗ್ನದ ವೇಳೆಯಲ್ಲಿ ವಧುವು ಮರುದಿನ ಸ್ಪಷ್ಟವಾಯಿತು. | ಇದಿಷ್ಟನ್ನು ಬಿಟ್ಟು ಓದಬೇಕು. |
| ೧೭೬ | ೧೪ | ಮಾತುಗಳುನ್ನು | ಮಾತುಗಳನ್ನು |
| ೧೯೨ | ೨೨ | ವೈಧಪ್ಯವೇ | ವೈಧವ್ಯವೇ |

**ವಿ ಸೂ.**—ವ್ಯಾಕರಣ ವಿರುದ್ಧವೂ ಅರ್ಥ ವಿಪರ್ಯಾಸವೂ ಆದ ಶಬ್ದಗಳನ್ನು ಮಾತ್ರವೇ ಇಲ್ಲಿ ಕೊಟ್ಟಿರುವುದು. ಉಳಿದ ಭಾಗಗಳನ್ನು ವಾಚಕರೇ ದಯೆಯಿಟ್ಟು ಸರಿಪಡಿಸಿಕೊಂಡು ಓದಬೇಕು ಮುಂದಿನ ಮುದ್ರಣದಲ್ಲಿ ಅಂದವಾಗಿಯೂ ಶುದ್ಧವಾಗಿಯೂ ಮುದ್ರಿಸಲಾದೀತು. ಸಂ|| ಕ. ಸಂ.

